ಸೇವಾಪುಷ್ಪ ಗ್ರಂಥಮಾಲೆಯ ೫ನೆಯ ಅರಳು

ಶೂರ

# ಸುಭಾಸ ಚಂದ್ರ ಬೋಸ



ಪಾಟೀಲ ಕಲ್ಲನಗೌಡರು, ಬಿ.



ಡಿಸೆಂಬರ ೧೯೩೭  ಬೆಲೆ ೧೨ ಆಣೆ



## Fore-word

If we leave aside the romantic figure of Pandit Jawaharlal Nehru, nobody else has attained that mystical and heroic splendour as Babu Subhas Chandra Bose. He is almost a myth. He has dazzled and attracted the youthful mind like a comet. He has held a place of his own in the Indian Arena, and in the heart of every patriot he has made a shrine for himself. There are many today in India

who can lay claim to the great sacrifices they have made in the country's cause. But few perhaps have to equal Subhas Bose's unique claims.

He was a very young man when he answered the call of the country. In some the stirring is slow and cautious. But in our hero, it was sudden, almost violent. His subsequent career was almost of tearing speed. The country caught a glimpse of this brave young man in a shining armour of dauntless courage and with the plume of defiance flying high. He knew no fears, no doubts, his path was a straight road to him. He sped along it, leaping over boulders, sweeping across desert sands, splashing through waters, pushing on, ever on the race. The echoes of his footsteps resounded from Himalayas to Cape Comorin, the reflection of his stealy spirit sparkled in every eye - and before we hardly learnt to lisp his name, we know we had been conquered.

The Congress leadership of to-day has more or less mounted the ladder leaning on the arm of the Mahatma. Many of them even to-day sail under his glory. Not so Subhas Bose. His spirit of independence has been almost exemplary, independent in ideology, thought and action alike, he has set the youth a noble example. Great though the leaders may be, greater though the need for discipline, still above all, real greatness lies in being

true to one's convictions and having the courage to stand by them, to openly confess and practise them. That is what this idol of Bengal has been and has taught us. There were several things on which he differed from the others, he even dared to differ from Gandhiji, an unchallenged leader in these days, whom none dare question. But Subhas Bose valued truth to cheap popularity, bought at the sacrifice of his beliefs and convictions. There are not a few amongst us to-day who pretend their adherence to truth and non-violence, all the time violating their own true beliefs and convictions and indulging in false expressions of faith when they have none in their hearts. They could learn the value of truth from our young leader, who risked his popularity, his position, and his future for truth, for his convictions. There was even a good deal of prejudice created against him in the minds of even some of our leaders and many were the injustices which Subhas Bose silently suffered. His future became almost dim at one time. But those who had faith in truth, knew he must triumph some day, and he has. He has emerged from that cruel fire, all the greater, finer and more resplendent. He has won success, admiration and homage even from his adversaries. The prejudices and suspicions have melted away before the fire of his strength and courage.

To few perhaps nature has been so unkind and ruthless as to Subhas Babu. She has been a natural ally of the Imperialist Power and ruthlessly persecuted him. That colossus of 1928 who proudly captained the Congress army at Calcutta, is today a frail, pale figure. But the fire has not diminished even by a degree, the courage lessened by an ounce. His speech at the Calcutta A. I. C. C. on the question of the political prisoners will long be remembered. The eyes shone like two bright orbs, the voice rose and fell in stern thunderous tones, the audience swayed deeply roused. Still it is heart-breaking to see what ravages nature has wrought on him. His interminable incarcerations, the persecution he was subjected, the long exile he suffered from, all have gone to shatter his health. But we hope he will soon be restored to complete health and be able to be amidst us for many years, to inspire, guide and help us to our Goal of Liberty.

Mangalore
29-11-1937

*Kamaladevi*

## (ಶ್ರೀ. ಕಮಲಾದೇವಿಯವರ ಇಂಗ್ಲೀಷ ಮುನ್ನುಡಿಯ ಭಾಷಾಂತರ)

ಪಂಡಿತ ಜವಾಹರಲಾಲ ನೆಹರುರವರಂಥ ರಸಿಕ ವ್ಯಕ್ತಿಯನ್ನೊಂದೆಡೆ ಬಿಟ್ಟರೆ ಬಾಬು ಸುಭಾಸಚಂದ್ರ ಬೋಸರಷ್ಟು ರಸಮಯ ರಹಸ್ಯ ವೀರ ವೈಭವವನ್ನು ಮತ್ತಾರೂ ಹೊಂದಿಲ್ಲ. ಇವರ ಜೀವನದ ಎಷ್ಟೋಭಾಗವು ಕಟ್ಟುಕಥೆಯೇ ಆಗಿದೆ; ಒಂದು ಐತಿಹ್ಯವಾಗಿದೆ. ಇವರು ಉಕ್ಕುವ ಪ್ರಾಯದ ಅಂತಶ್ಚಕ್ಷುಗಳನ್ನು ಧೂಮಕೇತುವಿನಂತೆ ಕುಕ್ಕಿಸಿ ತಮ್ಮೆಡೆಗೆ ಸೆಳೆದುಕೊಂಡಿದ್ದಾರೆ. ಭಾರತೀಯ ರಂಗಸ್ಥಳದಲ್ಲಿ ತಮ್ಮದೇ ಆದ ಒಂದು ಸ್ಥಾನವನ್ನು ಗಳಿಸಿಕೊಂಡಿರುವರಲ್ಲದೆ ಪ್ರತಿಯೊಬ್ಬ ಸ್ವದೇಶಾಭಿಮಾನಿಯ ಹೃದಯ ಮಂದಿರದ ಮೂರ್ತಿಯಾಗಿದ್ದಾರೆ. ತಾಯ್ನಾಡಿನ ಕಲ್ಯಾಣಕ್ಕಾಗಿ ಆತ್ಮಾರ್ಪಣಮಾಡಿದ ಗೌರವಕ್ಕೆ ಅರ್ಹರಾದವರು ಭಾರತವಲ್ಲನೇಕರಿದ್ದಾರೆ. ಆದರೆ ಬಾಬು ಸುಭಾಸಚಂದ್ರ ಬೋಸರ ಅಸಮಾನ ಹಕ್ಕುಗಳನ್ನು ಸರಿಗಟ್ಟುವವರು ವಿರಳ. ಅತ್ಯಂತ ತಾರುಣ್ಯಾವಸ್ಥೆಯಲ್ಲಿದ್ದಾಗಲೇ ಅವರು ತಾಯ್ನಾಡಿನ ಕರೆಗೆ ಉತ್ತರವಿತ್ತರು. ಕೆಲವರಲ್ಲಿ ಚೇತನೆಯು ಮುಂಜಾಗ್ರತೆಯುಳ್ಳದ್ದೂ ಮಂದಗತಿಯುಳ್ಳದ್ದೂ ಇರುವದು. ಆದರೆ ಅದರ ಸ್ವರೂಪವು ನಮ್ಮ ನಾಯಕನಲ್ಲಿ ಆಕಸ್ಮಿಕವೂ ಉಗ್ರವೂ ಆಗಿತ್ತು. ಅನಂತರದ ಇವರ ಜೀವನವು ವಾಯುವೇಗದಿಂದ ಮುಂದರಿಯಿತು. ಅಚಲ ಧೈರ್ಯದಿಂದ ಹೊಳೆಯುವ ಕವಚದಿಂದಲೂ ಉನ್ನತದಲ್ಲಿ ಹಾರಾಡುವ ಹುಮ್ಮಸದ ತುರಾಯಿಯಿಂದಲೂ ಸುಶೋಭಿತವಾಗಿರುವ ಈ ವೀರ ತರುಣನ ನಿಮಿಷನೋಟವನ್ನು ತಾಯ್ನಾಡು ಅನುಭವಿಸಿತು. ಭಯ ಸಂದೇಹಗಳಾವೂ ಇವರಿಗೆ ಗೊತ್ತಿರಲಿಲ್ಲ. ಇವರದು ಒಂದು ಸರಳ ರಾಜಮಾರ್ಗ. ದುಂಡಿ ಬಂಡೆಗಳ ಮೇಲೆ ನೆಗೆದು, ಮರುಭೂಮಿಗಳಮೇಲೆ ಸೆಳವಿನಿಂ ಸಾಗಿ, ಜಲದೊಳಗೆ ವಡಬಡಿಸಿ,ಎಡೆಬಿಡದೆ ಪಂತವನ್ನು ಮುಂವರಿಸಿ ದಾರಿಯುದ್ದಕ್ಕೊ ಶರ ವೇಗದಿಂದ ಧಾವಿಸಿದರು.

ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ಇವರ ಹೆಜ್ಜೆಗಳ ಪ್ರತಿಧ್ವನಿಯು ಅಪ್ಪಳಿಸಿತು. ಸುಳುಪಿಲ್ಲದೆ ಆವರಿಸುವ ಇವರ ಆತ್ಮದ ಪ್ರತಿಬಿಂಬವು ಪ್ರತಿ ನೇತ್ರದಲ್ಲಿ ಮಿಂಚಿತು. ನಾವಿನ್ನೂ ಇವರ ಹೆಸರು ತೊದಲಿಸಲು ಕಲಿಯುವ ಮುನ್ನವೆ ಹೇಗೋ ಇವರು ನಮ್ಮನ್ನು ಸೆಳೆದುಕೊಂಡದ್ದಾರೆಂದು ಅರಿತೆವು.

# X

ಇಂದಿನ ಕಾಂಗ್ರೆಸ ನಾಯಕತ್ವವು ತುಸು ಹೆಚ್ಚು ಕಡಿಮೆ ಮಹಾತ್ಮರ ಬಾಹುವಿನ ಮೇಲೆ ಒರಗಿರುವ ನಿಚ್ಚಣಿಕೆಯನ್ನೇರಿದೆ. ಅವರಲ್ಲನೇಕರು ಮಹಾತ್ಮರ ಕೀರ್ತಿಧ್ವಜದಡಿಯಲ್ಲ ಮುಂದರಿಯುತ್ತಿದ್ದಾರೆ. ಆದರೆ ಸುಭಾಸ ಬೋಸರು ಹಾಗಲ್ಲ. ಇವರ ಸ್ವಾತಂತ್ರ್ಯದ ಭಾವವು ಒಂದು ಮಾದರಿಯೇ ಆಗಿದೆ: ಇವರ ಮನೋಭಾವನೆ ಅನಧೀನಕ, ವಿಚಾರಗಳು ನಿರಾತಂಕ, ಕೃತಿ ಸ್ವತಂತ್ರ; ಹೀಗೆ ಇವರು ತರುಣರಿಗೊಂದು ಉದಾತ್ತ ದೃಷ್ಟಾಂತವನ್ನು ಮುಂದಿಟ್ಟಿದ್ದಾರೆ. ಮುಖಂಡರು ಎಷ್ಟೇ ಘನತೆಗೇರಿದವರಿದ್ದಾಗ್ಯೂ ಶಿಸ್ತಿನ ಕ್ರಮದ ಅವಶ್ಯಕತೆಯು ಇವರಿಗಿಂತ ಎಷ್ಟೇ ಹೆಚ್ಚಿನದಿದ್ದಾಗ್ಯೂ ಎಲ್ಲಕ್ಕಿಂತಲೂ ಹೆಚ್ಚಾಗಿ ಸ್ವಂತ ಮನವರಿಕೆಗಳನ್ನು ಅನುಸರಿಸಿ, ಅವುಗಳನ್ನು ಬಹಿರಂಗದಲ್ಲಿ ಸ್ಪಷ್ಟೀಕರಿಸಿ, ಸಾಧಿಸುವಷ್ಟು ಧೈರ್ಯವಂತನಾಗುವದರಲ್ಲಿ ನಿಜವಾದ ಹೆಚ್ಚಳವಿದೆ. ಈ ವಂಗಮೂರ್ತಿಯು ಇರುವುದಾದರೂ ಹೀಗೆಯೇ. ಮತ್ತು ಬೋಧಿಸುವದಾದರೂ ಇದೇ. ಅನೇಕ ವಿಷಯಗಳಲ್ಲಿ ಉಳಿದವರೊಡನೆ ಇವರ ಭಿನ್ನಾಭಿಪ್ರಾಯವಿದೆ; ಅಪರೋಧಿತ ನಾಯಕರಾದ ಗಾಂಧಿಜಿಯವರಿಂದಲೂ ಭಿನ್ನಾಭಿಪ್ರಾಯವನ್ನು ಸಾಧಿಸುವ ಸಾಹಸವನ್ನು, ಅವರನ್ನು ಎದುರಿಸಿ ಕೇಳುವ ಎದೆಗಾರಿಕೆಯು ಯಾರಲ್ಲಿಯೂ ಇಲ್ಲದಿರುವ ಈ ಕಾಲವಲ್ಲಿ ಇವರು ಮಾಡಿದರು. ಆದರೆ ಬೋಸರು ತಮ್ಮ ನಂಬುಗೆಯ ಮನವರಿಕೆಗಳನ್ನು ಅಗ್ಗದ ಜನಾನುರಾಗದ ಬೆಲೆಗೀಡುಮಾಡದೆ ಸತ್ಯಕ್ಕೆ ತಮ್ಮ ಜೀವನದಲ್ಲಿ ಉಚ್ಚಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ. ಶೂನ್ಯಹೃದಯರಾಗಿದ್ದರೂ ಶ್ರದ್ಧಾತ್ಮಕ ಹುಸಿನುಡಿಗಳಿಂದ ಆತ್ಮವನ್ನು ತೃಪ್ತಿಪಡಿಸಿಕೊಂಡು ತಮ್ಮ ನಿಜವಾದ ನಂಬುಗೆ ಮತ್ತು ಮನವರಿಕೆಗಳನ್ನು ಭಂಗಪಡಿಸಿ, ಸತ್ಯ ಮತ್ತು ಅಹಿಂಸೆಗಳ ಅವಲಂಬನೆಯ ನೆಪತೋರಿಸುವವರು ನಮ್ಮಲ್ಲಿ ಕಡಿಮೆ ಜನರಿಲ್ಲ. ಜನಾನುರಾಗವನ್ನೂ ತಮ್ಮ ಸ್ಥಾನ ಮಾನಗಳನ್ನೂ ಮತ್ತು ಭವಿಷ್ಯವನ್ನೂ ಸ್ವಂತದ ಮನವರಿಕೆಗಳಿಗಾಗಿಯೂ ಸತ್ಯಕ್ಕಾಗಿಯೂ ಗಂಡಾಂತರಕ್ಕೀಡುಮಾಡಿದ ನಮ್ಮ ತರುಣ ನಾಯಕರಿಂದ ಅಂಥವರು ಸತ್ಯದ ಮಹತ್ವವನ್ನು ಕಲಿತುಕೊಳ್ಳಬಹುದಾಗಿದೆ. ನಮ್ಮ ನಾಯಕರನೇಕರ ಮನಸಿನಲ್ಲಿ ಇವರ ವಿರೋಧವಾಗಿ ಅನೇಕ ಕುಕಲ್ಪನೆಗಳು ಬಿತ್ತಲ್ಪಟ್ಟಿದ್ದವು. ಮತ್ತು ಇದರಿಂದ ಸುಭಾಸ ಬೋಸರು ಸದ್ದಿಲ್ಲದೆ ಶಾಂತವಾಗಿ ಸಹಿಸಿದ ಅನ್ಯಾಯ

ಗಳಾವರೂ ಅಸ್ತಿತ್ವಸ್ಥಲ್ಲ. ಒಮ್ಮೆಯಂತೂ ಇವರ ಭವಿಷ್ಯವನ್ನು ಮಬ್ಬು ಮುಸುಕುವ ಕಾಲವೂ ಬಂದಿತ್ತು. ಆದರೆ ಸತ್ಯದಲ್ಲಿ ಭರವಸೆಇಟ್ಟ ಕೆಲವರು ಮಾತ್ರ ಇವರು ಒಂದಿಲ್ಲೊಂದು ದಿನ ವಿಜಯಶಾಲಿಗಳಾಗುವರೆಂದು ಅರಿತಿದ್ದರು. ಅದೀಗ ಫಲಿಸಿದೆ- ಆ ಕ್ರೂರಾಗ್ನಿಯಿಂದ ಇವರು ಮತ್ತಿಷ್ಟು ಶ್ರೇಷ್ಠರೂ ಉತ್ತಮರೂ ಮತ್ತು ಹೆಚ್ಚು ಪ್ರಕಾಶವಾನರೂ ಆಗಿ ಹೊರಬಿದ್ದಿದ್ದಾರೆ. ಎದುರಾಳುಗಳಿಂದಲೂ ಸಹ ಮೆಚ್ಚುಗೆ ಮತ್ತು ಸನ್ಮಾನಗಳನ್ನು ಪಡೆದು ಇವರು ವಿಜಯ ಹೊಂದಿರುವದಲ್ಲದೆ ಇವರ ಧೈರ್ಯಸಾಮರ್ಥ್ಯಗಳ ಜ್ವಾಲೆಯ ಮುಂದೆ ದುರ್ಭಾವನೆ ಸಂಶಯಗಳೆಲ್ಲ ಕರಗಿ ಹೋಗಿವೆ.

ಸುಭಾಸ ಬಾಬುಗಳ ಮೇಲೆ ತೋರಿಸಿದಷ್ಟು ನಿರ್ದಯೆ, ಕ್ರೌರ್ಯಗಳನ್ನು ನಿಸರ್ಗದೇವತೆಯು ಮತ್ತಾರ ಮೇಲೂ ತೋರಿಸಿರಲಾರಳು. ಅವಳು ಸಾಮ್ರಾಜ್ಯ ಸತ್ತೆಯ ಸ್ವಾಭಾವಿಕ ಸಹಾಯಕಳಾಗಿ ಇವರನ್ನು ಕ್ರೂರತನದಿಂದ ಹಿಂಸಿಸಿದ್ದಾಳೆ. ಕಲ್ಕತ್ತೆಯಲ್ಲಿ ರಾಷ್ಟ್ರೀಯ ಸೈನ್ಯದ ನಾಯಕತ್ವವನ್ನು ಅಭಿಮಾನದಿಂದ ವಹಿಸಿದ್ದ ೧೯೨೮ರ ಆ ಪ್ರಚಂಡ ಮೂರ್ತಿಯು ಇಂದು ಕೊರಗಿ ಕಳೆಗುಂದಿದೆ. ಆದರೆ ಇವರಲ್ಲಿದ್ದ ಜ್ವಾಲೆಯು ಎಳ್ಳಷ್ಟು ಕಡಿಮೆಯಾಗಿಲ್ಲ – ಧೈರ್ಯವು ಹಿಮ್ಮೆಟ್ಟಿಲ್ಲ. ಕಲ್ಕತ್ತೆಯಲ್ಲಿ ಕೂಡಿದ ಅ. ಭಾ. ಕಾಂಗ್ರೆಸ ಕಮಿಟಿಯಲ್ಲಿ ರಾಜಕೀಯ ಕೈದಿಗಳ ಬಗ್ಗೆ ಮಾಡಿದ ಇವರ ಭಾಷಣವು ಚಿರಾಯುವಾಗಿದೆ. ಆಗ ಇವರ ನೇತ್ರಗಳು ಕಾಂತಿಮಯ ಖಗೋಲದ್ವಯಗಳಂತೆ ಹೊಳೆಯುತ್ತ, ಧ್ವನಿಯು ಸ್ಥಿರಗರ್ಜನೆಯ ನುಡಿಗಳಿಂದ ಏರಿಳಿಯುತ್ತ, ಪ್ರೇಕ್ಷಕ ವೃಂದದ ಹೃದಯವನ್ನು ಉಕ್ಕೇರಿಸಿ ಹೊಯ್ದಾಡಿಸಿತು. ಆದಾಗ್ಯೂ ನಿಸರ್ಗದೇವತೆಯು ಇವರ ಮೇಲೆ ಮಾಡಿರುವ ದಾಳಿಯನ್ನು ನೋಡಿದರೆ ಎದೆಬಿರಿಯುವಂತಿದೆ. ಇವರ ಅನಂತವಾದ ಸೆರೆಮನೆವಾಸ, ಗುರಿ ಮಾಡಲ್ಪಟ್ಟ ಹಿಂಸೆ ಮತ್ತು ದೀರ್ಘವಾದ ದೇಶಭ್ರಷ್ಟತೆ, ಇವೆಲ್ಲವುಗಳೂ ಇವರ ಆರೋಗ್ಯವನ್ನು ಕೆಡಿಗೀಡುಮಾಡಿವೆ. ಆದರೆ ಇವರು ಬೇಗನೆ ಸಂಪೂರ್ಣ ಆರೋಗ್ಯ ಹೊಂದಲೆಂದೂ ನಮ್ಮ ಸ್ವಾತಂತ್ರ್ಯದ ಗುರಿಯನ್ನು ಮುಟ್ಟಿಸಲು ಸಹಾಯಕರೂ ಮಾರ್ಗದರ್ಶಕರೂ ಪ್ರೇರೇಪಕರೂ ಆಗಿ ನಮ್ಮೊಡನೆ ಬಹುಕಾಲವಿರಲು ಸಮರ್ಥರಾಗಲೆಂದು ಆಶಿಸುತ್ತೇವೆ.

ಮಂಗಳೂರು

ತಾ. ೨೮ - ೧೧ - ೧೯೩೭ **ಕಮಲಾದೇವಿ**

# ಪ್ರಸ್ತಾವನೆ

ಬಾಬು ಸುಭಾಸಚಂದ್ರರಂಥವರ ಬಗ್ಗೆ ಬರೆಯಲು ಅನನುಭವಿಕನಾದ ನನಗೆ ಅರ್ಹತೆಸಾಲದು. ಆದರೂ ಬರೆಯಲೇಬೇಕಾಗಿ ಬಂದುದಕ್ಕೆ ಕಾರಣಗಳುಂಟು: ಗಾಂಧಿ-ಅಯರ್ವಿನ್ನರ ಒಪ್ಪಂದವಾದನಂತರ ದೇಶದಲ್ಲೆಲ್ಲ ಅದರ ಯೋಗ್ಯಾಯೋಗ್ಯತೆಯ ವಿಷಯಕ್ಕೆ ಚರ್ಚೆಗಳೆದ್ದಿದ್ದವು. ವಿಶೇಷತಃ ತರುಣರು ಈ ಒಪ್ಪಂದವನ್ನು ಮನಸಾ ಮನ್ನಿಸುತ್ತಿರಲಿಲ್ಲ. ಚಿಕ್ಕ ಪುಟ್ಟ ಬಾಲಕರಲ್ಲಿ ಕೂಡ ಇದರ ವಿಷಯದಲ್ಲಿ ವಾಗ್ವಾದಗಳಾಗುತ್ತಿದ್ದವು. ಅಂಥದೊಂದು ವಾಗ್ವಾದ ಸಭೆಯಲ್ಲಿ ನಾನೊಮ್ಮೆ ಇರುವ ಪ್ರಸಂಗ ಬಂದಿತ್ತು. ಹಂಸಭಾವಿ ದುರ್ಗದ ಇಂಗ್ಲೀಷ ಶಾಲೆಯ ‘ಸ್ಟೂಡೆಂಟ್ಸ ಯೂನಿಯನ್’ದ ಬಾಲಕರೆಲ್ಲ ಸೇರಿ ಆವೇಶ ಉದ್ವೇಗಗಳಿಂದ ಚರ್ಚಿಸುತ್ತಿದ್ದುದನ್ನು ಕೇಳುತ್ತ ಆನಂದದಲ್ಲಿ ನನ್ನನ್ನೇ ಮರೆತೆನು. ಪುಸ್ತಕದಲ್ಲಿ ಓದಿದ ಪಾರ್ಲಿಮೆಂಟನ ಚರ್ಚೆಗಳ

ನೆಸಪಾಯಿತು. ಬಹು ಸಂಖ್ಯಾಕರು ಒಪ್ಪಂದವು ಒಳ್ಳೆಯದೆಂದೂ ತೀಕ್ಷ್ಣ ಬುದ್ಧಿಯ ಉಗ್ರಪಕ್ಷದ ಅಲ್ಪಸಂಖ್ಯಾಕರು ಅದಕ್ಕೆ ವಿರೋಧವಾಗಿಯೂ ಸಮರ್ಥಿಸುತ್ತಿದ್ದರು. ಮುಖ್ಯಾಧ್ಯಾಪಕನಾಗಿದ್ದೆನಾದರೂ ಬಾಲಕರೊಳಗೆ ಬಾಲಕನಾಗಿರುತ್ತಿದ್ದ ಮೂಲಕ ನನ್ನೆದುರಿಗೆ ಅವರ ವಿಚಾರಸ್ವಾತಂತ್ರ್ಯಕ್ಕೆ ಯಾವ ತಡೆಯೂ ಇರಲಿಲ್ಲ. ಮಾತಾಡುವವರೆಲ್ಲ ಮುಗಿದಮೇಲೆ ನಿಮ್ಮ ಮುಖಂಡರಾರೆಂದು ಅಲ್ಪಸಂಖ್ಯಾಕರ ಗುಂಪನ್ನು ಕೇಳಲು–**ಶೂರ ಸುಭಾಸಚಂದ್ರರೆಂದು** ತಟ್ಟನೆ ಉತ್ತರವು ದೊರೆಯಿತು. ಹಾಗಾದರೆ ಸುಭಾಸಚಂದ್ರರು ಯಾರು ?. ಅವರ ವಿಚಾರಗಳೇನು ? ಅವರನ್ನು ನೀವು ಮುಖಂಡರೆಂದು ಯಾಕೆ ಕರೆಯುವಿರಿ? ಮುಂತಾಗಿ ಅನೇಕ ಪ್ರಶ್ನೆಗಳನ್ನು ಕೇಳಲು ಅವುಗಳಿಗೆಲ್ಲ ಅವರಿಂದ ಸಮರ್ಪಕವಾದ ಉತ್ತರವು ದೊರೆಯಲಿಲ್ಲ. ನೀವೇ ಹೇಳಬೇಕೆಂದು ಅವರು ನನಗೆ ಆಗ್ರಹಮಾಡಿದರು. ಆಗ ನನಗೇನೂ ಗೊತ್ತಿರಲಿಲ್ಲ. ನಿಮಗೋಸುಗ ಕ್ರಮೇಣ ಹೇಳುವೆನೆಂದು ಅವರಿಗೆ ವಚನವಿತ್ತು ಆಗ ಪಾರಾದೆನು.

ಅಂದಿನಿಂದ ಸುಭಾಸಚಂದ್ರರ ವಿಷಯದಲ್ಲಿ ನನಗೆ ಅಭಿರುಚಿ ಹೆಚ್ಚಿತು. ಅವರ ವಿಷಯವು ಹೆಚ್ಚು ತಿಳಿದಂತೆಲ್ಲ ಅವರ ವಿಷಯಕ್ಕೆ ಪ್ರೇಮವು ಒಡಮೂಡಿತು. ಬರಬರುತ್ತ ಆ ಪ್ರೇಮವು ಶ್ರದ್ಧೆಯಾಗಿ ನೆಲೆಸಿತು. ಅವರ ವಿಚಾರಗಳಿಗೆಲ್ಲ ನನ್ನ ಅಂಧಶ್ರದ್ಧೆಯು ಒಪ್ಪಿಗೆ ಇರದಿದ್ದರೂ ಅವರ ವೈಯಕ್ತಿಕ ಜೀವನ, ಸಾಹಸ, ಧೈರ್ಯ, ಸ್ವಾರ್ಥತ್ಯಾಗಗಳು ನನ್ನ ಅಂತರಂಗವನ್ನು ಸೆಳೆದಿವೆ. ಅವರ ಪ್ರಜ್ವಲಿಸುವ ಉತ್ಸಾಹದ ಕಳೆಯ ಕಿಡಿಯು ಅವರನ್ನರಿತ ತರುಣರೆಲ್ಲರ ಅಂತರಂಗವನ್ನು ಸೇರಲಿಕ್ಕೆ ಹವಣಿಸುವಂತೆ ಎನಿಸುತ್ತದೆ. ಅವನ್ನರಿಯುವ ಸಾಹಸದ ಫಲವೇ ಈ ಚಿಕ್ಕ ಪುಸ್ತಕವೆಂದು ಹೇಳಬಹುದು. ತರುಣರು ತಾರುಣ್ಯದ ಮೂರ್ತಿಯನ್ನಲ್ಲದೆ ಇನ್ನಾರನ್ನು ಪೂಜಿಸಬೇಕು ?

ಸುಭಾಸಚಂದ್ರ ಬೋಸರ ಜೀವನ ಚರಿತ್ರೆಯು ಇನ್ನೂ ಪರಿಪಕ್ವವಾಗಿಲ್ಲ. ಇವರು ಇದೀಗ ಜೀವನದ ಮಧ್ಯರಂಗಕ್ಕೆ ಕಾಲಿಟ್ಟಿರುವರು. ಇವರ ರಾಷ್ಟ್ರೀಯ ಜೀವನವು ೧೯೨೧ನೆಯ ವರ್ಷದಿಂದ ಸುರುವಾಗಿದೆ. ಈಗಾಗಲೆ ಇವರು ತಮ್ಮ ಉಜ್ವಲ ಸ್ವದೇಶಾಭಿಮಾನದಿಂದಲೂ ಉನ್ನತ ಸ್ವಾರ್ಥತ್ಯಾಗದಿಂದಲೂ ದೇಶಬಾಂಧವರ ಹೊಗಳಿಕೆಗೆ ಪಾತ್ರರಾಗಿದ್ದಾರೆ. ಆಳರಸರ ದಬ್ಬಾಳಿಕೆಯನ್ನು ಇವರಷ್ಟು ಧೀರತನದಿಂದಲೂ ಶಾಂತತೆಯಿಂದಲೂ ಸಹಿಸಿದ ಇನ್ನೊಬ್ಬ ವೀರನು ಸಿಗಲಾರನು. ಇದರಿಂದ ಇವರು ನಾಡಿನ ತರುಣರ

ಅಂತಃಕರಣವನ್ನೆಲ್ಲ ತಮ್ಮೆಡೆಗೆ ಆಕರ್ಷಿಸಿಕೊಂಡಿದ್ದಾರೆ. ಇವರ ಸ್ವಾತಂತ್ರ್ಯದ ಮಂತ್ರಘೋಷವು ಆಸೇತುಹಿಮಾಚಲ ಎಲ್ಲರ ಕಿವಿಗಳನ್ನು ಗಡಚಿಕ್ಕಿಸಿದೆ. ಇವರ ಸಿಂಹಗರ್ಜನೆಯು ಮಲಗಿದ ವೀರಕೇಸರಿಗಳನ್ನೆಲ್ಲ ಹೊಡೆದೆಬ್ಬಿಸಿದೆ. ಇಂಥ ಪುತ್ರರನ್ನು ಹೆತ್ತ ಭಾರತಾಂಬೆಯೇ ಧನ್ಯಳು !

'ಬಂಗಾಲದ ಹುಲಿ'ಯಾಗಿದ್ದ ದೇಶಬಂಧು ಚಿತ್ತರಂಜನ ದಾಸರವರ ಕವಚವು ನಮ್ಮ ತರುಣವೀರ ಸುಭಾಸಚಂದ್ರರ ಪಾಲಿಗೆ ಬಂದಿದೆ ಎನ್ನಲಿಕ್ಕೆ ಅಡ್ಡಿ ಇಲ್ಲ. ದೇಶಬಂಧುಗಳ ಮರಣ ಸಮಯದಲ್ಲಿ ಈ ದೇಶಾಭಿಮಾನಿ ಯುವರಾಜರು ಅವರ ಬಳಿಯಲ್ಲಿರುವ ಸುಯೋಗವಿರಲಿಲ್ಲ. ಗಡಿಯಾಚೆಯಲ್ಲಿರುವ ದೂರಿನ ಮಂಡಾಲೆಯಲ್ಲಿ ಸೆರೆಮನೆವಾಸಿಗಳಾಗಿ ಕೊಳೆಯುತ್ತಿದ್ದರು. ಆದಾಗ್ಯೂ ದೇಶಬಂಧುಗಳು ಯೌವರಾಜ್ಯಾಭಿಷೇಕವನ್ನು ಇವರ ಹೆಸರಿನಿಂದ ಮುಡುಪಿಟ್ಟು ಹೋದಂತಾಗಿದೆ. ಬಂಗಾಲದ ನಂಬಿಗೆಯ ನಾಯಕತ್ವವು ಇವರ ಮೇಲೆ ಆಗಿನಿಂದಲೇ ಬಿದ್ದಿದೆ. ಭಾರತದ ನಾಯಕತ್ವವು ಇವರಿಗಾಗಿ ೭-೮ ವರ್ಷಗಳಿಂದ ಕಾದಿದೆ.

ಬೋಸರು ನವಯುಗದ ವೀರನಾಯಕರು. ಕಾಲ ಗತಿ ಕ್ರಮದ ಈ ಅವಧಿಯಲ್ಲ ಇವರಂಥ ಧೀರರ ಅವಶ್ಯಕತೆಯು ವಿಶೇಷವಿರುವದು. ನಿಜವಾಗಿಯೂ ಪಂಡಿತ ಜವಾಹರಲಾಲರೊಬ್ಬರನ್ನುಳಿದು ಇವರಷ್ಟು ಜನತಾ ಪ್ರೀತಿ ಪಾತ್ರರೂ ಸನ್ಮಾನಿತರೂ ಧನ್ಯವಾದಗಳಿಗೆ ಅರ್ಹರೂ ಆದ ತರುಣರು ಮತ್ತೊಬ್ಬರಿಲ್ಲವೆಂದು ಹೇಳಬಹುದು.

ಸುಭಾಸಚಂದ್ರರ ಪ್ರತಿಷ್ಠೆ ಮತ್ತು ಪ್ರಸಿದ್ಧಿಯುಗುಟ್ಟು ಇವರು ಕಲ್ಪಿಸಿದ ತಾಯ್ನಾಡಿನ ಆದರ್ಶದಲ್ಲಿದೆ. ಇವರು ಭಾರತದ ತರುಣರ ಶಾಶ್ವತ ಪ್ರತಿನಿಧಿ ಮೂರ್ತಿಗಳಾಗಿರುವರಲ್ಲದೆ ಇವರ ಆದರ್ಶವಾದವು ಕಷ್ಟಸಹನ, ತ್ಯಾಗಗಳೆಂಬ ಅಗ್ನಿಪರೀಕ್ಷೆಗಳಿಂದ ಮತ್ತಿಷ್ಟು ಪ್ರಜ್ವಲಿತವಾಗಿ ಪ್ರಕಟವಾಗಿವೆ.

ಈ ಚಿಕ್ಕ ಪುಸ್ತಕವು ಅಪೂರ್ಣವೆಂದು ಬೇರೆ ಹೇಳಬೇಕಾಗಿಲ್ಲ. ಇದೊಂದು ದಿವ್ಯಜೀವನದ ಅಪೂರ್ಣಾಂಶವುಮಾತ್ರ. ಇದುಹಾಗಿರಲೇಬೇಕಾಗಿದೆ. ಜೀವನದ ಹೋರಾಟದಲ್ಲಿ ಇದೀಗ ದಟ್ಟಡಿ ಇಟ್ಟ ವೀರನ ಚರಿತೆಯು ಅಪೂರ್ಣವಾಗಿರುವುದೇ ಸರಿ. ಇವರು "ಸ್ವಾತಂತ್ರ್ಯಸೈನಿಕ" ಜೀವನದ ಬೆಳಗಿನ ಕವಾಯತವನ್ನು ಈಗ ಒಳ್ಳೇ ಭರದಿಂದ ನಡೆಯಿಸಿದ್ದಾರೆ. ಇಂಥ ಚರಿತ್ರೆಯು ತುಣುಕು ಮಿಣುಕಾಗಿದ್ದರೂ ಅದು ಚೊಕ್ಕ ಚಿನ್ನವೆಂಬುವನ್ನು ಮಾತ್ರ

ಮರೆಯಲಾಗದು. ದೇಶಬಾಂಧವರಿಗೆಲ್ಲ ಅದರಲ್ಲಿಯೂ ತರುಣ ಪೀಳಿಗೆಗೆಲ್ಲ ಇವರ ಚರಿತ್ರೆಯು ಆದರ್ಶಪಾಠದಂತಿದೆಯೆಂಬುದು ವಾಚಕರಿಗೆ ಎನಿಸದಿರ ಲಾರದು. ಇಷ್ಟಾದರೆ ನನ್ನ ಶ್ರಮಕ್ಕೆ ಫಲ ದೊರೆಯಿತೆಂದು ಭಾವಿಸುವೆ.

ಈ ಚಿಕ್ಕ ಪುಸ್ತಕವನ್ನು ತಯಾರಿಸುವದರಲ್ಲಿ ಪ್ರೊ॥ ಭಾಸಚಂದ್ರ ರೇ ಇವರು ಕೆಲವುಟ್ಟಿಗೆ ಆಧಾರವಾಗಿದ್ದಾರೆ. ಚರಿತ್ರನಾಯಕರು ತಮ್ಮ ಸ್ವಂತ ಅಕ್ಷರದಿಂದ ತಮ್ಮ ಜೀವನದ ತಿರುಳನ್ನು ಬರೆದುಕೊಟ್ಟದ್ದಲ್ಲದೆ ಮಾತಾ ಪಿತೃಗಳ ಫೋಟೋಗಳನ್ನೂ ಆಶೀರ್ವಾದಗಳನ್ನೂ ಕಳಿಸಿ ನನ್ನನ್ನು ಧನ್ಯನ ನ್ನಾಗಿ ಮಾಡಿದ್ದಾರೆ. ಶ್ರೀಮತಿ ಕಮಲಾದೇವಿಯವರು ತಮ್ಮ ಕಾರ್ಯ ಬಾಹುಲ್ಯದಲ್ಲಿಯೂ ನನ್ನ ವಿನಂತಿಯನ್ನು ಮಾನ್ಯಮಾಡಿ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಅಲ್ಲದೆ ನನ್ನ ಅನೇಕ ಗೆಳೆಯರ ಶ್ರಮವಿಲ್ಲದೆ ಈ ಪುಸ್ತಕವು ಹೊರಬೀಳುತ್ತಿರಲಿಲ್ಲ. ಅದಕ್ಕಾಗಿ ಅವರಿಗೆಲ್ಲ ನಾನು ತುಂಬಾ ಕೃತಜ್ಞನಾಗಿದ್ದೇನೆ. ಸಕಾಲಕ್ಕೆ ಶ್ರಮವಹಿಸಿ ಮುದ್ರಣ ಮಾಡಿಕೊಟ್ಟ ತೋಂಟದಾರ್ಯ ಪ್ರೆಸ್ಸಿನವರಿಗೂ ನಾನು ಋಣಿಯಾಗಿದ್ದೇನೆ. ಮತ್ತು ಕಳೆದ ಸತ್ಯಾಗ್ರಹದಲ್ಲ ಮನೆ ಜಪ್ತಾದ ಕಾಲಕ್ಕೂ ನಾನು ಸೆರೆಮನೆಯ ಲ್ಲಿದ್ದಾಗಲೂ ಈ ಪುಸ್ತಕದ ಹಸ್ತಾಕ್ಷರ ಪ್ರತಿಯು ಕೆಲವಂಶಗಳು ಈ ಪ್ರಸ್ತಾವನೆ ಮೊದಲು ಮಾಡಿಕೊಂಡು ಪೋಲೀಸರ ದಬ್ಬಾಳಿಕೆಗೆ ತುತ್ತಾಗು ತ್ತಲೂ ಕೆಲವಂಶಗಳು ಮನೆಯಿಂದ ಮನೆಗೆ ಬೆಕ್ಕಿನಂತೆ ಅಲೆದೂ ಕೊನೆಗೆ ಹೇಗೋ ೧೯೩೧ರಿಂದ ಇಲ್ಲಿಯವರೆಗೆ ಪಾರಾಗಿ ಬಂದು ಸಂಗ್ರಹಿಸದ ಈ ವಿಷಯುಗಳು ಬೆಳೆದು ಒಮ್ಮೆ ಬೆಳಕನ್ನು ಕಾಣುವ ಕಾಲವನ್ನು ಒದಗಿಸಿ ಕೊಟ್ಟ ಜಗದಾತ್ಮನಿಗೆ ನನ್ನ ಅನಂತ ವಂದನೆಗಳು.

ಕಾಕೋಳ

**ಕಲ್ಲನಗೌಡ ಪಾಟೀಲ**

ತಾ. ೧೨-೧೨-೧೯೩೭

# ಅನುಕ್ರಮಣಿಕೆ







# ಶೂರ
# ಸುಭಾಸಚಂದ್ರ ಬೋಸ

## ೧. ಬಾಲ್ಯ ಮತ್ತು ವಿದ್ಯಾಭ್ಯಾಸ

**ಸು**ಭಾಸಚಂದ್ರ ಬೋಸರು ಕ್ರಿ. ಶ. ೧೮೯೭ ರಲ್ಲಿ ಜನ್ಮತಾಳಿದರು. ಇವರ ಪೂರ್ವಜರ ಮನೆಯು '೨೪ ಪರಗಣೆ' ಗಳಲ್ಲಿದ್ದ ಕೊಡಾಲಿಯಾ ಎಂಬಲ್ಲಿ ಈಗಲೂ ಇದೆ. ಇವರ ತಂದೆಯವರ ಹೆಸರು ಶ್ರೀ ರಾಯ ಜಾನಕಿನಾಥ ಬೋಸ್ ಬಹದ್ದೂರರೆಂದು. ಅವರು ೧೯೩[illegible] ನೆಯ ಇಸ್ವಿಯ ಡಿಶಂಬರ ೨ ನೆಯ ತಾರೀಖಿನ ದಿವಸ ದಿವಂಗತರಾದರು. ಅವರು ಒಳ್ಳೇ ಪ್ರತಿಷ್ಠಿತರಾದ ಮತ್ತು ಸುಸಂಸ್ಕೃತರಾದ ಸಭ್ಯಗೃಹಸ್ಥರಾಗಿದ್ದರು. ಓರಿಸಾ ಪ್ರಾಂತದ ಕಟಕದಲ್ಲಿ ಎಷ್ಟೋ ವರ್ಷಗಳವರೆಗೆ ಅವರು ಸರಕಾರೀ ವಕಾಲತ್ತನ್ನು ವಹಿಸಿದ್ದರು. ಶ್ರೀ. ಜಾನಕೀನಾಥ ಬೋಸರಿಗೆ ಎಂಟು ಮಂದಿ ಮಕ್ಕಳು. ಅವರಲ್ಲಿ ಕಲ್ಕತ್ತೆಯ ಪ್ರಮುಖ ವಕೀಲರೂ, ಕಟ್ಟಾಸ್ವರಾಜ್ಯ

ವಾದಿಗಳೂ ಆದ ಶರತ್‌ಚಂದ್ರ ಬೋಸರು ಮತ್ತು ಸುಪ್ರಸಿದ್ಧ ಡಾಕ್ಟರರಾದ ಸುನೀಲಚಂದ್ರ ಬೋಸರೂ ( ಎಮ್. ಡಿ. ) ಬಹಳ ಪ್ರಖ್ಯಾತಿಹೊಂದಿದ್ದಾರೆ. ಬ್ಯಾ. ಸತೀಶಚಂದ್ರರೂ ಮತ್ತು ಶೈಲೇಶಚಂದ್ರರೂ ಪ್ರಸಿದ್ಧರಾಗಿದ್ದಾರೆ. ತಮ್ಮ ಮಕ್ಕಳಿಗೆ ಉಚ್ಚ ತರಗತಿಯ ಶಿಕ್ಷಣವನ್ನು ಕೊಡಿಸುವದರಲ್ಲಿ ರಾಯ ಬಹದ್ದೂರರು ಎಳ್ಳಷ್ಟೂ ಹಿಂಜರಿಯಲಿಲ್ಲ. ಅಭ್ಯಾಸಪೂರ್ತಿಗಾಗಿ ಎಲ್ಲರನ್ನೂ ಯುರೋಪಕ್ಕೆ ಕಳಿಸುವ ಶ್ರಮವನ್ನು ಆನಂದದಿಂದ ವಹಿಸಿದರು.

ಸುಭಾಸಚಂದ್ರ ಬೋಸರ ತಾಯಿಯವರು ಒಳ್ಳೇ ದಾನಶೂರರು. ಅವರಲ್ಲಿ ಮೃದು ಸ್ವಭಾವವೂ ಧಾರ್ಮಿಕ ಭಾವನೆಯೂ ಸಹಜವಾಗಿ ನೆಲೆಗೊಂಡಿವೆ. ತಾಯಿಯ ಉಜ್ವಲವಾದ ಧಾರ್ಮಿಕ ಭಾವನೆಗಳ ಪರಿಣಾಮವು ಈ ನಮ್ಮ ಅಸದೃಶ ವೀರಬಾಲನಮೇಲೆ ಆಗದೆ ಉಳಿಯಲಿಲ್ಲ. ಸುಭಾಸಚಂದ್ರರ ಧಾರ್ಮಿಕ ಗ್ರಹಣಶಕ್ತಿಗೆ ಬಹಳಮಟ್ಟಿಗೆ ಅವರ ತಾಯಿಯ ಕೋಮಲ ಸ್ವಭಾವವೇ ತಳಗಲ್ಲು.

ಬೋಸರು ಕ್ರಿ. ಶ. ೧೯೧೩ ರಲ್ಲಿ ಕಟಕದಲ್ಲಿಯೇ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇವರು ಇಡೀ ವಿಶ್ವವಿದ್ಯಾಲಯದಲ್ಲಿ ಎರಡನೆಯ ತರಗತಿಯಲ್ಲಿ ಹೆಸರುಪಡೆದರು. ಆ ಕಾಲಕ್ಕೆ ಕೂಡ ಇವರು 'ಪುಸ್ತಕದ ಹುಳ' (Book-worm)ವಾಗಿರಲಿಲ್ಲ. ತಮ್ಮ ವೇಳೆಯ ಬಹು ಭಾಗವನ್ನು ಬಡವರ ಸೇವೆಯಲ್ಲಿಯೂ ಬೇನೆಯವರ ಶುಶ್ರೂಷೆಯಲ್ಲಿಯೂ ಕಳೆಯುತ್ತಿದ್ದರು. ಕಷ್ಟದೊಳಗಿದ್ದವರನ್ನು ಪಾರುಮಾಡುವ ಪ್ರಸಂಗವನ್ನು ಇವರು ಎಂದೂ ವ್ಯರ್ಥ ಹೋಗಗೊಡುತ್ತಿದ್ದಿಲ್ಲ. ರಾಮಕೃಷ್ಣ ಕಥಾಸಾರ ಮೊದಲಾದ ಎಷ್ಟೋ ಧಾರ್ಮಿಕ ಗ್ರಂಥಗಳನ್ನೋದಿ ತಾಯಿಯ ಸಂಗಡ ಅವುಗಳ ವಿಷಯಕ್ಕೆ ಹಗಲೆಲ್ಲ ಚರ್ಚಿಸುತ್ತಿದ್ದರು.

ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಯಾದನಂತರ ಇವರು ಕಲ್ಕತ್ತೆಯ ಪ್ರೆಸಿಡೆನ್ಸಿ ಕಾಲೇಜನ್ನು ಸೇರಿದರು. ಇಂಟರ ಕ್ಲಾಸಿನಲ್ಲಿ ಓದುತ್ತಿದ್ದಾಗ ಇವರ ಒಲವು ವೈರಾಗ್ಯ ಜೀವನದ ಕಡೆಗೆ ಬಲವಾಗಿ ಸೆಳೆಯಿತು. ಆಗ ಯಾರಿಗೂ ತಿಳಿಯದಂತೆ ಮನೆಯಿಂದ ಹೊರಬಿದ್ದು ಗುರುಗಳನ್ನು ಹುಡುಕ ಹತ್ತಿದರು. ಹರಿದ್ವಾರ, ಕಾಶಿ, ವೃಂದಾವನ ಮುಂತಾದ ಅನೇಕ ಪವಿತ್ರ ಸ್ಥಾನಗಳನ್ನು ಸಂದರ್ಶಿಸಿದರು. ಅನೇಕ ಸಾಧು-ಸಂತರ ಸಂಗ ಬೆಳೆಸಿದರು. ಆದರೆ ಆ ಸಾಧು-ಸಂತರ ಆಂತರಿಕ ಜೀವನ ಕ್ರಮಗಳು ಇವರ ಮನಸ್ಸನ್ನು

ಎಳೆಯಲಿಲ್ಲ. ಅವರು ಒಳಗೊಳಗೆ ಚಕ್ಕಂದದ ಚಿನ್ನಾಟದಲ್ಲಿಯೇ ಮಗ್ನರಾಗಿರುವದನ್ನು ಕಂಡು ಸುಭಾಸಚಂದ್ರರ ಜೀವವು ಹೇಸಿತು. ಉಪಾಯಗಾಣದೆ ಹಿಂದಿರುಗಿ ಬಂದು ಕೊನೆಗೆ ಮನೆಯನ್ನು ಸೇರಿ ತಾಯಿತಂದೆಗಳನ್ನು ಕೂಡಿಕೊಂಡರು.

ಮರಳಿ ಬಂದಮೇಲೆ ಪುನಃ ಇಂಟರ ಕ್ಲಾಸಿನ ಅಭ್ಯಾಸವನ್ನೇ ಇವರು ಸುರುವು ಮಾಡಬೇಕಾಯಿತು. ತಮ್ಮ ಬುದ್ಧಿಕೌಶಲ್ಯದಿಂದ ಈ ಪರೀಕ್ಷೆಯಲ್ಲಿ ಒಂದನೆಯ ತರಗತಿಯಲ್ಲಿ ಬಹುಮಾನದೊಡನೆ ತೇರ್ಗಡೆಹೊಂದಿದರು. ಮುಂದೆ ಬಿ. ಎ. ಪರೀಕ್ಷೆಗೆ 'ತತ್ವಜ್ಞಾನ ಶಾಸ್ತ್ರ' (Philosophy) ವನ್ನು ತಮ್ಮ ಐಚ್ಛಿಕ ವಿಷಯವನ್ನಾಗಿ ಆರಿಸಿಕೊಂಡು 'ಆನರ್ಸ' (Honours) ಅಭ್ಯಾಸಕ್ರಮವನ್ನೇ ಸಾಗಿಸಿದರು. ಈ ಹೊತ್ತಿಗೆ ಆ ಕಾಲೇಜದಲ್ಲಿ ಒಂದು ವಿಶೇಷ ಸಂಗತಿಯು ಜರುಗಿತು. ಅದರಲ್ಲಿ ಸುಭಾಸಚಂದ್ರರು ಕಾಲೇಜದಿಂದ ಹೊರಗೆ ತಳ್ಳಲ್ಪಟ್ಟರು. ಅಲ್ಲಿಯ ಪ್ರೊಫೆಸರರಾಗಿದ್ದ (ಮುಂದೆ ಡಿ. ಪಿ. ಆಯ್. ಆದ) ಎಫ್. ಓಟನ್ನರನ್ನು ಅವಮಾನಗೊಳಿಸಿದರೆಂಬುದೇ ಇವರ ಮೇಲಿನ ಆರೋಪ. ಕಾರಣಾಂತರದಿಂದ ಆ ಪ್ರೊಫೆಸರರು ಕೆಲವು ವಿದ್ಯಾರ್ಥಿಗಳ ಅಂತಃಕರಣವನ್ನು ನೋಯಿಸಿದ್ದೇ ಸುಭಾಸರ ಸಿಟ್ಟಿನ ಮೂಲವಾಗಿ, ಆಗಿನ 'ವಿದ್ಯಾರ್ಥಿಗಳ ಸಂಪಿ'ಗೆ ಜವಾಬದಾರರಾಗಿ ಇವರು ಕೆಲಸ ನಡೆಯಿಸಿದ್ದರು. ಈ ಪ್ರಕಾರದ ಗೊಂದಲದಲ್ಲಿ ಸಿಕ್ಕು ಕೆಲಕಾಲ ಇವರು ತಮ್ಮ ವಿದ್ಯಾಭ್ಯಾಸಕ್ಕೆ ನೀರು ಬಿಡಬೇಕಾಗಿ ಬಂದಿತು.

ಮುಂದೆ ಎರಡು ವರ್ಷಗಳ ನಂತರ ಅಂದರೆ ೧೯೧೭ ರಲ್ಲಿ ಸರ್ ಆಶುತೋಷ ಮೂಕರ್ಜಿಯವರ ಸಹಾಯದಿಂದ ವಿಶ್ವವಿದ್ಯಾಲಯದಲ್ಲಿ ತಮ್ಮ ಓದನ್ನು ಮುಂದೆ ಸಾಗಿಸಲು ಸುಭಾಸರಿಗೆ ಅಪ್ಪಣೆ ದೊರೆಯಿತು. 'ಸ್ಕಾಟಿಶ್‌ಚರ್ಚ' ಕಾಲೇಜದಲ್ಲಿ ಹೆಸರು ಹಚ್ಚಿಸಿ ಮೂಲೆಗುಂಪಾದ ತಮ್ಮ ಅಭ್ಯಾಸವನ್ನು ಪುನಃ ಸುರುವು ಮಾಡಿದರು. 'ತತ್ವಜ್ಞಾನಶಾಸ್ತ್ರದ ಆನರ್ಸ್' (Philosophy Honours) ದಲ್ಲಿ ಮೊದಲನೆಯ ತರಗತಿಯ ಬಿ. ಎ. ಡಿಗ್ರಿಯನ್ನು ಪಡೆದರು. ಒಡನೆಯೆ ೧೯೧೯ ರ ಅಂತ್ಯಕ್ಕೆ ಇಂಡಿಯನ್ ಸಿವ್ಹಿಲ್ ಸರ್ವಿಸ್ (I. C. S.) ಪರೀಕ್ಷೆಗಾಗಿ ಇಂಗ್ಲಂಡಕ್ಕೆ ಪ್ರಯಾಣ ಬೆಳೆಸಿ ಅಲ್ಲಿಯ ಕಾಂಪಿಟೇಟಿವ್ಹ (Competitive) ಪರೀಕ್ಷೆಗೆ ಸರಿಯಾಗಿ ಹಾಜರಾದರು. ಮೊದಮೊದಲು ಆ ಪರೀಕ್ಷೆಯ ಪರಿಣಾಮದ ವಿಷಯಕ್ಕೆ

ಸುಭಾಸರಿಗೆ ಅದೆಷ್ಟೋ ಭಯ; ಆದರೂ ಕಡೆಗೆ ಆ ಪರೀಕ್ಷೆಯಲ್ಲಿಯೂ ಮೇಲಿನ ತರಗತಿ ಪಡೆದೇ ಜಯಹೊಂದಿದರು. ಇದಲ್ಲದೆ ಮಾನಸಶಾಸ್ತ್ರ ಮತ್ತು ನೈತಿಕಶಾಸ್ತ್ರಗಳಲ್ಲಿ ಕೆಂಬ್ರಿಜ್ ವಿಶ್ವವಿದ್ಯಾಲಯದ ಬಿ. ಎ. ಪದವಿಯನ್ನು ಟ್ರೈಪಾಸ (Tripos) ಬಹುಮಾನದೊಡನೆ ಹೊಂದಿದರು. ಹೀಗೆ ಇಂಗ್ಲಂಡದಿಂದ ಪ್ರಖ್ಯಾತ ಬಿರುದಾವಳಿಗಳನ್ನೂ ಬಹುಮಾನಗಳನ್ನೂ ಪಡೆದುಕೊಂಡು ಮಾತೃಭೂಮಿಗೆ ಮರಳಿ ಬಂದರು.

ಆಗ "ಸ್ವರ್ಗದಿಂದ ಇಳಿದು ಬಂದ ಸಿವ್ಹಿಲ್ ಸರ್ವಿಸ್" (Heaven Born Civil Service) ಅಧಿಕಾರವು ತನ್ನ ಆಡಂಬರದಿಂದ ಮನಮೋಹಕವಾಗಿ ಇವರನ್ನೆದುರುಗೊಳ್ಳಲು ಇವರ ಮುಂದೆ ಕಾದುನಿಂತಿತ್ತು. ಅದರ ಸೆಳೆತಕ್ಕೆ ಬೀಳದವರನ್ನು ಕಾಣುವದು ಅತಿವಿರಳ—ಅದೇಕೆ! ಇಲ್ಲವೆಂದರೂ ಅಡ್ಡಿ ಇಲ್ಲ. ಆದರೆ ರಾಜವೈಭವ ಠೀವಿಗಳೊಡನೆ ಮೆರೆಯುವ ಅಧಿಕಾರದ ಔತಣದೊಂದಿಗೆ ತಾಯ್ನಾಡಿನ ಬಂಧನದ ಬಳಲಿಕೆಯ ಆರ್ತಧ್ವನಿಯೂ ಇವರಿಗೆ ಕೇಳಿಸದಿರಲಿಲ್ಲ. ತಾಯ್ನಾಡಿನ ಬಂಧವಿಮೋಚನೆಯ ಕರೆಯೂ ಇವರನ್ನು ಸೆಳೆಯದಿರಲಿಲ್ಲ. ಈ ಎರಡು ಔತಣಗಳಲ್ಲಿ ಒಂದನ್ನು ಇವರು ಆರಿಸಿಕೊಳ್ಳಬೇಕಾಗಿ ಬಂದಿತು. ಇಂಥ ತೊಡಕಿನಲ್ಲಿ ಈ ವೀರನು ತಾಯ್ನಾಡಿನ ಆರ್ತಧ್ವನಿಗೆ ಕಿವಿಗೊಟ್ಟು ಮಾತೆಯ ಸೇವೆಗಾಗಿಯೇ ತನ್ನ ಜೀವನವನ್ನು ಮೀಸಲು ಮಾಡಲು ಮುಂದರಿದು ಬಂದದ್ದು ಅತ್ಯಂತ ಮಹತ್ವದ್ದಾಗಿದೆ. ಸಂಪದಧಿಕಾರಗಳನ್ನು ಎಡಗಾಲಿನಿಂದೊದ್ದು ಭಾರತಮಾತೆಯ ಸ್ವಾತಂತ್ರ್ಯಕ್ಕಾಗಿ ಹೋರಾಡಲು ವೀರಕಾಸಿಯನ್ನು ತೊಟ್ಟು, ಈ ವೀರನು ಅಂದು ತನ್ನ ಜೀವನಕ್ಕೆ ಹೊಸದೊಂದು ಹುಟ್ಟನ್ನು ಕಲ್ಪಿಸಿಕೊಂಡನು.

# ೨. ಅಸಹಕಾರ ಚಳವಳಿ ಮತ್ತು ಬೋಸರು

೧೯೨೦ ನೆಯ ಡಿಶಂಬರದಲ್ಲಿ ನಾಗಪುರದಲ್ಲಿ ಕೂಡಿದ ಕಾಂಗ್ರೆಸ್ ಅಧಿವೇಶನದಲ್ಲಿ 'ಅಸಹಕಾರ'ದ ಠರಾವು ಪಾಸಾಯಿತಷ್ಟೇ? ಇದು ಇಂದಿನ ಭಾರತದ ಇತಿಹಾಸದಲ್ಲಿ ಅತ್ಯಂತ ಮಹತ್ವದ ಸಂಗತಿಯೆಂದು ಬೇರೆ ಹೇಳಬೇಕಾಗಿಲ್ಲ. ಆ ಹೊತ್ತಿಗೆ ಬ್ರಿಟಿಶ್‌ರಾಜ್ಯದಲ್ಲಿ ಜನತೆಯು ನಂಬಗೆಯನ್ನು ಕಳೆದುಕೊಂಡಿದ್ದಿತು. 'ಯಾಚಕವೃತ್ತಿ' ಯನ್ನು ನಂಬುವ ರಾಜಕೀಯ ದಿನ ಗಳು ಹಳೆಯವಾಗಿದ್ದವು. 'ತಿರುಕನೀತಿ' ಯು ಹಿಂದಾಗಿಹೋದ ಮಾತಾಗಿತ್ತು. ದೀನಪ್ರಾರ್ಥನೆ, ದೀರ್ಘದಂಡ ನಮಸ್ಕಾರಗಳಿಂದ ಸ್ವರಾಜ್ಯ ಬೇಡುವದು ನಿಷ್ಪ್ರಯೋಜಕವೆಂದು ಮನಗಂಡ ಮಾತಾಗಿತ್ತು. ಜನರು ತಮ್ಮ ಕಾಲಮೇಲೆ ತಾವು ನಿಲ್ಲಲು ನಿರ್ಧರಿಸಿದರು. ಇಚ್ಛಾಶಕ್ತಿಯ ಬಲ ದಿಂದ ಸ್ವಾತಂತ್ರ್ಯವನ್ನು ಗಳಿಸಲು ಸಜ್ಜಾದರು. ಸ್ವಾರ್ಥತ್ಯಾಗ, ಕಷ್ಟ ಸಹನ, ಸ್ವಾವಲಂಬನಗಳ ಮಾರ್ಗದಿಂದ ಸಾಗಿ ಸ್ವಾತಂತ್ರ್ಯಸೂರ್ಯ ನನ್ನು ಎದುರುಗೊಳ್ಳಲು ಸಿದ್ಧರಾದರು. ಸ್ವತಂತ್ರಭಾರತ ರಾಜ್ಯಭಾರದ ರಥವನ್ನು ಹೂಡಿಹೊಡೆಯಲು ಟೊಂಕಕಟ್ಟಿ ಸಾಗಿದರು.

ಪಂಜಾಬದ ಅತ್ಯಾಚಾರ ಮತ್ತು ಖಿಲಾಫತದ ಅನ್ಯಾಯಗಳಿಂದ ದೇಶಬಾಂಧವರ ಹೃದಯಗಳೆಲ್ಲ ಬೆಂದು ನೊಂದಿದ್ದವು. ಸಪಾಟಾಗಿ ಸುಣ್ಣವನ್ನು ಬಳೆದು ಮೋರೆಯ ಮೇಲೆ ಕೈಯೆಳೆದ ಹಂಟರ ಕಮಿಟಿ ನಿರ್ಣಯಗಳೂ ವ್ಹಾಯಿಸ್‌ರಾಯರಾಗಿದ್ದ ಲಾರ್ಡ ಚೆಮ್ಸ್‌ಫರ್ಡ ಮತ್ತು ಪಂಜಾಬದ ಗವ್ಹರ್ನರರಾಗಿದ್ದ ಮಾಯ್ಕೆಲ್‌ಓಡ್ವಾಯರರ ಕೃತಿಗಳೂ ಮತ್ತು ಇವುಗಳನ್ನೆಲ್ಲ ಸ್ತುತಿಸಿದ ಸೆಕ್ರೆಟರಿ ಆಫ್ ಸ್ಟೇಟರಾಗಿದ್ದ ಮಾಂಟೆಗ್ಯೂರವರ ಬರೆಹಗಳೂ ಹುಣ್ಣಿನ ಮೇಲೆ ಬರೆಕೊಟ್ಟಂತೆ ಒಂದರಮೇಲೊಂದು ಬಂದು ಜನತೆಯನ್ನು ಕಂಗೆಡಿಸಹತ್ತಿದವು. ದೇಶದ ತುಂಬೆಲ್ಲ ಅಸಂತೋಷದ ನಿಟ್ಟುಸಿರಿನ ಬಿರುಗಾಳಿಯು ಬೀಸಹತ್ತಿತು. ಡಾ. ರವೀಂದ್ರನಾಥ ಠಾಕೂರರಂಥವರು ನಾಯಿಟಹುಡ್ (Knight-hood) ದಂಥ ಬಹುಮಾನದ ಪದವಿಗೆ ತಿಲಾಂಜಲಿಯನ್ನಿತ್ತರು. ವ್ಹಾಯಿಸರಾಯರ ಕಾರ್ಯನಿರ್ವಾಹಕ ಸಭೆಯವರಾದ ಸರ್ ಶಂಕರನ್ ನಾಯರರಂಥ ಮಂದಪಕ್ಷದವರು ಸಹ ಪಂಜಾಬದ ಅಮಾನುಷ ಅತ್ಯಾಚಾರಗಳನ್ನು ತೀವ್ರವಾಗಿ ಖಂಡಿಸಿದರು. ಅವು ಅಮಾನುಷವಾದವುಗಳೂ ("barbarous") ಸುಧಾರಿಸಿದ ಸರಕಾರಕ್ಕೆ ಅಪಮಾನಕಾರಕವಾದವುಗಳೂ ("Unbecoming of a civilized Government") ಎಂದು ಬಗೆದು ಅವುಗಳ ನಿಷೇಧಕ್ಕಾಗಿ ತಮ್ಮ ಅಧಿಕಾರಸ್ಥಾನಕ್ಕೆ ರಾಜಿನಾಮೆಯನ್ನಿತ್ತರು.

ಮಹಾತ್ಮಾ ಗಾಂಧಿಯವರ ಸ್ಫೂರ್ತಿದಾಯಕ ನೇತೃತ್ವದ ಕೆಳಗೆ ದೇಶಬಾಂಧವರೆಲ್ಲ ಒಮ್ಮೆಲೆ ತಲೆಯೆತ್ತಿದರು. ಸುವ್ಯವಸ್ಥಿತವಾದ 'ಅಸಹಕಾರ'ದ (Non-Co-operation) ಚಳವಳಿಯು ದೇಶದಲ್ಲೆಲ್ಲ ಹಬ್ಬಿಕೊಂಡಿತು. ವಕೀಲರು ವಕಾಲತ್ತಿಗೆ ಶರಣುಹೊಡೆದರು. ವಿದ್ಯಾರ್ಥಿಗಳು ಶಾಲೆ ಕಾಲೇಜುಗಳಿಗೆ ಕೈಮುಗಿದರು. ಸರಕಾರೀ ಪದವೀಧರರು ಪದವಿಗಳೆಗೆಲ್ಲ ತಿಲಾಂಜಲಿಯನ್ನಿತ್ತರು. ಜನರು ಕೋರ್ಟು ಕಚೇರಿಗಳನ್ನು ತ್ಯಜಿಸಿದರು. ನ್ಯಾಯವಿಚಾರಣೆಗಾಗಿ 'ಪಂಚಾಯತಿ' ಸಂಸ್ಥೆಗಳು ಅಲ್ಲಲ್ಲಿ ಸ್ಥಾಪಿತವಾದವು. ಪ್ರತಿಯೊಂದು ಮನೆಯಲ್ಲಿ ಕೈರಾಟೆಯ ಮಧುರಧ್ವನಿಯು ಕೇಳಬರಹತ್ತಿತು. ವಿಲಾಯತಿ ಮಾಲಿನ ಬಹಿಷ್ಕಾರವು ಒತ್ತಾಯದಿಂದ ಜನತೆಯಲ್ಲಿ ಹಬ್ಬಿತು. ಎಲ್ಲೆಡೆಯಲ್ಲಿಯೂ ಸ್ವಾಭಿಮಾನವು ಉಕ್ಕೇರಿ ಮೂರ್ತಸ್ವರೂಪವನ್ನು ತಾಳಲಾರಂಭಿಸಿತು.

ಇಲ್ಲಿ ಆ ಚಳವಳಿಯ ಪರಿಣಾಮದ ವಿಷಯಕ್ಕೆ ಚರ್ಚಿಸಬೇಕಾದುದಿಲ್ಲ. ಈ ಆಂದೋಲನವು ಮೊದಲನೆಯ ಮೆಟ್ಟಿನಲ್ಲಿದ್ದಾಗಲೆ ಹಿಂದುಸ್ತಾನ ಸರಕಾರದವರು ಆಗಿನ ವ್ಹಾಯಿಸರಾಯರಾಗಿದ್ದ ಲಾರ್ಡ ರೀಡಿಂಗರವರಿಗೆ ಕಾಂಗ್ರೆಸದವರೊಡನೆ ಒಪ್ಪಂದ ಮಾಡಿಕೊಳ್ಳಬೇಕಾಗಿ ಸೂಚಿಸಿದರು. ವ್ಹಾಯಿಸರಾಯರು ದುಂಡುಮೇಜಿನ ಪರಿಷತ್ತಿನಲ್ಲಿ ಎಲ್ಲ ಮುಖಂಡರನ್ನು ಕಾಣಬೇಕೆಂಬ ಇಚ್ಛೆಯನ್ನು ವ್ಯಕ್ತಮಾಡಿದರು. ಆಗ್ಗೆ ಕೆಲಸಗಾರರಲ್ಲಿ ಬಹುಸಂಖ್ಯಾಕರು ಮತ್ತು ನಾಯಕರು ಸೆರೆಮನೆಗಳಲ್ಲಿದ್ದುದರಿಂದ ಮಹಾತ್ಮಾಜಿಯವರು ಸರಕಾರದ ಈ ಬೇಡಿಕೆಯನ್ನು ಅಲ್ಲಗಳೆದರು.

ಆಗ ಬಂಗಾಲದಲ್ಲಿ ದೇಶಬಂಧು ಚಿತ್ತರಂಜನ ದಾಸರು ಅನಭಿಷಿಕ್ತ ರಾಜಾಧಿಪತಿಗಳಾಗಿದ್ದರು. ದೇಶಹಿತಕ್ಕಾಗಿ ಅವರು ಮಾಡಿದ ಅಪ್ರತಿಮ ಸ್ವಾರ್ಥತ್ಯಾಗವು ಅವರಿಗೆ 'ದೇಶಬಂಧು' ಎಂಬ ಬಿರುದನ್ನಿತ್ತು ಅವರ ಯಶಶ್ಚಂದ್ರಿಕೆಯ ಬೆಳಕನ್ನು ಅಜರಾಮರವಾಗುವಂತೆ ಮಾಡಿತು. ಆ ಮಹನೀಯರ ಕೂಗಿನ ಕಹಳೆ ಕೇಳಿದೊಡನೆಯೇ ಸಾವಿರಾರು ತರುಣರು ಶಾಲೆ ಕಾಲೇಜುಗಳನ್ನು ತ್ಯಜಿಸಿ ಅವರ ಧ್ವಜವನ್ನಾಶ್ರಯಿಸಿದರು. ದಿವ್ಯವಾದ ಭಾವೀ ಫಲಾಪೇಕ್ಷೆಗಳುಳ್ಳ ತರುಣರು ತಮ್ಮ ಬಿಸಿನೆತ್ತರವನ್ನು ಮಾತೃಭೂಮಿಗಾಗಿ ಸುರಿಸಲು ಮುಂದೆ ಬಂದರು. ಉಳಿದ ಆಲೋಚನೆಗಳನ್ನು ತಲೆಯಲ್ಲಿ ತುಂಬಿಕೊಂಡು, ಕಲ್ಪನಾರಾಜ್ಯದಲ್ಲಿ ಮೆರೆಯಲು ನಿಲ್ಲಲಿಲ್ಲ. ಜೀವನದ ಸುಸಮಯ ಸುಸಂಧಿಗಳ ಗಣಿತಹಾಕುತ್ತ ಅವರು ವೇಳೆಗಳೆಯಲಿಲ್ಲ. ಒಮ್ಮೆಲೇ ಕಾರ್ಯರಂಗದಲ್ಲಿ ಧುಮುಕಿ ಭಾರತಮಾತೆಗೆ ಕೀರ್ತಿತಂದರು.

ಹೀಗೆ ದೇಶದ ಆರ್ತಧ್ವನಿಯನ್ನು ಕೇಳಿ ಧಾವಿಸಿಬಂದ ತರುಣರಲ್ಲಿ ನಮ್ಮ ಚರಿತ್ರನಾಯಕರಾದ ಉಜ್ವಲ ಶೂರ ಸುಭಾಸಚಂದ್ರರೊಬ್ಬರು. ತಮ್ಮ ಆಯ್. ಸಿ. ಯಸ್. ದ ಜಾಗೆಗೆ ತಿಲಾಂಜಲಿಯನ್ನಿತ್ತು, ದೇಶಮಾತೆಯ ಪಾದಗಳಿಗೆಂದು ಮುಡುಪಾಗಿಟ್ಟ ರಕ್ತವನ್ನು ಸೂರೆಗೈಯಲು ಚಲ್ಲಾಟದಿಂದ ಜಿಗಿಯುತ್ತ 'ಅಸಹಕಾರ' ರಂಗವನ್ನು ಹೊಕ್ಕರು. ದೇಶಬಂಧು ದಾಸರ ಪ್ರೇಮ-ವಿಶ್ವಾಸಗಳ ಪ್ರಾತಿನಿಧ್ಯವು ಇಂಥವರ ಪಾಲಿಗೆ ಬಂದದ್ದು ಯೋಗ್ಯವೂ ಸ್ತುತ್ಯವೂ ಎಂದೆನಿಸದಿರಲಾರದು. ಮೊದಲು ಇವರು ೧೯೨೧ ನೆಯ ಮೇ ತಿಂಗಳಲ್ಲಿ ದೇಶಬಂಧು ದಾಸರಿಂದ ಸ್ಥಾಪಿಸಲ್ಪಟ್ಟ ರಾಷ್ಟ್ರೀಯ ಕಾಲೇಜದ ಪ್ರಿನ್ಸಿಪಾಲರಾದರು. ಆ ವೇಳೆ ರಾಷ್ಟ್ರೀಯ

ಸ್ವಯಂಸೈನಿಕರ ಮುಖ್ಯಾಧಿಕಾರವನ್ನು ವಹಿಸಿದರು. ೧೯೨೧ನೆಯ ಡಿಶಂಬರ ದಲ್ಲಿ ಆಳರಸರ ದಬ್ಬಾಳಿಕೆಗೆ ತುತ್ತಾಗಿ ಆರು ತಿಂಗಳು ಕಾಲ ಸೆರೆಮನೆಯ ವಾಸವನ್ನನುಭವಿಸಿದರು. ಇದೆಲ್ಲ ಆಗಿನ ಕಾಲದ ಬಂಗಾಲದ ಗವ್ಹರ್ನರು ಲಾರ್ಡ ಲೋನಾಲ್ಡಸೇ ಯವರ ಆಳಿಕೆಯಲ್ಲಿಯ ಅಭಿಮಾನಾಸ್ಪದವಾದ ಸಂಗ ತಿಯಾಯಿತು.

೧೯೨೨ ನೆಯ ಅಕ್ಟೋಬರದಲ್ಲಿ ಉತ್ತರ ಬಂಗಾಲದ ಮಹಾಪೂರದ (Flood) ಕಾಲಕ್ಕೆ ನಷ್ಟಹೊಂದಿದ ಸ್ಥಳಗಳಲ್ಲೆಲ್ಲ ಕಷ್ಟನಿವಾರಣೆ ಕಮಿಟಿಯ (Relief-work Committee) ಕಾರ್ಯಭಾರವನ್ನು ಇವರೇ ಮಾಡಿದರು. ಬಂಗಾಲದ ರಿಲೀಫ (Relief) ಕೆಲಸದ ಸೆಕ್ರೆಟರಿಗಳಾಗಿ ವ್ಯವಸ್ಥೆಗೊಳಿಸುವ ಚಮತ್ಕಾರಿಕ ಬುದ್ಧಿಯನ್ನೂ, ಅದ್ಭುತವಾದ ಚಲನವಲನ ಕೌಶಲ್ಯದ ಶಕ್ತಿಯನ್ನೂ ಇವರು ಪ್ರದರ್ಶಿಸಿದರು. ೧೯೨೨ ನೆಯ ಡಿಶಂಬರದಲ್ಲಿ ಭಾರತ ರಾಷ್ಟ್ರೀಯ ಮಹಾಸಭೆಯ ಗಯಾದಲ್ಲಿ ಸೇರಿದ ಅಧಿವೇಶನಕ್ಕೆ ದೇಶ ಬಂಧುಗಳು ಇವರನ್ನು ಕರೆದೊಯ್ದರು. ಅಲ್ಲಿ ಸ್ವರಾಜ್ಯ ಪಕ್ಷದ ಕೌನ್ಸಿಲ್ ಕಾರ್ಯಕ್ರಮವನ್ನು ಇವರು ಪುಷ್ಟೀಕರಿಸಿದರು. ಗಯಾದಿಂದ ತಿರುಗಿ ಬಂದಮೇಲೆ ಕೌನ್ಸಿಲ್ ಚುನಾವಣೆಯ ಕಾರ್ಯದಲ್ಲಿ ಸಂಪೂರ್ಣವಾಗಿ ತೊಡಗಿದರು. ಮುಂದೆ ಸ್ವರಾಜ್ಯ ಪಕ್ಷದ ಮುಖಪತ್ರಿಕೆಯಾಗಿದ್ದ ಫಾರ್ವರ್ಡ ('Forward') ಎಂಬ ದೈನಿಕ ಪತ್ರಿಕೆಯ ಸಂಪಾದಕರಾದರು. ೧೯೨೪ ನೆಯ ಎಪ್ರಿಲದಲ್ಲಿ ಕಲ್ಕತ್ತಾ ನಗರಸಭೆಯ (Corporation) ಮುಖ್ಯ ಕಾರ್ಯನಿರ್ವಾಹಕ ( Chief Executive ) ಅಧಿಕಾರಿಗಳಾದರು. ಆ ಸಂದರ್ಭದಲ್ಲಿ ಒಂದು ಸಾವಿರದ ಮೇಲೆ ಐದು ನೂರು ರೂಪಾಯಿಗಳನ್ನು ಮಾತ್ರವೇ ಪ್ರತಿಫಲವಾಗಿ ಸ್ವೀಕರಿಸಿದರು. ಈ ಅಧಿಕಾರದ ಹುದ್ದೆಯಲ್ಲಿ ಸ್ವಲ್ಪೇ ತಿಂಗಳುಗಳ ಕಾಲ ಇದ್ದಾಗ್ಯೂ ಇವರು ಎಲ್ಲರ ಸ್ತೋತ್ರಕ್ಕೂ ನಿಷ್ಕಲಂಕವಾದ ಹೊಗಳಿಕೆಗೂ ಪಾತ್ರರಾದರು.

೧೯೨೪ ನೆಯ ಅಕ್ಟೋಬರದಲ್ಲಿ ಲಾರ್ಡ ಲಿಟನ್‌ರು ಗವ್ಹರ್ನರರಾಗಿದ್ದಾಗ ಬಂಗಾಲ ಸರಕಾರವು ಒತ್ತಾಯದ ದಬ್ಬಾಳಿಕೆಯನ್ನು ಆರಂಭಿಸಿತು. ಸ್ವರಾಜ್ಯ ಪಕ್ಷದ ಚಲನವಲನಗಳು ಆಳರಸರ ಕಣ್ಣನ್ನು ಕುಕ್ಕಹತ್ತಿದವು. ಇದನ್ನು ಸಹಿಸಲಾರದೆ ಸರಕಾರದವರು ರಾಷ್ಟ್ರೀಯ ಉತ್ಸಾಹವನ್ನು ಕುಗ್ಗಬಡಿಯಲು ಹವಣಿಸಹತ್ತಿದರು. ಕೌನ್ಸಿಲಿನಲ್ಲಿ ಸ್ವರಾಜ್ಯ ಪಕ್ಷದವರು

ತಮ್ಮನ್ನು ವಿರೋಧಿಸುವ ಬಲವನ್ನೆಲ್ಲ ಸದೆಬಡೆಯಲು ಪ್ರಯತ್ನಿಸಿದರು. ಸ್ವರಾಜ್ಯ ಪಕ್ಷವು 'ಸಿಂಹವನ್ನು ಅವರ ಗವಿಯಲ್ಲಿಯೇ ಎದುರಿಸುವಷ್ಟು' ಬಲಶಾಲಿಯಾದದ್ದು ಸರಕಾರಕ್ಕೆ ಸಹನವಾಗದಾಯಿತು. ಆದ್ದರಿಂದ ಬಂಗಾಲವು ಆರ್ಡಿನನ್ಸ ಭೂತದ ಅವತಾರವಾಯಿತು. (ಅದು ೧೯೧೫ರ ಡಿಫೆನ್ಸ್ ಆಫ್ ಇಂಡಿಯಾ ಆ್ಯಕ್ಟದ ಯುದ್ಧ ಕಾಯಿದೆಯಂತೆಯೇ ಇತ್ತು.) ಸುಭಾಸ ಚಂದ್ರ ಬೋಸರೂ ಮತ್ತು ಸ್ವರಾಜ್ಯ ಪಕ್ಷದ ಇನ್ನೂ ಅನೇಕ ಪ್ರಮುಖ ಕೆಲಸಗಾರರೂ ಇದಕ್ಕೆ ಆಹುತಿಯಾದರು. ದೇಶಾಭಿಮಾನದಿಂದ ಕುದಿಯುವ ಬಿಸಿರಕ್ತದ ತರುಣರು ಲೆಕ್ಕವಿಲ್ಲದಷ್ಟು ಹಿಡಿಯಲ್ಪಟ್ಟು ಯಾವ ವಿಚಾರಣೆಯೂ ಇಲ್ಲದೆ ಸೆರೆಮನೆಗೆ ತಳ್ಳಲ್ಪಟ್ಟರು.

ದೇಶಬಂಧು ದಾಸರು ಈ ಅನಾಹುತದ ಕೈಸೆರೆ ಶಿಕ್ಷೆಗಳ ದಬ್ಬಾಳಿಕೆಯನ್ನು ಕಂಡು ಬಹಳವಾಗಿ ರೇಗಿದರು. ಕಲ್ಕತ್ತೆಯ ನಗರಸಭೆಯಲ್ಲಿ ಆಳರಸರ ಈ ಕೃತಿಯನ್ನು ನಿಷೇಧಿಸುವದಕ್ಕಾಗಿ ಕೂಡಿದಾಗ ಅವರು ಈ ಪ್ರಕಾರವಾಗಿ ನುಡಿದರು:

**"ದೇಶಪ್ರೇಮವು ಗುನ್ಹೆಯಾಗಿದ್ದರೆ ನಾನೂ ಗುನ್ಹೆಗಾರನು. ಸುಭಾಸ ಚಂದ್ರ ಬೋಸರು ಅಪರಾಧಿಯಾಗಿದ್ದರೆ—ನಾನೂ ಅಪರಾಧಿಯು—ನಗರ ಸಭೆಯ ಮುಖ್ಯ ಪ್ರವರ್ತಕಾಧಿಕಾರಿಯೊಬ್ಬನೇ ಏಕೆ? ಅದರ ಮುಖ್ಯಾಧಿಪತಿಯಾದ** ( Mayor ) **ನಾನೂ ಅಷ್ಟೇ ತಪ್ಪುಗಾರನಿದ್ದೇನೆ".**

ದೇಶ ಬಂಧುಗಳು ಹೀಗೆನ್ನಬೇಕಾದರೆ ಸುಭಾಸಚಂದ್ರರು ಅವರ ಪ್ರೀತಿ ವಿಶ್ವಾಸಗಳಿಗೆಷ್ಟು ಪಾತ್ರರಾಗಿದ್ದರೆಂಬದನ್ನು ವಾಚಕರೇ ಊಹಿಸಲಿ.

# ೩. ಸೆರೆಮನೆಯಲ್ಲಿ

**(ಕ್ರಿ. ಶ. ೧೯೨೪ ನೆಯ ಅಕ್ಟೋಬರ ೨೫ ನೆಯ ತಾರೀಖಿನಿಂದ ೧೯೨೭ ನೆಯ ಮೇ ೧೫ ರ ವರೆಗೆ)**

" What supports me ? Dost thou ask:
The Conscience, Friend,
to have lost them overply'd
In Liberty's defence, my noble task,
Of which all Europe rings
from side to side.

-Milton.

ಬಂಗಾಲದ ಆರ್ಡಿನನ್ಸ ಪ್ರಕಾರ ಸುಭಾಸಚಂದ್ರ ಬೋಸರು ೧೯೨೪ ನೆಯ ಇಸ್ವಿ ಅಕ್ಟೋಬರ ೨೫ ನೆಯ ತಾರೀಖಿನ ದಿವಸ ಬಂಧಿಸಲ್ಪಟ್ಟರು. ಮೊದಲು ಕೆಲಕಾಲ ಇವರನ್ನು ಸರಕಾರದವರು ಅಲಿಪುರದ ಸೆಂಟ್ರಲ್

ಜೇಲಿನಲ್ಲಿಟ್ಟರು. ಆಮೇಲೆ ಅಲ್ಲಿಂದ ಅವರನ್ನು ಒಮ್ಮೆಲೆ ಬಹ್ರ್ಯಾಂಪುರ (ಮುರ್ಶಿದಾಬಾದ) ಜೇಲಿಗೆ ಒಯ್ದರು. ಅಲ್ಲಿ ಇವರು ಕೆಲವು ತಿಂಗಳು ಮಾತ್ರ ಇಡಲ್ಪಟ್ಟರು. ಕಡೆಗೆ ಸುಭಾಸರವರು ಬರ್ಮಾ ದಲ್ಲಿಯ ಮಂಡಾಲೆಯ ಜೇಲಿಗೆ ಒಯ್ಯಲ್ಪಟ್ಟರು. ಮಂಡಾಲೆಯ ಬಿಸಿಲಿನ ತಾಪವೂ ಏಕಾಂತವಾಸದ ಶಿಕ್ಷೆಯೂ ಬೋಸರ ಆರೋಗ್ಯಕ್ಕೆ ವಿಶೇಷ ಭಂಗತಂದವು. ಅಲ್ಲಿ ಇವರ ತೂಕವು ನಾಲ್ವತ್ತು ಪೌಂಡು ಕಡಿಮೆಯಾದ ದ್ದಲ್ಲದೆ, ಕ್ಷಯರೋಗದ ತೀಕ್ಷ್ಣವಾದ ಲಕ್ಷಣಗಳೂ ಬೆಳೆಯಹತ್ತಿದವು.

ಆ ಜೇಲಿನಲ್ಲಿದ್ದಾಗ ತಮಗೂ ಹೊರಗಿರುವ ತಮ್ಮ ಗೆಳೆಯರಿಗೂ ತಮ್ಮ ಸಹಕಾರಿಗಳಿಗೂ ಇವರು ತುಲನೆಮಾಡಿಕೊಳ್ಳುತ್ತಿದ್ದರು. ಅವರ ಮತ್ತು ತಮ್ಮ ನಡುವಿನ ವಿಶೇಷ ವೈಷಮ್ಯವು ಇವರನ್ನು ಬಹಳವಾಗಿ ಹಿಂಸಿ ಸುತ್ತಿತ್ತು. ಕೆಲಕೆಲವು ವೇಳೆ ಇವರು ಬಹಳ ಚಿಂತಾಕ್ರಾಂತರಾಗುತ್ತಿದ್ದರು. ಹೊರಗಿನ ಗೆಳೆಯರ ಮತ್ತು ಪರಿಸ್ಥಿತಿಯ ವಿಷಯಕ್ಕೆ ಏನೂ ತಿಳಿಯದೆ ಚಡಪಡಿಸುತ್ತಿದ್ದರು. ಜೀವನವು ದಿನದಿನಕ್ಕೂ ವಿಷಾದಕರವಾಗುತ್ತ ನಡೆದಿತ್ತು.

ಆದರೆ ಈ ತರದ ಮನೋವೃತ್ತಿಯನ್ನು ಇವರು ಬೇಗನೆ ಜಯಿಸಿದರು. ಜಗತ್ತಿನೊಳಗಿನ ಯಾವದೇ ಮಹತ್ವದ ವಿಚಾರಕ್ಕಿಂತ ದೇಶಾಭಿಮಾನದ ವಿಚಾರವು ಇವರಿಗೆ ಹೆಚ್ಚು ಪ್ರಿಯಕರವಾಗಿತ್ತು. ಆದ್ದರಿಂದಲೇ ಇವರು ದುಃಖಮಯವಾದ ಸೆರೆಮನೆಯ ಜೀವನದಲ್ಲಿಯೂ ವಿಧಿಯನ್ನು ಕೂಡ ಗೆಲ್ಲಬಹುದಾದ ಧೈರ್ಯವನ್ನು ತಾಳಿದರು; ಸೆರೆಮನೆಯೂ ಒಂದು ಆಶೀ ರ್ವಾದವೆಂದೇ ಬಗೆದರು. 'ಬಂದದ್ದೆಲ್ಲ ಬರಲಿ, ನಾಡದೇವಿಯ ದಯೆಯೊಂದಿರಲಿ' ಎಂಬ ಗೀತೆಯಲ್ಲಿ ಅವರು ತೃಪ್ತಿಯನ್ನು ಕಂಡು ಕೊಂಡರು. ಬಂಗಾಲದಲ್ಲಿ ಕಾಣಬರುತ್ತಿದ್ದ ಸೂರ್ಯಾಸ್ತದ ಹೊಂಬಣ್ಣದ ಹೊಳಪೂ ಝಗಝಗಿಸುವ ಸಂಜೆಯ ಚಿತ್ರವಿಚಿತ್ರ ಬಣ್ಣಗಳ ಕಾಂತಿಯೂ ಇವರಿಗೆ ಮನೋಹರವಾದ ಅಲ್ಲಿಯ ಸೊಬ ಗನ್ನು ಹಗಲೆಲ್ಲ ನೆನಪಿಗೆ ತಂದುಕೊಡುತ್ತಿದ್ದವು. ಪ್ರಸಿದ್ಧರಾದ ಪೂರ್ವಜ ರಿಂದ ಅತ್ಯುನ್ನತ ಶಿಖರಕ್ಕೇರಿಸಲ್ಪಟ್ಟ ತಾಯ್ನಾಡಿನ ದೃಶ್ಯವನ್ನು ಮೂರ್ತಿ ಮಂತಾಗಿ ಹೃದಯದಲ್ಲಿ ನೋಡುವರು. ಕವಿಪುಂಗವ ಗಾನವಿಶಾರದರೆಲ್ಲರೂ ಮಾತೃಭೂಮಿಯ ಸೌಂದರ್ಯ ವೈಭವಗಳನ್ನು ಇವರ ಹೃದಯಮಂದಿರ

ದಲ್ಲಿ ಹಾಡಿದಂತಾಗುತ್ತಿತ್ತು. ಈ ಕಲ್ಪನೆ ಕನಸುಗಳಲ್ಲಿಯೇ ಇವರು ಪರಮಾನಂದವನ್ನು ಪಡೆಯುತ್ತಿದ್ದರು. ನಿಜವಾಗಿ ಅಂಥ ಸೌಂದರ್ಯದ ಕಲ್ಪನೆಯು ಯಾರಿಗೆ ತಾನೆ ಬಂದೀತು? ಅದರ ಪ್ರತ್ಯಕ್ಷ ಅನುಭವವು ಅನ್ಯರಿಗೆ ಹೇಗೆ ತಾನೆ ಸಾಧ್ಯವಾದೀತು? ತಮ್ಮ ಸೆರೆಮನೆಯ ವಾಸವು ಹೇಗಾದರೂ ವ್ಯರ್ಥಹೋಗಲಿಲ್ಲವೆಂದು ಇವರಿಗೆ ಅನಿಸುತ್ತಿತ್ತು. ದಿನಗಳೆದಂತೆ ಇವರು ಅಶಕ್ತರಾಗುತ್ತ ನಡೆದರು. ಮೃತ್ಯುಪ್ರಾಯವಾದ ಕ್ಷಯವು ಇವರ ದೇಹದಲ್ಲಿ ಮನೆಮಾಡಿತು. ೧೯೨೭ ನೆಯ ಎಪ್ರಿಲದಲ್ಲಿ ಇವರು ಕೊನೆಗೆ ಹಾಸಿಗೆಯನ್ನೇ ಹಿಡಿದರು. ಆಗ ಇವರ ಅಣ್ಣಂದಿರಾದ ಡಾಕ್ಟರ ಸುನೀಲಚಂದ್ರ ಬೋಸರೂ ಮತ್ತು ಸರಕಾರೀ ಮೆಡಿಕಲ್ ಅಧಿಕಾರಿಗಳೂ ಇವರ ದೇಹ ಪರೀಕ್ಷೆ ಮಾಡಿದರು. ಅವರೆಲ್ಲ ' ಅಂಜಿಕೆಬರುವಂಥ ಸ್ಥಿತಿ ಅದೆ ' ಎಂದು ಅಭಿಪ್ರಾಯಪಟ್ಟರು. ಡಾ. ಬೋಸರ ಸಿಫಾರಸಿನ ಮೇಲೆ ಬಂಗಾಲ ಸರಕಾರದ ಪರವಾಗಿ ಮಿ. ಮೊಬರ್ಲೆಯವರು ಆರೋಗ್ಯವನ್ನು ಪಡೆಯುವದಕ್ಕಾಗಿ ಸುಭಾಸಚಂದ್ರರು ಸ್ವಿತ್ಸರ್ಲಂಡಕ್ಕೆ ಪ್ರಯಾಣ ಬೆಳಿಸಬೇಕೆಂದು ಸೂಚಿಸಿದರು. ಆದರೆ ಕಲ್ಕತ್ತೆಯಲ್ಲಾಗಲಿ ಅಥವಾ ಹಿಂದುಸ್ಥಾನದ ಯಾವದೇ ಬಂದರದಲ್ಲಾಗಲಿ ಇವರು ಯಾರನ್ನೂ ಭೆಟ್ಟಿಯಾಗದೆ ನೆಟ್ಟಗೆ ಯುರೋಪಕ್ಕೆ ಹೋಗಬೇಕೆಂದು ಇದ್ದ ಅಪ್ಪಣೆಯು ಸಂಶಯಕ್ಕೆ ಕಾರಣವಾಯಿತು. ಆದ್ದರಿಂದ ಸುಭಾಸಚಂದ್ರರು ಈ ಕರಾರಿಗೆ ಒಪ್ಪದೆ ಅದಕ್ಕೆ ಪ್ರತಿಯಾಗಿ ಸ್ಪಷ್ಟವಾದ ಉತ್ತರವನ್ನು ತಮ್ಮ ಹಿರಿಯಣ್ಣಂದಿರಾದ ಶರತ್‌ಚಂದ್ರ ಬೋಸರಿಗೆ ಬರೆದ ಪತ್ರದಲ್ಲಿ ಕಳುಹಿಸಿದರು.

ಪ್ರತಿದಿನವೂ ದೇಹವು ಕೃಶವಾಗುತ್ತ ನಡೆದಿತ್ತು. ಆದರೂ ಅಂತಃಶಕ್ತಿಯು ಇನ್ನೂ ಪ್ರಜ್ವಲಿತವಾಗಿ ಉರಿಯುತ್ತಲೇ ಇತ್ತು. ಇವರ ಅಣ್ಣಂದಿರೂ ಗೆಳೆಯರೂ ಇವರ ಬಿಡುಗಡೆಯ ವಿಷಯಕ್ಕೆ ಭಗೀರಥ ಪ್ರಯತ್ನ ಮಾಡಿದರೂ ನಿರಾಶರಾಗಬೇಕಾಯಿತು. ತಪ್ಪಿಸಲಿಕ್ಕಾಗದ ವಿಧಿಬಲಕ್ಕೆ ಇವರಾದರೂ ಶಾಂತಚಿತ್ತದಿಂದ ಶರಣುಹೋಗಬೇಕಾಯಿತು. “ **ನಾನು ಪರಮಾತ್ಮನಿಗೆ ಸಂಪೂರ್ಣವಾಗಿ ಋಣಿಯಾಗಿದ್ದೇನೆ—ಆತನು ನನ್ನನ್ನು ತನ್ನ ಬುದ್ಧಿಶಕ್ತಿಗೆ ಮಿಗಿಲಾದ ಕಠಿಣ ಪರೀಕ್ಷೆಗೆ ಹಾಕಿದರೂ ನಾನು ಅತ್ಯಂತ ಶಾಂತಚಿತ್ತದಿಂದ ಅದನ್ನು ಎದುರಿಸಬಲ್ಲೆನು. ಇದೊಂದು ನಮ್ರವಾದ ಮಾರ್ಗದಿಂದಲೇ ನಾನು ನಮ್ಮ ಜನಾಂಗದ**

ಹಿಂದಿನ ಪಾಪಗಳ ವಿಮೋಚನೆಗಾಗಿ ತಪಸ್ಸನ್ನಾಚರಿಸುವೆನೆಂದು ಭಾವಿಸುವೆನು. ನಾನು ನನ್ನ ಪಾಪನಿವೃತ್ತಿಯಲ್ಲಿ ಸುಖಿಯಾಗಿರುವೆನು. ನಮ್ಮ ವಿಚಾರಗಳು ಎಂದೂ ನಾಶಹೊಂದಲಾರವು—ನಮ್ಮ ಕಲ್ಪನೆಗಳನ್ನು ಜನತೆಯು ಮರೆಯಲಾರದು—ಭಾವೀ ಜನಾಂಗವು ನಮ್ಮ ಪ್ರೇಮದ ಕನಸು ಕಲ್ಪನೆಗಳ ವಂಶಪರಂಪರಾಧಿಕಾರಿಯಾಗಿರುವದು— ಈ ನಂಬುಗೆಯೇ ನನ್ನನ್ನು ಕಠಿಣ ಸಂಕಟಗಳಲ್ಲೆಲ್ಲ ಎಂದೆಂದಿಗೂ ಎತ್ತಿಹಿಡಿಯುತ್ತಿರುವದು.”

# ೪. ಸೆರೆಮನೆಯಿಂದ ಸಂದೇಶ

## ಸುಭಾಷಚಂದ್ರರು ಬ್ಯಾರಿಸ್ಟರ ಶರಚ್ಚಂದ್ರ ಬೋಸರಿಗೆ ಬರೆದ ಪತ್ರವು:

ಇನ್‌ಸೇನ್ ಸೆಂಟ್ರಲ್ ಜೇಲ್
೪ನೆಯ ಎಪ್ರಿಲ್, ೧೯೨೭.

**ಪ್ರಿಯ ಬಂಧು,**

ಮಿ. ಮೊಬರ್ಲಿಯವರು ನನ್ನ ಬಿಡುಗಡೆಯ ವಿಷಯಕ್ಕೆ ನನಗೆ ತಿಳಿಸಿರುವದು ನಿಮಗೆ ವಿದಿತವಿದೆ. ಈ ವಿಷಯದಲ್ಲಿ ನನ್ನ ಅಭಿಪ್ರಾಯಕ್ಕಾಗಿ ನೀವು ಆತುರಪಡುತ್ತಿರಬಹುದು. ಅದನ್ನು ವ್ಯಕ್ತಮಾಡಿ ಮೈಮೇಲಿನ ಭಾರವನ್ನು ಕಡಿಮೆ ಮಾಡಿಕೊಳ್ಳುವ ಈ ಪ್ರಸಂಗವನ್ನು ನಾನು ವ್ಯರ್ಥ ಹೋಗಗೊಡಲಾರೆನು. ಈ ವಿಷಯದಲ್ಲಿ ನನ್ನ ಎಲ್ಲ ವಿಚಾರಗಳು ನಿಮ್ಮ ದೃಷ್ಟಿಗೆ ಎಷ್ಟರಮಟ್ಟಿಗೆ ಹೋಲುವವೆಂಬುದನ್ನು ನಾನರಿಯೆ. ಆದರೆ ನಾನು ನನ್ನ ಪ್ರಾಮಾಣಿಕ ಅಭಿಪ್ರಾಯಗಳನ್ನು ನಿಮ್ಮ ಮುಂದಿಡುತ್ತೇನೆ. ಅವುಗಳ ಯೋಗ್ಯಾಯೋಗ್ಯತೆಗಳನ್ನು ನಾನು ಇಲ್ಲಿ ಚರ್ಚಿಸುವದಿಲ್ಲ.

ನಾನು ಮೆಹರ್ಬಾನರ ಜವಾಬನ್ನು ಪುನಃ ಪುನಃ ಚೆನ್ನಾಗಿ ಓದಿದೆನು. ಅದರೊಳಗಿನ ಪ್ರತಿಯೊಂದು ವಾಕ್ಯವನ್ನೂ ಆ ವಾಕ್ಯದೊಳಗಿನ ಪ್ರತಿಯೊಂದು ಶಬ್ದವನ್ನೂ ಲಕ್ಷಪೂರ್ವಕವಾಗಿ ವಿಚಾರಿಸಿದೆನು. ಅದು ಬಹಳ ತೂಕದಿಂದಲೂ ಹಿಡಿತದಿಂದಲೂ ಬರೆಯಲ್ಪಟ್ಟಿದೆ. ಅವರಲ್ಲಿಯ ಸೂಚನೆಗಳ ಸಾಧಕ ಬಾಧಕ ಪ್ರಮಾಣಗಳನ್ನು ತೂಗಿನೋಡಲು ನನಗೆ ಬಹಳ ವೇಳೆ ಹತ್ತಿತು. ಆದರೂ ಕೊನೆಯ ನಿರ್ಧಾರವನ್ನು ಗೊತ್ತುಪಡಿಸುವದರಲ್ಲಿ ನಾನು ಅವಸರವನ್ನೇನೂ ಮಾಡಿಲ್ಲ. ಈಗ ನಾನು ನಿಮಗೆ ಬರೆಯುತ್ತಿರುವದು ನನ್ನ ಸದ್ಯದ ಅಭಿಪ್ರಾಯವು. ಅದು ಬಹು ದಿವಸಗಳ ವಿಚಾರದ ಫಲಿತಾಂಶವು. ಹೀಗೆ ಮಾಡುವದರಲ್ಲಿ ನಾನು ಕೆಲವು ಸಲ್ಲದ ಸಂಗತಿಗಳಿಗೆ ವ್ಯರ್ಥ ಮಹತ್ವವನ್ನು ಕಲ್ಪಿಸಿರಬಹುದು. ಇಲ್ಲವೆ ಮಹತ್ವದ ಸಂಗತಿಗಳನ್ನೆಷ್ಟೋ ಮರೆತು ಬಿಟ್ಟಿರಬಹುದು. ಹೀಗೆಂದು ಕಂಡುಬಂದಲ್ಲಿ ನನ್ನನ್ನು ನಾನು ಪುನಃ ತಿದ್ದಿಕೊಳ್ಳಲು ಸಿದ್ಧನಿದ್ದೇನೆ. ವಿಚಾರಾಂತ್ಯದಲ್ಲಿ ನನ್ನ ನಿಶ್ಚಯವನ್ನು ಪುನಃ ಬದಲುಮಾಡುವದರಲ್ಲಿಯೂ ನಾನು ಹಿಂದು ಮುಂದೆ ನೋಡಲಾರೆನು.

ಮೊದಲನೆಯ ಮಾತೆಂದರೆ ಮೆಹರ್ಬಾನ ಸಾಹೇಬರ ಅಭಿಮತದ ಸರಳತನವನ್ನು ನೋಡಿ ಆನಂದವಾಗುತ್ತದೆ. ಅವನ್ನು ನಾನು ಸ್ತುತಿಸದಿದ್ದರೆ ನನ್ನ ಕರ್ತವ್ಯಕ್ಕೆ ಭಂಗಬಂದೀತು. ಸರಳತನದಲ್ಲಿ ನಾನು ಎಂದಿನಿಂದಲೂ ನಂಬುತ್ತ ಬಂದಿದ್ದೇನೆ. ಸರಳತನವು ಅಂತ್ಯದಲ್ಲಿ ಫಲದಾಯಕವೆಂಬುದೇ ನನ್ನ ದೃಢವಿಶ್ವಾಸ.

ಇಲ್ಲಿಯವರೆಗೆ ಸೋಸಿದ ಕೈದು ದಿನಗಳ ವಿಷಯಕ್ಕೆ ಯಾವದೇ ತರದ ಸಮ್ಮತಿ ಪತ್ರವೂ ಮತ್ತು ಇನ್ನೂ ಅನುಭವಿಸಬೇಕಾಗಿರುವ ದಿವಸಗಳ ವಿಷಯಕ್ಕೆ ಅಭಿವಚನವೂ ನನ್ನಿಂದ ಅವಶ್ಯವಿಲ್ಲವೆಂದು ಅವರು ಬರೆಯುತ್ತಾರೆ ಮತ್ತು ನಾನು ನನ್ನ ಸ್ವಾಭಿಮಾನದ ಗೌರವದಿಂದ ಅವರಿಗೆ ಮಾತುಕೊಟ್ಟು ಬಿಟ್ಟರೆ ಅಷ್ಟರಿಂದಲೇ ಅವರು ನನ್ನನ್ನು ಮುಕ್ತನನ್ನಾಗಿ ಮಾಡಲು ಸಿದ್ಧರಾಗಿದ್ದಾರೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ— ಇದಲ್ಲದೆ ನನ್ನ ಬಿಡುಗಡೆಯ ಸೂಚನೆಯನ್ನು ನನಗೆ ಮೊದಲೇ ತಿಳಿಸದಿದ್ದುದರಲ್ಲಿ ಕಾರಣವಿದೆ. ಅದನ್ನು ನಾನು ನನ್ನ ಮೈಮೇಲೆ ಬಂದ ಜುಲುಮೆ ಎಂಬ ತಿಳುವಳಿಕೆಗೆ ಆಸ್ಪದವನ್ನು ಕೊಡಕೂಡದೆಂದು ಅವರು ಅದನ್ನು ಗುಪ್ತವಾಗಿರಿಸಿದ್ದರೆಂದು ಅಂತ್ಯದಲ್ಲಿ

ಬರೆಯುತ್ತಾರೆ. ಇವೆಲ್ಲವುಗಳಲ್ಲಿ ಮಾನವೀ ಮನೋಭಾವಗಳ ವಿಷಯಕ್ಕೆ ಅವರು ವ್ಯಕ್ತಪಡಿಸಿರುವ ಮಾತುಗಳು ವರ್ಣನೀಯವಾಗಿವೆ. ಹೀಗೆ ಬರೆಯುವದರಲ್ಲಿ ಅವರು ಸನ್ಮಾನಿತ ಸಭ್ಯಗೃಹಸ್ಥರಂತೆ ವರ್ತಿಸಿದ್ದಾರೆ. ಅವರ ಸೂಚನೆಗಳನ್ನು ನಾನು ಬೇರೆ ಕಾರಣಗಳ ಮೂಲಕ ಸ್ವೀಕರಿಸದಿದ್ದಾಗ್ಯೂ ಅವುಗಳಲ್ಲಿಯ ಸನ್ಮಾನನೀಯಾಂಶಗಳನ್ನು ಹೊಗಳದಿರಲಾರೆನು. ಬಂಗಾಲ ಲೆಜಿಸ್ಲೇಟಿವ್ಹ ಕೌನ್ಸಿಲ್ ಮೆಂಬರರ ಪರವಾಗಿ ನಾನು ಒಂದು ದೃಷ್ಟಿಯಿಂದ ಅವರ ಸೂಚನೆಗಳನ್ನು ಎತ್ತಿಹಿಡಿಯದಿರಲಾರೆನು. ಈ ಒಂದು ಪ್ರಸಂಗದಲ್ಲಿಯಾದರೂ ಇವರು ಈ ಸೂಚನೆಗಳನ್ನು ಕೃತಿಯಲ್ಲಿ ತಂದು ಕೌನ್ಸಿಲಿನ ನಂಬಿಗೆಗೆ ಪಾತ್ರರಾದುದು ಯೋಗ್ಯವಾಗಿದೆ. ಈ ಎಲ್ಲ ಮಾತುಗಳನ್ನು ಹೇಳುವದೆಂದರೆ ಸೂಚನೆಯ ಪರವಾಗಿ ಹೇಳತಕ್ಕದ್ದನ್ನೆಲ್ಲ ಹೇಳಿದ್ದಾಯಿತೆಂದು ನನಗೆ ಅನಿಸುತ್ತದೆ.

ಇನ್ನು ನಿಮ್ಮ ಮನಸಿನೊಳಗಿಂದ ಹೊಡೆದೋಡಿಸಬೇಕಾದ ಭೂತವೊಂದಿದೆ. ಅದಾವುದೆಂದರೆ: ಪ್ರೇಮದ ಸಹೋದರ ಸುನೀಲಚಂದ್ರರ ರಿಪೋರ್ಟು ಮತ್ತು ಸಿಫಾರಸುಗಳ ವಿಷಯ: ಅವರು ಈ ವಿಷಯವಾಗಿ ನನ್ನನ್ನು ವಿಚಾರಿಸುವ ಮೊದಲೇ ನನಗೆ ಅರಿಯದಂತೆ ಆ ರಿಪೋರ್ಟು ಮತ್ತು ಸಿಫಾರಸುಗಳನ್ನು ಕಳಿಸಿದ್ದಾರೆ. ನನಗೆ ಈ ವಿಷಯವು ತಿಳಿದಿದ್ದರೆ ಅವರ ಸಿಫಾರಸಿಗೆ ನಾನು ಅಡ್ಡಿಮಾಡದೆ ಬಿಡುತ್ತಿದ್ದಿಲ್ಲ. ಕೆಲಸವೆಲ್ಲ ಮುಗಿದ ಬಳಿಕ ಆ ಸಿಫಾರಸಿನ ವಿಷಯವು ನನಗೆ ಗೊತ್ತಾಯಿತು. ಅದರ ಜಾಣತನದ ವಿಷಯಕ್ಕೆ ನಾನು ಆಗಲೇ ಸಂಶಯಗ್ರಸ್ಥನಾಗಿದ್ದೆನು. ಅದರ ಅಸಂಬದ್ಧತೆಯಲ್ಲಿ ಈಗ ನನಗೆ ಸಾಕಷ್ಟು ನಂಬಿಗೆಯಾಗಿದೆ. ರೋಗಿಯನ್ನು ಪರೀಕ್ಷಿಸುವಂತೆ ನನ್ನನ್ನು ಪರೀಕ್ಷಿಸಿ, ನಿಜವಾದ ವೈದ್ಯರಂತೆ ಅಭಿಪ್ರಾಯಕೊಡಲು ಸಣ್ಣಣ್ಣನವರು ಬಂದಿದ್ದೇನೋ ನಿಜ. ಅವರು ಶಾಸ್ತ್ರೀಯ ದೃಷ್ಟಿಯ ನಿಷ್ಪಕ್ಷಪಾತದಿಂದಲೂ ತನ್ನ ಕಸಬಿಗೆ ತಕ್ಕ ಸೌಜನ್ಯದಿಂದಲೂ ತಮ್ಮ ಕರ್ತವ್ಯವನ್ನು ಅವರು ಮಾಡಿದ್ದಾರೆಂದು ನಾನು ತಿಳಿಯುತ್ತೇನೆ. ಅವರ ಸಿಫಾರಸಿನಲ್ಲಿ ರಾಜಕೀಯ ಪ್ರಸಂಗದ ಸಂಬಂಧವಿದ್ದಿಲ್ಲ. ಸರಕಾರದವರು ಅದಕ್ಕೆ ರಾಜಕೀಯ ಸ್ವರೂಪ ಕೊಟ್ಟದ್ದರಲ್ಲಿಯೂ ಅವರ ಅಂಗವಿರಲಿಲ್ಲ. ವೈದ್ಯಕೀಯ ಪ್ರಶ್ನೆಗಳ ಹೊರ್ತು ಉಳಿದ ಸಂಬಂಧಗಳಿಗೆ ಅವರು ಅಲಕ್ಷಿಸಿದ್ದಕ್ಕಾಗಿ ನಾನು ಅವರನ್ನು ಆರೋಪಿಸಲಾರೆನು. ಬೇರೆ ಯಾವದೇ

ರೋಗಿಯ ವಿಷಯದಲ್ಲಾದರೂ ಉಪದೇಶಿಸುವಂತೆ ಈ ಪ್ರಸಂಗದಲ್ಲಿಯೂ ಯಾವಪಕ್ಷಪಾತವಿಲ್ಲದೆ ಅವರು ಕೆಲಸಮಾಡಿದರು. ಅವರ ಅನೇಕ ರೋಗಿಗಳು ಸ್ವಿತ್ಸರ್ಲಂಡದ ಆರೋಗ್ಯ ನಿವಾಸದಲ್ಲಿ (Sanitorium) ಗುಣಹೊಂದಿದ್ದರು. ಅದಕ್ಕಾಗಿ ಕ್ಷಯಗ್ರಸ್ತರಾದ ಎಲ್ಲ ರೋಗಿಗಳಿಗೆ ಶಕ್ಯವಿದ್ದರೆ ಸ್ವಿತ್ಸರ್ಲಂಡದಲ್ಲಿ ಔಷಧೋಪಚಾರಹೊಂದಲು ಅವರು ಬಲವಾಗಿ ಉಪದೇಶಿಸುತ್ತಿದ್ದರು. ಅದರಂತೆ ನನ್ನ ವಿಷಯದಲ್ಲಿಯೂ ಅವರು ಉಪದೇಶವನ್ನಿತ್ತಿದ್ದಾರೆ. ಈ ಸಂದರ್ಭದಲ್ಲಿ ಸರಕಾರದ ಯಾವ ಸೂಚನೆಗಳನ್ನು ನಾನು ಮಾನ್ಯಮಾಡಬೇಕೆಂಬುದನ್ನು ಅವರು ಮೊದಲೇ ವಿಚಾರಿಸಿದ್ದಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಸರಕಾರದವರು ಸಣ್ಣಣ್ಣನ (ಥೋಟಾದಾದಾ) ಈ ಸೂಚನೆಗಳನ್ನು ಉಪಯೋಗ ಮಾಡಿಕೊಳ್ಳಲು ಸಿದ್ಧರಿದ್ದಾಗ್ಯೂ ಅವರು ತೋರಿಸಿದ ಬೇನೆಯ ನಿವಾರಣೋಪಾಯವನ್ನು ಮಾತ್ರ ಸ್ವೀಕರಿಸಲಿಲ್ಲವೆಂಬಂತೆ ಕಾಣುತ್ತದೆ. ಯಾಕಂದರೆ " ಆ ವೇಳೆಯಲ್ಲಿ ಸುಭಾಸಚಂದ್ರರು ಭಯಂಕರ ಬೇನೆಯಲ್ಲಿದ್ದಿಲ್ಲ; ನಿಜವಾಗಿ ದುರ್ಬಲತೆಯಂತೂ ಇದ್ದೇಇಲ್ಲ"; ವೆಂದು ಮೆ. ಸಾಹೇಬರು ಅಂದಿದ್ದಾರೆ. ನಾನು ಎಂಥ ಸ್ಥಿತಿಯಲ್ಲಿದ್ದಾಗ್ಗ್ಯ, ಬೇನೆಯ ಅಂತ್ಯಾವಸ್ಥೆಯಲ್ಲಿರುವೆನೆಂದು ಸರಕಾರದವರು ತಿಳಿಯುಪರೆಂಬದನ್ನು ಕಂಡುಕೊಳ್ಳುವದು ಮೋಜಿನದಾಗಿದೆ. ಎಲ್ಲ ಡಾಕ್ಟರರು 'ವಾಸಿಯಾಗುವದು ಕೈಮೀರಿದೆ' ಎಂದು ಅಭಿಪ್ರಾಯಪಟ್ಟ ಕಾಲಕ್ಕೋ? ಅಥವಾ ನನ್ನನ್ನು ಮರಣವು ಸ್ವಲ್ಪೇ ಅವಧಿಯಲ್ಲಿ ಆವರಿಸುವದು ಎಂದ ಕಾಲಕ್ಕೋ? ನನಗಂತೂ ತಿಳಿಯದಾಗಿದೆ. ಬಂಧು ಡಾ. ಸುನೀಲಚಂದ್ರರು ಕಂಡುಕೊಂಡಿರುವ ಬೇನೆಯ ಚಿನ್ಹಗಳನ್ನು ಮನ್ನಿಸದೆ ಅವರ ಸಿಫಾರಸುಗಳನ್ನು ತೋರಿಕೆಗಾಗಿ ಜಾರಿಯಲ್ಲಿ ತರಲು ಆತುರಪಡುವದೇಕೆ? ನಾನು ಹೊರಗೆ ಪ್ರಯಾಣಬೆಳೆಸುವ ಪೂರ್ವದಲ್ಲಿ ನನ್ನನ್ನು ಮನೆಗೆ ಹೋಗಗೊಡಬಾರದೆಂಬದಾಗಿಯೂ, ನನ್ನ ಜನರನ್ನು ಕಾಣಗೊಡಬಾರದೆಂಬದಾಗಿಯೂ ಅವರ ಸಿಫಾರಸಿನಲ್ಲಿ ಬರೆದಿಲ್ಲ. ನಾನು ಹೋಗಬೇಕಾದ ಹಡಗವು ಹಿಂದುಸ್ಥಾನದ ಯಾವದೇ ಬಂದರವನ್ನು ಮುಟ್ಟಲಿಕ್ಕಾಗದೆಂದೂ ಅವರ ಸೂಚನೆಗಳಲ್ಲಿ ಹೇಳಿಲ್ಲ. ಹಾಗೆಯೆ ಬಂಗಾಲ ಕ್ರಿಮಿನಲ್ ಲಾ ಅಮೆಂಡಮೆಂಟ ಆ್ಯಕ್ಟು ಮುಗಿಯುವವರೆಗೆ ನಾನು ಭಾರತದಲ್ಲಿ ಕಾಲಿಡಕೂಡದೆಂದೂ ಅವರಲ್ಲಿ ಹೇಳಿಲ್ಲ. ಇವೆಲ್ಲವುಗಳನ್ನು

ನಿರೀಕ್ಷಿಸಿ ನೋಡಲಾಗಿ ನನ್ನ ಕಳೆದ ಆರೋಗ್ಯವನ್ನು ಗಳಿಸಿಕೊಳ್ಳಲು ನನಗೆ ಸುಸಮಯವನ್ನು ತಂದುಕೊಡಬೇಕೆಂದಿರುವ ಸರಕಾರದ ಉದ್ದೇಶಗಳಲ್ಲಿ ನನಗೆ ಹೇಗೆ ತಾನೆ ನಂಬಿಗೆಯಾಗಬೇಕು? ನಾನು ಅವರ ಎಲ್ಲ ಸದಿಚ್ಛೆಗಳಲ್ಲಿಯೂ ಸಂಶಯಗ್ರಸ್ತನಾಗಿರುವದರಿಂದ ಅವುಗಳನ್ನು ಎಂದೂ ನಂಬಲಾರೆನು.

ನನ್ನ ವಿಷಯದಲ್ಲಿ ಎರಡೇ ಮಾರ್ಗಗಳು ಮಾತ್ರ ತೆರದಿರುವವೆಂದು ಮೆಹರ್ಬಾನರ ಹೇಳಿಕೆ. (೧) ನಾನು ಸೆರೆಮನೆಯಲ್ಲಿಯೇ ಕೊಳೆಯುವದು. ಇಲ್ಲವೆ (೨) ಅನಿಯಮಿತ ವೇಳೆಯವರೆಗೆ ಪರನಾಡಿನಲ್ಲಿ ಉಪಚಾರ ಹೊಂದುವದು. ಆದರೂ ನಿಜವಾಗಿ ಇವೆರಡರಲ್ಲಿ ಮಧ್ಯಮಾರ್ಗವಿಲ್ಲವೋ ಹೇಗೆ? ಅನ್ಯದಾರಿಯು ಸಾಧ್ಯವಿಲ್ಲವೆಂಬ ಅವರ ಮಾತನ್ನು ನಾನು ನಂಬಲಾರೆನು.

ಬಂಗಾಲ ಕ್ರಿಮಿನಲ್ ಲಾ ಅಮೆಂಡಮೆಂಟ ಮುಗಿಯುವ ವರೆಗೆ ಅಂದರೆ ೧೯೩೦ ನೆಯ ಜನೇವರಿಯ ವರೆಗೆ ನಾನು ತಾಯ್ನಾಡಿನ ಹೊರಗೆ ಇರಬೆಕೇಂಬದು ಸರಕಾರದ ಆಶೆ. ಆದರೆ ಈ ಕಾಯ್ದೆಯು ೧೯೩೦ ನೆಯ ವರ್ಷವನ್ನು ದಾಟಿ ಪುನರ್ಜನ್ಮವನ್ನು ಹೊಂದಿ, ಜೀವಮಾನವಿರುವರೆಗೆ ಬೆಳೆಯಲಾರದೆಂದು ಯಾರು ಹೇಳಬೇಕು? ೧೯೨೬ ನೆಯ ಅಕ್ಟೋಬರದಲ್ಲಿ ನಾನು ಮಿ. ಲೋಮನ್ (Lowman, D.I G., I.B., C.I.D.) ರೊಡನೆ ಸಂಭಾಷಣೆ ಮಾಡಿದ್ದೆನು. ಅವರ ಮಾತಿನಲ್ಲಿ ಇದರ ಸತ್ಯಾಂಶವು ಹುದುಗಿದ್ದು ಕಂಡುಬಂದಿತು. ೧೯೨೫ರ ಬಂಗಾಲ ಕ್ರಿಮಿನಲ್ ಲಾ ಅಮೆಂಡಮೆಂಟ ಆ್ಯಕ್ಟನ್ನು ೧೯೨೯ ರಲ್ಲಿ "ಸ್ಟ್ಯಾಚ್ಯೂಟ ಬುಕ್ಕಿ"ನಲ್ಲ ಚಿರಂಜೀವಿಯಾಗಿರಬೇಕೆಂದು ಬರೆಯಲು ಸರಕಾರದವರು ಪ್ರಯತ್ನಿಸಿದರೆ ನಾನು ಆಶ್ಚರ್ಯಹೊಂದಲಾರೆನು. ಹಾಗಾದಲ್ಲಿ ಕಡೆತನಕ ನಾನು ಮನೆಯನ್ನ ಕಾಣಲಾಗದೆಂಬ ಅರ್ಥವೇ ಆಗುವದು. ನಾನು ನನ್ನ ಮಾತೃಭೂಮಿಂದ ಕೊನೆಯ ದರ್ಶನಾಶೀರ್ವಾದಗಳನ್ನು ಪಡೆದು ಹೋಗಬೇಕಾಗುವದು ಆಗ ೨೦ನೆಯ ಶತಮಾನದ ಆತ್ಮವಿನಾಶಕ ಆರ್ಡಿನನ್ಸ ("Self-denyin Ordinance") ಪ್ರಕಾರ ಮಾತೃಭೂಮಿಯಿಂದ ಹೊರಗೆ ತಳ್ಳಲ್ಪಟ್ಟ ನನ ಆಭಾರವನ್ನು ನಾನೇ ಮನ್ನಿಸಿಕೊಳ್ಳಬೇಕಾಗುವದು. ಈ ವಿಷಯದಲ್ಲಿ ಸರಕಾರದ ಸದುದ್ದೇಶಗಳು ಪೂರ್ಣ ಸ್ಪಷ್ಟವಾಗಿದ್ದರೆ ನಾನು ಹೀಗೆಯೆ

ಮಾತೃಭೂಮಿಯ ಹೊರಗೆ ಎಷ್ಟು ದಿವಸವಿರಬೇಕೆಂಬ ನಿಶ್ಚಿತ ಅವಧಿಯನ್ನಾದರೂ ಅವರು ತಿಳಿಸುತ್ತಿದ್ದರು.

ಇದಲ್ಲದೆ ಯುರೋಪದಲ್ಲಿ ನನಗೆ ಎಷ್ಟರ ಮಟ್ಟಿಗೆ ಸ್ವಾತಂತ್ರ್ಯವನ್ನು ಕೊಡುವರೆಂಬ ಭರವಸೆಯನ್ನು ಅವರು ಕೊಟ್ಟಿಲ್ಲ. ಸ್ವಿತ್ಸರ್ಲಂಡವನ್ನು ತುಂಬಿಕೊಂಡಿರುವ ಅಸಂಖ್ಯಾಕ ಗುಪ್ತಚಾರರಿಂದ ಸರಕಾರವು ನನ್ನನ್ನು ರಕ್ಷಿಸುವವೋ? ರಾಜಕೀಯ ದೃಷ್ಟಿಯಿಂದ ಈಗ ನಾನು ಸಂಶಯಾರ್ಹನಾಗಿರುವೆನಾದ್ದರಿಂದ ಮುಂದಾದರೂ ಹಾಗೇ ಉಳಿಯುವೆನೊ? ಎಲ್ಲಿಯವರೆಗೆ ನನ್ನ ಬಣ್ಣವನ್ನೆಲ್ಲ ಬದಲಿಸಿ ನಾನು ಸರಕಾರೀ ಗುಪ್ತಪೋಲೀಸಚಾರನಾಗುವದಿಲ್ಲವೋ ಅಲ್ಲಿಯವರೆಗೆ ಈ ಸಂಶಯ ಪಿಶಾಚಿಯು ನನ್ನನ್ನು ಬಿಟ್ಟಿದ್ದಲ್ಲವೆಂದು ನನಗೆ ಗೊತ್ತಿದೆ. ಹಾಗೆಯೆ ಹೆಜ್ಜೆಜ್ಜೆಗೆ ನನ್ನನ್ನು ಸುತ್ತುತ್ತಿರುವ ಗುಪ್ತಚಾರರಿಂದ ಪರನಾಡಿನಲ್ಲಿ ನನ್ನ ಜೀವನವು ದುಃಖಮಯವಾಗುವದು ಸಹಜವದೆ. ಬ್ರಿಟಿಷ ಗುಪ್ತಚಾರರಲ್ಲದೆ ಸ್ವಿತ್ಸರ್ಲಂಡ, ಇಟಲಿ, ಫ್ರಾನ್ಸ, ಜರ್ಮನಿ, ಹಿಂದುಸ್ತಾನ ಮೊದಲಾದ ದೇಶಗಳ ಗುಪ್ತಚಾರರೂ ಕೂಡ ಬ್ರಿಟಿಷ ಸರಕಾರದಿಂದ ನಿಯೋಜಿಸಲ್ಪಡುತ್ತಾರೆಂದು ನಾನು ಕೇಳುತ್ತೇನೆ. ಅಂಥಲ್ಲಿ ಸರಕಾರದವರ ಮೋರೆಗೆ ಮಂಕುಬೂದಿಯನ್ನು ತೂರಿ, ನನ್ನ ವಿಷಯವಾಗಿ ಸುಳ್ಳು ಸುದ್ದಿಗಳನ್ನು ಬೀರಿ ಸುಮ್ಮನೆ ನನ್ನನ್ನು ನಿಷ್ಠುರನನ್ನಾಗಿ ಮಾಡಿ ತಮ್ಮ ಬೇಳೆಬೇಯಿಸಿಕೊಳ್ಳುವ ಸ್ವಾರ್ಥ ಏಜಂಟರಿಗೆ ಏನೂ ಕೊರತೆ ಇರಲಾರದು. ಇಂಥ ಪ್ರಸಂಗಗಳನ್ನೇ ಕಾಯುತ್ತಿರುವ ಅನೇಕ ಶ್ವಾನಗಳಿಗೆ ನಾನೊಂದು ಅಮೃತವೇ ದೊರೆತಂತಾಗಬಹುವಲ್ಲವೇ? ಈ ಗುಪ್ತಖಾತೆಯ ವಿಷಯಕ್ಕೆ ನಾನು ಮಿ. ಲೋಮನ್ ಇವರಿಗೆ ಹೀಗೆ ಹೇಳಿದ್ದೆನು. ಯಾವ ನಾಗರೀಕನನ್ನಾದರೂ ಆರ್ಡಿನನ್ಸದಿಂದ ಬಿಗಿಯಬೇಕೆಂದಿದ್ದರೆ ಗುಪ್ತಚಾರರಿಗೆ ಸೂಚಿಸಿದರೆ ತೀರಿತು. ರಾಜಕಾರಣದಲ್ಲಿ ಯಾವದೇ ರೀತಿಯಿಂದ ಸಂಶಯಾರ್ಹರಿಲ್ಲದವರಮೇಲೆ ಸಹ ಅವರು ಬೇಕಾದಾಗ ಹಾಗೆ ಆರೋಪ ಹೊರಿಸಲು ಸದಾ ಸಿದ್ಧರಿರುವರು. ಈ ನನ್ನ ನಂಬುಗೆಯು ಈಗಲೂ ದೃಢವಾಗಿಯೇ ಇದೆ. ರಾಜಕೀಯ ದೃಷ್ಟಿಯಿಂದ ಸಂಶಯಾರ್ಹರಾಗಿದ್ದು ಕೆಲಕಾಲ ಮಾತ್ರ ಯುರೋಪದಲ್ಲಿ ವಾಸಿಸುವವರ ವಿಷಯದಲ್ಲಂತೂ ಈ ಗುಪ್ತಚಾರರ ಉಪಯೋಗವು ಸಂಪೂರ್ಣವಾಗಿ ಫಲಿಸುವದು. ಆ ಗುಪ್ತಚಾರರ ಚತುರತನವ ಸದುಪಯೋಗವು ಅಂಥ ಪರ

ದೇಶವಾಸಿಗಳ ಮೇಲೆ ಚನ್ನಾಗಿ ನಡೆಯುವದು. ತಿರುಗಿ ಮನೆಗೆ ಬರಬೇಕಾದರೆ ರಾಜಕೀಯ ದೃಷ್ಟಿಯಿಂದ ಸಂಶಯಾರ್ಹರಾದವರು ಅನುಭವಿಸಿದ ಕಷ್ಟಗಳನ್ನು ಕೇಳಿ ಎಂಥ ಗಟ್ಟಿಗನ ಮೈಯಾದರೂ ನಡುಗದಿರಲಾರದು. ಸುರಕ್ಷಿತವಾಗಿ ಮನೆಗೆ ತೆರಳಲು ಕೂಡ ಪರವಾನಿಗೆ ದೊರೆಯಬೇಕಾದರೆ ಸರ್ವಶಕ್ತಿಯು ಹರಣವಾಗಬೇಕಾಗುತ್ತದೆ. ಲಾಲಾ ಲಜಪತರಾಯರಂಥ ದೊಡ್ಡಸ್ತಿಕೆಯ ಮತ್ತು ಮುಖಂಡರ ಸ್ಥಿತಿಯೂ ಸಹ ಹೀಗೆ ಅಸಹ್ಯವಾಗಿದ್ದುದನ್ನು ನಾನು ಬಲ್ಲೆನು. ಅವರು ತಿರುಗಿ ಮನೆಯನ್ನು ಕಾಣಬೇಕಾದರೆ ' ಕ್ಯಾಬಿನೆಟ್‌ದ ' ಮಾಜಿ ಮಂತ್ರಿಗಳಾಗಿದ್ದ ತನ್ನ ಗೆಳೆಯರೊಬ್ಬರ ಮರವತ್ತನ್ನು ಉಪಯೋಗಿಸಿಕೊಳ್ಳಬೇಕಾಯಿತು. ನಾನಂತೂ ಈಗ ಬ್ರಿಟಿಶರ ಕಣ್ಣೊಳಗೆ ಒತ್ತುತ್ತಿದ್ದೇನೆ. ಅವರ ಹೃದಯವನ್ನು ಚುಚ್ಚುವ ಅಂಕುಶವಾಗಿದ್ದೇನೆ. ಅಂದಬಳಿಕ ಒಂದು ವೇಳೆ ನಾನು ಅವರ ಸೂಚನೆಗಳನ್ನು ಮಾನ್ಯಮಾಡಿದರೆ ಅನುಭವಿಸಬೇಕಾಗುವ ಕಷ್ಟ ಸಂಕಟಗಳ ಸಾಗರವನ್ನು ಕಲ್ಪಿಸುವದು ಕೂಡ ಆಗಲಾರದು.

ಇದಲ್ಲದೆ ಕಾರುಣ್ಯದ ಮೇರೆಯನ್ನು ಮೀರಿ ನಿಂತಿರುವ ಪೋಲೀಸರ ಮುಂದೆ ನಾನು ಅಸಹಾಯನು. ಯುರೋಪದಲ್ಲಿ ಎಷ್ಟೋ ಎಚ್ಚರಿಕೆಯಿಂದ, ಅದೇಕೆ, ಅಂಜಿಕೆಯಿಂದ್ದ ವರ್ತಿಸಿದರೂ ಕೂಡ ನನ್ನ ವಿಷಯಕ್ಕೆ ಹಿಂದುಸ್ಥಾನ ಸರಕಾರಕ್ಕೆ ಮುಟ್ಟುವ ಸುಳ್ಳುಸುದ್ದಿಗಳನ್ನು ನಾನು ತಡೆಯಲಾರೆನು. ನನ್ನ ಜೋಪಾನಕ್ಕಾಗಿ ನಾನು ಅಂಜಿಕೊಂಡು ವರ್ತಿಸಿದರೂ ಅದೆಲ್ಲ ನನ್ನ ಧೂರ್ತತನ, ಠಕ್ಕತನವೆಂದು ಕಲ್ಪಿಸಲ್ಪಡುವದು. ಇದಲ್ಲದೆ ಇನ್ನೂ ಅನೇಕ ಅಲ್ಲದ ಸಲ್ಲದ ಚಟುವಟಿಕೆಗಳ ಉತ್ಪಾದಕನು ನಾನೇ ಎಂದು ನಿಷ್ಕಾರಣವಾಗಿ ಸರಕಾರದವರು ಭಾವಿಸುವರು. ಹೆಚ್ಚಿನ ವಿಷಾದಕರ ಸಂಗತಿ ಎಂದರೆ, ನನ್ನ ವಿಷಯಕ್ಕೆ ಕಳಿಸಲ್ಪಟ್ಟ ಸುದ್ದಿಗಳ ಗಂಧವೂ ಕೂಡ ನನಗೆ ತಿಳಿಯದಿರುವದಾಗಿದೆ. ಯಾವ ವಿಷಯವನ್ನೂ ತಿಳಿಸಿಹೇಳಲು ನನಗೆ ಅವಕಾಶವನ್ನೀಯುವದಿಲ್ಲ. ನಿರಪರಾಧತೆಯನ್ನು ಸಿದ್ಧಮಾಡಿಕೊಳ್ಳಲು ಕೂಡ ಆಸ್ಪದವನ್ನೀಯುವದಿಲ್ಲ. ೧೯೩೯ ನೆಯ ಇಸ್ವಿಯು ಸಮೀಪಿಸುವದರೊಳಗೆ ನಾನು ಬೊಲ್ಶೆವಿಕರ ಏಜಂಟನೆಂದು ಕಪ್ಪುಬಣ್ಣದಿಂದ ಸರಕಾರದವರೆದುರಿಗೆ ಚಿತ್ರಿಸಲ್ಪಡುವದರಲ್ಲಿ ಸಂದೇಹವಿಲ್ಲ. ಯುರೋಪಖಂಡವೆಲ್ಲ ಅಂಜುವ ಒಂದೇ ಒಂದು ಭೂತವೆಂದರೆ ಬೊಲ್ಶೆವಿಕರ ತತ್ವವೇ

ಆಗಿರುವದರಿಂದ, ಆಗ ನನ್ನ ಮೇಲೆ ಯಾವತರದ ಯಾತನೆಗಳ ಸುರಿ ಮಳೆಗರೆಯುವರೋ ದೇವರೇ ಬಲ್ಲ. ತಪ್ಪಿಸಲಸದಳವಾದ ಈ ಪರಿಣಾಮ ದಿಂದ ನಾನು ಮರುಳಿ ಭಾರತಕ್ಕೆ ಬರುವ ಆಶೆಗೆ ತಿಲಾಂಜಲಿಯನ್ನೀಯ ಬೇಕಾಗುವದು. ಇಲ್ಲವೆ ಒಂದು ವೇಳೆ ಸುದೈವದಿಂದ ಬಂದರೂ ಪುನಃ ಸೆರೆಮನೆಯನ್ನೇ ಸೇರಬೇಕಾಗುವದು. ಜನ್ಮಭೂಮಿಯನ್ನು ಕಂಡೂ ಕಂಡೂ ಬೇಕೆಂತಲೇ ಅದನ್ನು ತ್ಯಜಿಸಲು ನನ್ನ ಮನಸ್ಸು ಒಪ್ಪದು. **"ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ"** ಎಂಬ ವಾಕ್ಯದ ಅರ್ಥವು ನನ್ನ ಹೃದಯದಲ್ಲಿ ಸಂಪೂರ್ಣವಾಗಿ ನೆಲೆಗೊಂಡಿದೆ. ಕಾರಣ ಸರಕಾರದವರು ಈ ವಿಷಯವನ್ನು ನನ್ನ ದೃಷ್ಟಿಯಿಂದ ಕಾಣುವದು ಒಳ್ಳೆಯದಲ್ಲವೆ?

ನಾನು ಬೋಲ್ಶೆವಿಕರ ಏಜಂಟನಾಗಬೇಕೆಂದು ಎಳ್ಳಷ್ಟಾದರೂ ಮನ ಸಿನಲ್ಲಿ ಬಗೆದಿದ್ದರೆ ಯುರೋಪಕ್ಕೆ ಹೋಗುವ ಮೊದಲನೆಯ ಹಡಗದಿಂದಲೇ ನಾನು ಹೊರಡುತ್ತಿದ್ದೆನು. ಜೇನೆಯಿಂದ ಗುಣಹೊಂದಿದೊಡನೆಯೇ ಪ್ಯಾರಿಸದಿಂದ ಲೆನಿನ್ ಗಾರ್ಡವರೆಗೆ ಅಲೆದಾಡುತ್ತಿರುವ ಗುಂಪಿನವ ರೊಡನೆ ಕೆಲಕಾಲ ಕಳೆಯಬಹುದಾಗಿತ್ತು. ಅವರೊಡನೆ ಜಗತ್ಕ್ರಾಂತಿಯ ವಿಷಯಗಳನ್ನು ಚರ್ಚಿಸುತ್ತ, ಬೆಂಕಿಯನ್ನೇ ಕಾರುತ್ತಿದ್ದೆನು. ಕೇವಲ ಶಬ್ದ ಗಳಿಂದಲೇ ರಕ್ತದ ಕಾಲುವೆಗಳನ್ನು ಹರಿಸುತ್ತಿದ್ದೆನು. ಗುಡುಗಿನ ಘೋಷ ಗಳಿಂದಲೇ ನಮ್ಮ ನಾಡನ್ನು ಎಚ್ಚರಿಸುತ್ತಿದ್ದೆನು. ಆದರೆ ಆ ತರದ ಮಹಾ ತ್ವಾಕಾಂಕ್ಷೆಯಾಗಲೀ ಆತುರವಾಗಲೀ ನನಗೆ ಇರುವದಿಲ್ಲ.

ಹಿಂದುಸ್ತಾನ, ಬರ್ಮಾ, ಸಿಲೋನಗಳಿಗೆ ನಾನು ಎಂದೂ ಹಿಂತಿ ರುಗಿ ಬಾರದಿರುವದಕ್ಕಾಗಿ ನಾನು ಹೊರಡಬೇಕೆಂಬುದನ್ನು ಓದಿದಕೂಡಲೆ ಪುನಃ ಪುನಃ ಕಣ್ಣೀರುಗಳನ್ನೊರಿಸಿಕೊಂಡು ನನ್ನನ್ನೇ ನಾನು ಹೀಗೆ ಕೇಳಿ ಕೊಂಡೆನು. "ಹಿಂದುಸ್ತಾನದಲ್ಲಿರುವ ಬ್ರಿಟಿಶರಾಜ್ಯಕ್ಕೆ ನಾನು ನಿಜವಾ ಗಿಯೂ ಅಷ್ಟೊಂದು ಭಯಂಕರವಾದ ಗಂಡಾಂತರವೇ? ನನ್ನನ್ನು ಬಂಗಾ ಲದಿಂದ ಗಡಿಪಾರು ಮಾಡಿದ್ದರಿಂದಲೇ ಸರಕಾರವು ಸಾಕಷ್ಟು ನಿರ್ಭೀತವಾಗಿ ರಲಾರದೋ? ಇಲ್ಲವೆ ಇದೆಲ್ಲ ಒಂದು ಹುಡುಗಾಟಿಕೆಯೇ?" ಇದರಲ್ಲಿ ಮೊದ ಲನೆಯದು ನಿಜವಾಗಿದ್ದರೆ, ಒಂದು ದೃಷ್ಟಿಯಿಂದ, ಅದು ಒಬ್ಬ ದೇಶಸೇವ ಕನು ಆಳರಸರಿಗೆ ಇಷ್ಟೊಂದು ಭಯಂಕರನೆಂದು ಹೇಳಿದಂತೆ. ಹೀಗೆ ಹೇಳುವ

ದೆಂಪರೆ ಅದು ಅವನ ಮುಖಸ್ತುತಿಯಲ್ಲದೆ ಮತ್ತೇನು? ಆದರೆ ನನ್ನನ್ನು ಹಿಡಿಯುವ ಪೂರ್ವದಲ್ಲಿಯ ನನ್ನ ಜೀವನದ ಕಾರ್ಯಕಲಾಪಗಳನ್ನು ವಿಭಜಿಸಿ ನೋಡಿದರೆ ಹಾಗೆ ತೋರುವದಿಲ್ಲ. ಮತ್ಸರಗ್ರಸ್ತರಾದ ಕೆಲವು ಸ್ವಾರ್ಥಿಜನರು ಸರಕಾರದವರೆದುರಿಗೆ ಚಿತ್ರಿಸಿದಷ್ಟು ನನ್ನ ರಾಜಕೀಯ ವೃತ್ತಿಯು ಭೀಕರವಾಗಿರುವದಿಲ್ಲ. ಬಂಗಾಲದ ಹೊರಗಿನ ರಾಜಕಾರಣ ಗಳಲ್ಲಿ ನಾನಿನ್ನೂ ಕೈಹಾಕಿಲ್ಲ. ಮತ್ತು ಇನ್ನು ಕೆಲವು ದಿವಸಗಳ ವರೆಗೆ ಹಾಗೆ ಮಾಡುವ ಇಚ್ಛೆಯೂ ನನಗೆ ಇರುವದಿಲ್ಲ. ನಾನು ಕೆಲಸ ಮಾಡ ಬೇಕಾದರೆ ಬಂಗಾಲವು ಸಾಕಷ್ಟು ದೊಡ್ಡದಿದೆ. ನನ್ನ ಆಕಾಂಕ್ಷೆಗಳಿಗೆ ತಕ್ಕ ಪ್ರತಿಫಲವನ್ನೀಯಬಲ್ಲ ನನ್ನ ಬಂಗಾಲವನ್ನು ಬಿಟ್ಟು ಹೊರಗೆ ಏತಕ್ಕೆ ಹೋಗಲಿ? ಬಂಗಾಲ ಸರಕಾರದ ಹೊರತು ಹಿಂದುಸ್ತಾನ ಸರಕಾರ ವಾಗಲಿ ಅಥವಾ ಬೇರೆ ಯಾವ ಪ್ರಾಂತಿಕ ಸರಕಾರವಾಗಲಿ ನನಗೆ ವಿರೋಧವಾಗಿ ಏನಾದರೂ ಹೇಳಲಿಕ್ಕೆ ಶಕ್ಯವಿದೆಯೆಂದು ನಾನು ತಿಳಿಯುವ ದಿಲ್ಲ. ಯಾಕೆಂದರೆ ಕಳೆದ ಆರು ವರ್ಷಗಳಲ್ಲಿ ನನ್ನ ಬಳಗದವರ ಭೆಟ್ಟಿ ಗಾಗಲಿ, ಕಾಂಗ್ರೆಸದ ಅಧಿವೇಶನಕ್ಕಾಗಲಿ ಇಲ್ಲವೆ ಅಖಿಲ ಭಾರತ ಕಾಂಗ್ರೆಸ ಕಮಿಟಿಯ ಸಭೆಗಳಿಗಾಗಲಿ ಅಲ್ಲದೆ ಬಂಗಾಲವನ್ನು ಬಿಟ್ಟು ನಾನು ಹೊರ ಬಿದ್ದೇ ಇಲ್ಲ. ಅಂದಮೇಲೆ ಉಳಿದ ಪ್ರಾಂತಿಕ ಸರಕಾರಗಳಲ್ಲಿ ನನ್ನ ವಿಷ ಯಕ್ಕೆ ವಿಷಮ ಭಾವನೆಯು ಉಂಟಾಗುವದರ ಕಾರಣವೇನು? ದೇಶಕ್ಕೆ ನಾನೊಂದು ಗಂಡಾಂತರವೆಂದು ತಿಳಿದು ಸರಕಾರವು ಹಿಂದುಸ್ತಾನ, ಬರ್ಮಾ, ಸಿಲೋನಗಳಲ್ಲಿ ನಾನು ಕಾಲಿಡದಂತೆ ಮಾಡುವದರ ಅರ್ಥವೇನು? ಸಿಲೋನವು ಬ್ರಿಟಿಶರ ವಸಾಹತಿಯಾಗಿದ್ದರೂ ಬಂಗಾಲ ಸರಕಾರವಾಗಲಿ ಅಥವಾ ಹಿಂದುಸ್ತಾನ ಸರಕಾರವಾಗಲಿ ಸಿಲೋನದ ಮೇಲೆ ತಮ್ಮ ಅಧಿಕಾರ ವನ್ನು ನಡೆಯಿಸಬಹುದೋ ಎಂಬುವದರ ವಿಷಯಕ್ಕೆ ನನಗೆ ಸಂಶಯಬರು ತ್ತದೆ. ಇಲ್ಲದಿದ್ದರೆ ಇಂಥ ಅಸಂಬದ್ಧ ಕರಾರನ್ನು ನನ್ನ ಮೇಲೆ ಹೇರಲು ಸರ ಕಾರವು ಯಾಕೆ ಹವಣಿಸುತ್ತದೆ.

ಬಂಗಾಲ ಸರಕಾರವು ನನ್ನ ಚಲನವಲನೆಗಳನ್ನೆಲ್ಲ ತನ್ನ ಸ್ವಾಧೀನ ವಲ್ಲಿಟ್ಟುಕೊಳ್ಳಬೇಕೆಂದಿತ್ತು. ಆದರೆ ನಾನು ಸ್ವತಂತ್ರನಾಗಿದ್ದಾಗ ಬಹಳ ಚಳವಳಿ ಮಾಡಲಿಲ್ಲ. ೧೯೨೨ನೆಯ ಅಕ್ಟೋಬರದಿಂದ ೧೯೨೪ನೆಯ ಅಕ್ಟೋ ಬರದವರೆಗೆ ಎರಡಕ್ಕಿಂತ ಹೆಚ್ಚು ಪ್ರಸಂಗಗಳಲ್ಲಿ ನಾನು ಕಲ್ಕತ್ತೆಯನ್ನು ಬಿಟ್ಟು

ಕದಲಲಿಲ್ಲ. ಒಮ್ಮೆ ಖುಲ್ನಾ ಜಿಲ್ಲಾ ಸಭೆಗೆ ಹೋಗುವದಕ್ಕಾಗಿ, ಮತ್ತೊಮ್ಮೆ ಒಂದು ಬಗೆಯ ಲಾಭದಾಯಕ ದೃಷ್ಟಿಯಿಂದ ಲೆ. ಕೌನ್ಸಿಲ್ ಚುನಾವಣೆಯ ಕಾಲಕ್ಕೆ ನಾಡಿಯಾ ಜಿಲ್ಹೆಗೆ ಮಾತ್ರ ಹೋಗಿದ್ದೆನು. ೧೯೨೪ನೆಯ ಫೆಬ್ರುವರಿಯಿಂದ ಅಕ್ಟೋಬರದ ವರೆಗೆ ಕಲ್ಕತ್ತೆಯನ್ನು ಬಿಟ್ಟು ನಾನೆಲ್ಲಿಯೂ ಸರಿಯಲ್ಲಿಲ್ಲ. ಸಿರಜಗಂಜಸಭೆಯೊಡನೆ ನನ್ನ ಸಂಬಂಧವನ್ನು ಸಿದ್ಧಮಾಡುವ ಪ್ರಯತ್ನಗಳೆಲ್ಲ ಅಸೂಯೆಯಿಂದ ಕೂಡಿದವುಗಳೂ ವ್ಯರ್ಥವಾದವುಗಳೂ ಎಂದು ಸಿದ್ಧವಾಯಿತು. ಯಾಕೆಂದರೆ ಆ ಸಭೆ ಕೂಡುವ ಕಾಲಕ್ಕೆ ನಾನು ಅವೇ ಕಲ್ಕತ್ತಾನಗರ ಸಭೆಯ ಚೀಫ್ ಎಗ್ಸ್ಯಿಕ್ಯೂಟಿವ್ಹ (ಮುಖ್ಯಕಾರ್ಯನಿರ್ವಾಹಕ) ಕೆಲಸದ ಚಾರ್ಜು ತೆಗೆದುಕೊಂಡದ್ದರಿಂದ ಬಹಳ ಗಡಬಡಿಯಲ್ಲಿದ್ದೆನು. ಆ ಪೌರಸಭೆಯಲ್ಲಿ 'ಕಸಗೂಡಿಸುವವರ ಸಂಪು' ಮುರಿಯುವವೇ ಮೊದಲಾದ ಕೆಲಸಗಳು ನನ್ನನ್ನು ಒಂದು ನಿಮಿಷವಾದರೂ ಕಲ್ಕತ್ತೆಯಿಂದ ಹೊರಗೆ ಹೋಗಗೊಡುವಂತಿದ್ದಿಲ್ಲ. ೧೯೨೪ನೆಯ ಮೇ ಮತ್ತು ಅಕ್ಟೋಬರಗಳ ನಡುವಿನ ನನ್ನ ಕಾರ್ಯಕ್ರಮಗಳನ್ನು ವಿವರಿಸುವದು ಇಲ್ಲ ಅವಶ್ಯವಿಲ್ಲ. ಅವು ಸರ್ವರಿಗೂ ವಿದಿತವಾಗಿವೆ. ನನ್ನನ್ನು ಕೈಸೆರೆ ಹಿಡಿಯುವವರ ಪೂರ್ವಪಲ್ಲಿಯ ನನ್ನ ಆಂದೋಲನಗಳು ಸರಕಾರಕ್ಕೆ ಸಂಪೂರ್ಣವಾಗಿ ತಿಳಿದಿವೆ. ನನ್ನ ಚಳವಳಿಗಳಿಗೆ ತಡೆಮಾಡಬೇಕೆಂಬುದೇ ನನ್ನನ್ನು ಶಿಕ್ಷಿಸಿದ್ದರ ಉದ್ದೇಶವಾಗಿದ್ದರೆ ಸರಕಾರವು ನನ್ನನ್ನು ಹಿಡಿದು ಬಂಧನದಲ್ಲಿರಿಸುವ ಅವಶ್ಯಕತೆಯೇ ಇರುತ್ತಿರಲಿಲ್ಲ.

ಸರಕಾರದವರ ಸೂಚನೆಯು ಕಠಿಣ ಕಲ್ಲಿನಂತೆ ಇದೆಯೆಂದು ಒಂದು ದೃಷ್ಟಿಯಿಂದ ನನಗೆ ಹೊಳೆಯಿತು. ನಾನು ಈಗ ಎರಡು ವರ್ಷಗಳಿಂದ ಮನೆಯಿಂದ ಅಗಲಿ ದೂರವಿರುವದು ಸರಕಾರಕ್ಕೆ ಗೊತ್ತಿದೆ. ಈ ಅವಧಿಯಲ್ಲಿ ನನ್ನ ಬಂಧು-ಬಳಗದವರನ್ನೂ ತಾಯಿ-ತಂದೆಗಳನ್ನೂ ಕಂಡಿಲ್ಲವೆಂಬದೂ ವಿದಿತವದೆ. ಆದಾಗ್ಯೂ ಈಗ ಕೂಡ ನಾನು ಅವರನ್ನು ಕಾಣದೆ ಹೊರಹೊರಗಿನಿಂದಲೇ ಹಾಗೇ ಕನಿಷ್ಟ ಮೂರು ನಾಲ್ಕು ವರ್ಷಗಳವರೆಗಾದರೂ ಹೋಗಬೇಕೆಂದು ಅವರು ಸೂಚಿಸುತ್ತಾರೆ. ಇದು ನನಗೆ ನೀಗದ ಮಾತಾಗಲಿಕ್ಕಿಲ್ಲವೇ? ನನ್ನನ್ನು ಪ್ರೀತಿಸುವ ಅಸಂಖ್ಯಾಕ ಜನರಿಗಂತೂ ಇದು ಸಹಿಸಲಾಗದಂಥ ಸಂತಾಪವು. ಪೌರ್ವಾತ್ಯರು ತಮ್ಮ ಬಂಧು-ಬಳಗದವರೊಡನೆ ಬೆಳೆಸಿಕೊಳ್ಳುತ್ತಿರುವ ಆಳವಾದ ಪ್ರೇಮದ ನೆಲೆಯು

ಪಾಶ್ಚಾತ್ಯರಿಗೆ ತಿಳಿಯಲಾರದು. ಈ ಪ್ರಕಾರದ ಕಠಿಣ ಸೂಚನೆಯನ್ನು ಬುದ್ಧಿಪೂರ್ವಕ ತರಬೇಕೆಂಬುದು ಸರಕಾರೀ ಅಧಿಕಾರಿಗಳ ಇಚ್ಛೆಯಾಗಿರಲಿಕ್ಕಿಲ್ಲ. ಅವರ ಅಜ್ಞಾನವೇ ಇದಕ್ಕೆಲ್ಲ ಕಾರಣವಾಗಿರಬಹುದು. ಹೇಗಿದ್ದರೂ ಸರಿ, ಇದು ಸರಕಾರದ ಕಲ್ಲೆದೆಯ ಕುರುಹೆಂದು ಮಾತ್ರ ಹೇಳದಿರಲಾರೆನು. ನಾನಿನ್ನೂ ಲಗ್ನವಾಗಿಲ್ಲವೆಂದಾಕ್ಷಣಕ್ಕೆ ನನಗೆ ಕುಟುಂಬದ ಭಾರವೇ ಇಲ್ಲವೆಂದೂ, ಯಾರಲ್ಲಿಯೂ ನನ್ನ ಕೌಟುಂಬಿಕ ಪ್ರೇಮವೇ ಇಲ್ಲವೆಂದೂ ತಿಳಕೊಳ್ಳುವದು ಪಾಶ್ಚಾತ್ಯರ ಮನಸ್ಸಿಗೆ ಮಾತ್ರ ಸ್ವಾಭಾವಿಕವೆಂದು ತೋರುತ್ತದೆ. ಆದರೆ ನಮ್ಮನ್ನಾಳುವ ನಮ್ಮ ಹಿತಚಿಂತಕರು ನಮ್ಮ ಮಾನಸಿಕ ಬೆಳವಣಿಗೆಯನ್ನೂ ಅಂತಃಕರಣದ ಪರಿಯನ್ನೂ ಅರಿತಿರುವದು ಅವರ ಕರ್ತವ್ಯವಲ್ಲವೇ? ಈಗ ಎರಡೂವರೆ ವರ್ಷಗಳ ವರೆಗೆ ನನ್ನನ್ನು ಬಂಧನದಲ್ಲಿ ಕೊಳೆಹಾಕಿದ್ದನ್ನು ಸರಕಾರವು ಮರೆತಂತೆ ಕಾಣುತ್ತದೆ. ಸಂಕಟವನ್ನನುಭವಿಸದವರ ಕಲ್ಪನೆಗೆ ಅದು ಹೇಗೆ ಬಂದೀತು! ಇಲ್ಲಿಯ ವರೆಗೆ ಅನ್ಯಾಯವಾಗಿ ನನ್ನನ್ನು ಬಂಧನದಲ್ಲಿರಿಸಿ ನನ್ನ ಆರೋಗ್ಯವನ್ನೇ ಹಾಳುಮಾಡಿದರು. ಗುಪ್ತಬಂಡಾಯದ ಕ್ರಾಂತಿಕಾರ ಸದಸ್ಯನೆಂಬ ಆರೋಪವನ್ನು ನನ್ನ ತಲೆಯಮೇಲೆ ಹೇರಿದರು. ಶಸ್ತ್ರಾಸ್ತ್ರಗಳನ್ನು ಸಜ್ಜುಗೊಳಿಸುವದು, ಬಾಂಬುಗಳನ್ನು ತಯಾರಿಸುವದು, ಪೋಲೀಸ ಅಧಿಕಾರಿಗಳನ್ನು ಕೊಲ್ಲುವದು ಮೊದಲಾದ ಕಾರ್ಯಗಳಲ್ಲಿ ನನ್ನ ಅಂಗವಿದೆ ಎಂದು ತಿಳಿದು ನನ್ನ ಜವಾಬನ್ನು ಕೇಳಿದರು. ಈಗ ಮರಣಾಧೀನರಾದ ಸರ್ ಎಡ್ವರ್ಡ ಮಾರ್ಶಲ್‌ರಾಗಲಿ ಅಥವಾ ಸರ್ ಜಾನ್‌ಸಾಯಮನ್‌ರಾಗಲಿ ಇಂಥ ಪ್ರಶ್ನೆಗೆ "ನಾನು ನಿರಪರಾಧಿ" ಎಂಬುದಕ್ಕಿಂತ ಹೆಚ್ಚಿನ ಉತ್ತರವನ್ನೇನಾದರೂ ತಮ್ಮ ರಕ್ಷಣೆಗೋಸುಗ ಕೊಡಬಹುದಾಗಿತ್ತೋ ಎಂದು ನನಗೆ ಆಶ್ಚರ್ಯವಾಗುತ್ತಿದೆ. ನಾನಾದರೂ ಅಷ್ಟೇ ಹೇಳಿದೆನು. ಎರಡನೆಯ ಸಾರೆ ಸರಕಾರದವರು ಈ ಕುಟಿಲ ಆರೋಪಗಳನ್ನು ನನ್ನೆದುರಿಗಿಟ್ಟಾಗ ನನ್ನಷ್ಟಕ್ಕೆ ನಾನೇ ಹೀಗೆ ಹೇಳಿಕೊಂಡೆನು. "ಎಲ್ಲರನ್ನುಳಿದು ನಾನೇ ಏಕೆ ಪೋಲೀಸರ ದಬ್ಬಾಳಿಕೆಗೆ ತುತ್ತಾಗಬೇಕು?"—ಸರಕಾರಕ್ಕೆ ಸರಿಯಾದ ತಿಳುವಳಿಕೆಯನ್ನು ಮಾಡಿಕೊಡಲು ನನ್ನಲ್ಲಿ ಸಾಕಷ್ಟು ಶಕ್ತಿ ಇದೆಯೆಂದು ನಾನು ತಿಳಿಯುತ್ತೇನೆ. ಬಂಗಾಲ ಸರಕಾರವು ನನ್ನನ್ನು ಕೈದುಮಾಡಿದಂದಿನಿಂದ ನನ್ನ ಕುಟುಂಬ ಪೋಷಣೆಗೆ ಭತ್ತೆಯನ್ನಾದರೂ ಕೊಟ್ಟಿಲ್ಲ ಅಥವಾ

ನನ್ನನ್ನವಲಂಬಿಸಿದ ನನ್ನ ಅನುಯಾಯಿಗಳ ರಕ್ಷಣೆಯನ್ನಾದರೂ ಚನ್ನಾಗಿ ಮಾಡಿಲ್ಲ. ಇದನ್ನೆಲ್ಲ ಕಂಡು ನ್ಯಾಯಿಸರಾಯರ ಕಡೆಗೆ ನಾನೊಂದು ಅರ್ಜಿಯನ್ನು ಕಳಿಸಿದ್ದೆನು. ಅದನ್ನು ಬಂಗಾಲ ಸರಕಾರವು ಮಧ್ಯದಲ್ಲಿಯೇ ನುಂಗಿ ನೀರು ಕುಡಿಯಿತು. ಇಷ್ಟೆಲ್ಲ ಮಾಡಿದರೂ ಸಮಾಧಾನವಾಗದೆ ಇನ್ನೂ ಮೂರುವರ್ಷ ನನ್ನನ್ನು ಗಡಿಪಾರು ಮಾಡಬೇಕೆಂದು ಸರಕಾರವು ಬಯಸುತ್ತದೆ. ನನ್ನ ಜೀವನದ ವೆಚ್ಚವನ್ನೆಲ್ಲ ನಾನು ಯುರೋಪದಲ್ಲಿ ದುಡಿದು ಗಳಿಸಬೇಕಂತೆ! ಇದು ಸರಿಯಾದ ಮತ್ತು ಸಬಲವಾದ ಸೂಚನೆಯಾಗಬಹುದೋ? ಸರಕಾರವು ಯಾವದೇತರದ ನೈತಿಕ ಹಂಗನ್ನು ಮನ್ನಿಸದಿದ್ದರೂ – ದುರ್ನೀತಿಯೇ ಈಗಿನ ರಾಜನೀತಿಯಾಗಿದ್ದರೂ - ಕನಿಷ್ಟ ಪಕ್ಷಕ್ಕೆ ಗಣಿಸಿಳರಲ್ಲ ನನ್ನನ್ನು ಹಿಡಿದಾಗ್ಗೆ ನಾನು ಯಾವ ಆರೋಗ್ಯಾವಸ್ಥೆಯಲ್ಲಿದ್ದೆನೋ ಅದೇ ಸ್ಥಿತಿಯಲ್ಲಿಯೇ ನನ್ನನ್ನು ಅದು ಬಿಡತಕ್ಕದ್ದಲ್ಲವೇ? ಬಂಧನದಲ್ಲಿರಿಸಿದ್ದರಿಂದ ನನ್ನ ದೇಹಾರೋಗ್ಯವು ನಾಶಹೊಂದಿದ್ದರೆ ಅದನ್ನು ತುಂಬಿಕೊಡುವದು ಸರಕಾರದ ಧರ್ಮವಲ್ಲವೇ? ನಾನು ಪುನಃ ಮೊದಲಿನಂತೆ ಆರೋಗ್ಯವುಳ್ಳವನೂ ಸದೃಢನೂ ಆಗುವದಕ್ಕೆ ಹತ್ತುವ ಖರ್ಚನ್ನೆಲ್ಲ ಸರಕಾರವು ವಹಿಸಬೇಡವೇ? ನೈತಿಕ ಅಂಜಿಕೆಯನ್ನು ತೊರೆದ ಸರಕಾರವು ಅದೆಷ್ಟು ದಿವಸ ಬಾಳುವದೋ ನೋಡಬೇಕು. ನನ್ನನ್ನು ಪರದೇಶಕ್ಕೆ ಒಯ್ಯುವ ಮೊದಲು ಒಮ್ಮೆಯಾದರೂ ಮನೆಗೆ ಹೋಗಗೊಟ್ಟಿದ್ದರೆ ಅವರ ಸೂಚನೆಯಲ್ಲಿ ಭೂತದಯೆ ಇತ್ತೆಂದು ಅನ್ನಬಹುದಾಗಿತ್ತು. ನನ್ನ ಬೇನೆಯು ವಾಸಿಯಾಗುವವರೆಗೆ ಯುರೋಪದೊಳಗಿನ ವೆಚ್ಚವನ್ನೆಲ್ಲ ಸರಕಾರವು ವಹಿಸಿದ್ದರೆ ಆ ಸೂಚನೆಯು ಮನ್ನಣೆಗೆ ಅರ್ಹವಾಗಿರಬಹುದಾಗಿತ್ತು. ಮತ್ತು ವಾಸಿಯಾದನಂತರ ಯಾವತರದ ತೊಂದರೆಗಳಿಲ್ಲದೆ ಪುನಃ ನನ್ನನ್ನು ಮಾತೃಭೂಮಿಗೆ ಬರಗೊಡುವಂತಿದ್ದರೆ ಆ ಸೂಚನೆಯಲ್ಲಿ ಪ್ರೇಮದ ಸೆಲೆ ಇರಬಹುದೆಂದು ಕಲ್ಪಿಸಬಹುದಾಗಿತ್ತು.

ಕೊನೆಯದೆಂದರೆ ಸರಕಾರದವರು ನನ್ನಮೇಲೆ ಮುಸುಕಿನೊಳಗಿಂದಲೇ ಡೊಣ್ಣೆಯನ್ನೆತ್ತಿದ್ದಾರೆ. ಅಂದವಾದ ಮಲಮಲ್ಲಿನ ಕೈಚೀಲಗಳೊಳಗೆ ಅಡಗಿರುವ ಹುಲಿಯುಗುರನ್ನು ನನ್ನಮೇಲೆ ಪ್ರಯೋಗಿಸಿದ್ದಾರೆ. ಮೆಹರ್ಬಾನ ಸಾಹೇಬರು "ಬಂಗಾಲ ಕ್ರಿಮಿನಲ್ ಲಾ ಅಮೆಂಡಮೆಂಟ ಆ್ಯಕ್ಟಿನ ದಿವಸಗಳು ತೀರುವವರೆಗೆ ಬೋಸರನ್ನು ಬಿಡದಿರಲಿಕ್ಕೆ ಬರುವದೆಂದು ಸರಕಾರವೂ

ಮತ್ತು ಬೋಸರೂ ತಿಳಿದುಕೊಳ್ಳಲಿ." ಎಂದು ಅಂದಿದ್ದಾರೆ. ಇದಕ್ಕೆ ನನ್ನ ಪೂರ್ಣ ಸಮ್ಮತಿಯಿದೆ. ನಾನು ಇದಕ್ಕಿಂತಲೂ ಮುಂದುವರಿದು ತಮ್ಮ ಮನಸಿಗೆ ಸಾಕೆನಿಸುವವರೆಗೆ ನನ್ನನ್ನು ಬಂಧನದಲ್ಲಿರಿಸಲೆಂದು ನಾನು ಹೇಳು ತ್ತೇನೆ. ಯಾಕೆಂದರೆ ಅವರು ಹೇಳುವ ಆ ಕಾಯಿದೆಯ ಅಮಲು ಮುಗಿದೊಡನೆಯೇ ಅದರ ಪುನರಾವೃತ್ತಿಯನ್ನು ಹೊರಡಿಸಲಿಕ್ಕೆ ಅವರಿಗೆ ಅಧಿಕಾರವಿದೆ; ಅಥವಾ ಬೇಕಾದರೆ ೧೮೧೮ರ ೩ನೆಯ ರೆಗ್ಯೂಲೇಶನ್ ಪ್ರಕಾರ ನನ್ನನ್ನು ಬೇರೊಂದು ಹೊಸ ಕಟ್ಟಳೆಯ ಮೇರೆಗೆ ಬಂಧಿಸಿದರೂ ಬಂಧಿಸಬಹುದು. ನಾನು ಮಿ. ಲೊಮನ್ನರನ್ನು ಮೊದಲುಮಾಡಿಕೊಂಡು ಅನೇಕ ಸರಕಾರೀ ಅಧಿಕಾರಿಗಳಿಗೆ ನಿಜವಾಗಿಯೂ ಹೀಗೆಯೇ ಹೇಳಿದ್ದೇನೆ: ನಾನು ಸಂಪೂರ್ಣ ನಿರಾಶನಾಗಿದ್ದೇನೆಂದೂ ಬೇಕಾದರೆ ಸರಕಾರವು ನನ್ನೆಲ್ಲರನ್ನು ಆಜೀವ ಬಂಧನದಲ್ಲಿರಿಸಿಕೊಂಡರೂ ಕೇಳುವವರಿಲ್ಲವೆಂದೂ ಅವರಿಗೆ ಸ್ಪಷ್ಟವಾಗಿ ನಾನು ತಿಳಿಸಿದ್ದೇನೆ. ಲೆಜಿಸ್ಲೇಟಿವ್ಹ ಕೌನ್ಸಿಲ್ ಮತ್ತು ಅಸೆಂಬ್ಲಿಗಳ ಎಷ್ಟೋ ಸದಸ್ಯರು ಈ ಕೃತಿಗೆ ಸಿಟ್ಟಿಗೆದ್ದು 'ಕಾರ್ಯನಿರ್ವಾಹಕ ಸದಸ್ಯರ' ಭತ್ತೆಗೆ ಚಕ್ರವನ್ನು ತಂದರು. ಅದರಿಂದ ಏನೂ ಕಾರ್ಯವಾಗಲಿಲ್ಲವೆಂಬುದನ್ನು ನಾನು ಬಲ್ಲೆನು. ಆದರೆ ನಮ್ಮನ್ನು ಆಜನ್ಮ ಸೆರೆಮನೆಯಲ್ಲಿರಿಸುವದು ಸರಕಾರಕ್ಕೆ ಬೇಕಾಗಿಲ್ಲನೆಂಬ ಮಾತನ್ನು ನಾನು ಇನ್ನೂ ಕಲಿಯಬೇಕಾಗಿದೆ.

ಪ್ರಾತಃಸ್ಮರಣೀಯರಾದ ದೇಶಬಂಧು ದಾಸರು ಅನ್ನುತ್ತಿದ್ದ ಮಾತುಗಳು ಈಗ ನನಗೆ ನೆನಪಾಗುತ್ತವೆ. ನನ್ನ ನಿರಾಶೆಯನ್ನು ಕಂಡು ಅವರು ಒಮ್ಮೊಮ್ಮೆ ನನಗೆ "ಮುದಿ ತರುಣ" ("Young old man") ನೆಂದು ಕರೆಯುತ್ತಿದ್ದರು. ಒಂದು ರೀತಿಯಿಂದ ನಾನು ನಿರಾಶಾವಾದಿಯೇ ಆಗಿರುವೆನು. ಯಾವಾಗಲೋ ಒದಗಬಹುದಾದ ಅಂತಿಮ ಅನಿಷ್ಟವನ್ನು ಸಹ ನನ್ನೆದುರಿಗೆ ಕಲ್ಪಿಸಿಕೊಂಡು ನಾನು ವಿಚಾರಿಸುತ್ತೇನೆ. ಈ ಪ್ರಸಂಗದಲ್ಲಿ ಸರಕಾರದ ಸೂಚನೆಗೆ ನಾನು ಒಪ್ಪದಿದ್ದರೆ ಒದಗಬಹುದಾದ ಸಂಕಟಾತಿಶಯಗಳನ್ನೆಲ್ಲ ಮೊದಲೇ ವಿಚಾರಿಸಿದ್ದೇನೆ. ಆದರೆ ಜನ್ಮಭೂಮಿಯಿಂದ ಗಡಿಪಾರು ಮಾಡಲ್ಪಟ್ಟು ಆಮರಣ ಪರದೇಶದಲ್ಲಿ ಜೀವಿಸುವದು, ಸಾಯುವವರೆಗೆ ಜೇಲಿನಲ್ಲಿ ಕೊಳೆಯುವದಕ್ಕಿಂತ ಒಳ್ಳೆಯದೆಂದು ನನ್ನ ಮನವೊಲಿಸಲು ನನ್ನಿಂದಾಗಲಿಲ್ಲ. ಆನಂದವಿಹೀನವಾದ ಈ ಕಷ್ಟಮಯ ಮಾರ್ಗವನ್ನು ಅವಲಂಬಿಸಲು ನಾನು ಎದೆಯೊಡೆಯುವದಿಲ್ಲ. "**ಕೀರ್ತಿ ಪಥಗಳೆಲ್ಲ**

**ಕೊನೆಗೆ ಮರಣದ ಮಾರ್ಗಗಳೇ"** ಎಂಬ ಉಕ್ತಿಯಲ್ಲಿ ನನ್ನ ನಂಬುಗೆ ಇದೆ.

ಸರಕಾರೀ ಸೂಚನೆಗಳ ಸಾಧಕ ಬಾಧಕ ವಿಷಯಗಳನ್ನೆಲ್ಲ ಈಗ ಹೇಳಿದ್ದಾಯಿತು. ಇನ್ನು ನನ್ನ ಬಿಡುಗಡೆಯ ಲಕ್ಷಣಗಳಿಲ್ಲವೆಂದು ಯಾರೂ ದುಃಖಿಸಕೂಡದು. ಎಲ್ಲಕ್ಕೂ ಮಹತ್ವದ್ದೆಂದರೆ ತಾಯಿತಂದೆಗಳನ್ನು ಸಂತೈಸಿರಿ. ಅವರ ಪರಿಸ್ಥಿತಿಯು ಈಗ ಬಹಳ ಕಠಿಣವಾಗಿರಲಿಕ್ಕೆ ಬೇಕು. ನನ್ನನ್ನು ಪ್ರೀತಿಸುವವರೆಲ್ಲರ ದುಃಖಗಳನ್ನೂ ಶಾಂತಗೊಳಿಸಿರಿ. ನಾವು ಬಹಳವಾಗಿ ಕಷ್ಟ ಸಹನ ಮಾಡಬೇಕಾಗಿದೆ. ಅಮೌಲ್ಯವಾದ ಸ್ವಾತಂತ್ರ್ಯವನ್ನು ದೊರಕಿಸುವ ಪೂರ್ವದಲ್ಲಿ ನಾವು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಕಡುತರವಾದ ದುಃಖವನ್ನು ಎದುರಿಸಲೇ ಬೇಕಾಗಿದೆ. ನನ್ನ ವಿಚಾರದೊಂದಿಗೆ ನಾನು ಶಾಂತಿಯಿಂದ ಇರುವಷ್ಟು ಆಶೀರ್ವಾದವನ್ನಾದರೂ ದೇವರು ದಯಪಾಲಿಸಿದ್ದಾನೆ. ಇಷ್ಟೇ ಸಾಕು; ನಾನೇ ಧನ್ಯನೆಂದು ಭಾವಿಸುವೆ.

**ಪರಮಾತ್ಮನು ಹಾಗೆ ಇಚ್ಛಿಸಿದರೆ ಬೇಕು ಬೇಕಾದ ಅಗ್ನಿ ಪ್ರವೇಶದ ಪರೀಕ್ಷೆಯನ್ನು ನಾನು ಸಂಪೂರ್ಣ ಸಮಾಧಾನದಿಂದ ಎದುರಿಸಬಲ್ಲೆನು. ನನ್ನ ದೀನ ದೃಷ್ಟಿಯಿಂದ ನಾನು ಅದೊಂದು ತಪಸ್ಸೆಂದೇ ಆಚರಿಸುವೆನು. ನನ್ನ ರಾಷ್ಟ್ರವು ಹಿಂದೆ ಮಾಡಿದ ಪಾಪಗಳನ್ನು ತೊಳೆಯಲು ನಾನು ತಪಸ್ಸನ್ನಾಚರಿಸುತ್ತಿರುವೆನೆಂದು ತಿಳಿಯುತ್ತೇನೆ. ಈ ಕರ್ತವ್ಯದಲ್ಲಿಯೇ ನನ್ನ ಸುಖವಿದೆ ಎಂದು ಭಾವಿಸುವೆನು. ಇಂಥ ಪ್ರಾಯಶ್ಚಿತ್ತದಿಂದಲೇ ನಿಜವಾದ ಸುಖವು ಲಭಿಸುವದೆಂದು ನಾನು ನಂಬುತ್ತೇನೆ.**

**ರಾಷ್ಟ್ರವು ನಮ್ಮ ವಿಚಾರಗಳನ್ನು ಮರೆಯಲಾರದು. ನಮ್ಮ ಕಲ್ಪನೆಗಳು ಮಾಯವಾಗದೆ ರಾಷ್ಟ್ರದ ನೆನಪಿನಲ್ಲಿ ಉಳಿಯುವವು. ನಮ್ಮ ಕಲ್ಪನಾಪುಷ್ಪಗಳು ಕಾಲರಾಯನ ಬಿಸಿಯುಸಿರಿನಿಂದಲೂ ಬಾಡವು. ನಮ್ಮ ಪ್ರೇಮದ ಕನಸುಗಳು ಭಾವೀ ಜನಾಂಗಕ್ಕೆ ವಂಶಪರಂಪರೆಯಾಗಿ ಸಾಗುವವು. ಈ ತರದ ನಂಬುಗೆಯೇ ಕಷ್ಟಗಳಲ್ಲಿ ನನ್ನನ್ನು ಎತ್ತಿಹಿಡಿಯುವದೆಂದು ನನ್ನ ಭರವಸೆ ಆದೆ.**

**ದಯವಿಟ್ಟು ಮಾರುತ್ತರವನ್ನೀಯಬೇಕಾಗಿ ಬೇಡುವ,**

ತಮ್ಮ ಅತ್ಯಂತ ಪ್ರೇಮದ,

**ಸುಭಾಸ**

## ೫. ಸೆರೆಮನೆಯಿಂದ ಮುಕ್ತತೆ

ಬರ್ಮಾದ ಎಸ್. ಎಸ್. ಅರೊಂದಾ (S. S. Aronda.) ಟಪಾಲ ನಾವೆಯು ಸುಭಾಸಚಂದ್ರ ಬೋಸರನ್ನು ಕಲ್ಕತ್ತೆಗೆ ತರುವದೆಂಬ ದಟ್ಟ ವಾರ್ತೆಯು ಜನತೆಯಲ್ಲಿ ಮೊದಲೆ ಹಬ್ಬಿಕೊಂಡಿದ್ದರಿಂದ ೧೯೨೭ನೇ ಇಸ್ವಿ ಮೇ ೧೫ನೆಯ ತಾರೀಖಿನ ಆದಿತ್ಯವಾರ ದಿವಸ ಅಸಂಖ್ಯಾಕ ಜನರು ಆತುರರಾಗಿ ಕಾದಿದ್ದರು. ಓಟ್ರ್ಯಾಮ ಘಾಟದಲ್ಲಿ ಜನರು ಕಿಕ್ಕಿರಿದು ಸೇರಿ ಹಡಗ ನಿರೀಕ್ಷಣೆ ಮಾಡುತ್ತ ನಿಂತಿದ್ದರು. ಮಧ್ಯಾಹ್ನದ ೧೨ ಘಂಟೆಯು ಅದು ಬರುವ ನಿತ್ಯದ ವೇಳೆಯಾಗಿತ್ತು. ಆದರೂ ಜನರು ಮುಂಜಾವಿನಿಂದಲೇ ನಾಮುಂದೆ ನೀಮುಂದೆ ಎಂದು ತವಕದಿಂದ ನಡೆದಿದ್ದರು. ಸುಭಾಸಚಂದ್ರರು ಬರುವರೆಂಬ ನಂಬುಗೆಯಾದರೂ ಎಷ್ಟು ಜನರಿಗಿತ್ತೋ ತಿಳಿಯದು. ಒಂದು ವೇಳೆ ಬಂದರೂ ಆ ಘಾಟದಲ್ಲಿ ಅವರು ಇಳಿಯುವದಿಲ್ಲವೆಂದು ಅನೇಕರ ತಿಳುವಳಿಕೆ.

ಆ ದಿವಸ ಮುಂಜಾನೆ ೧೧ ಘಂಟೆಯ ಸುಮಾರಿಗೆ ಹೊಳೆಯ ಮೇಲ್ಗಡೆಗೆ ಬರುತ್ತಿದ್ದ ಹಡಗವು ನಡುಪ್ರವಾಹದಲ್ಲಿಯೇ ನಿಂತಿತು. ಮೆ. ಗವ್ಹರ್ನರ ಸಾಹೇಬರ ಹಡಗು ನಿಲ್ಲಿಸುವ ಸ್ಥಳವಾದ "ಕ್ವೀನ ಮೇರಿ" ಗೆ ಹೊಂದಿವನ

ಸ್ಪತಿ ಶಾಸ್ತ್ರ ತೋಟದ ಸಮೀಪದವರೆಗೆ ಮಾತ್ರ ಅದು ಬಂದಿತ್ತು. ಬಂಧು ಶರತ್‌ಚಂದ್ರ ಬೋಸರು ಆರೊಂದಾದಲ್ಲಿ ನಡೆದರು. ಆಮೇಲೆ ಸುಭಾಸ ಚಂದ್ರರನ್ನು ಸಾವಕಾಶವಾಗಿ ಪಲ್ಲಕ್ಕಿಯೊಳಗೆ ಇಳಿಸಿಕೊಂಡರು.

ಬೋಸರು ಒಂದು ತಾಸಿನವರೆಗೆ ವಿರಾಮ ತೆಗೆದುಕೊಂಡರು. ನಾಲ್ಕು ಜನ ಸುಪ್ರಸಿದ್ಧ ಡಾಕ್ಟರರು ಆಮೇಲೆ ಇವರ ದೇಹ ಪರೀಕ್ಷೆ ಮಾಡಿದರು. ಮೆ. ಗವ್ಹರ್ನರರ ಸ್ವಂತ ಮನೆಯ ಡಾಕ್ಟರರಾದ ಲೆಫ್ಟಿನೆಂಟ ಕರ್ನಲ್ ಸ್ಯಾಂಡಿಸ್ (Lt. Col. Sandys), ಸರ್ ನೀಲರತ್ನ ಸರಕಾರ, ಡಾ. ಬಿ. ಸಿ. ರಾಯರೆಲ್ಲ ಒಂದೇ ಅಭಿಪ್ರಾಯಪಟ್ಟರು. ಬೋಸರು ಭಯಂಕರ ಬೇನೆಗೆ ತುತ್ತಾಗಿದ್ದಾರೆಂದು ಒಮ್ಮನಸ್ಸಿನಿಂದ ಎಲ್ಲರೂ ಹೇಳಿದರು. ಇವರು ಆ ಕಾಲಕ್ಕೆ ಸೊರಗಿ ಸಾಯಲಾಗಿದ್ದರು. ದೇಹದ ಸ್ಥಿತಿಯು ನಿಸ್ತೇಜವೂ ಶರೀರವು ಬಡಕವೂ ಆಗಿ ಗೊತ್ತುಹತ್ತದಂತೆ ಆಗಿದ್ದರು. ೨-೩ ತಿಂಗಳ ಹಿಂದೆ ಇವರನ್ನು ನೋಡಿದವರು ಸಹ ಈಗ ಗುರ್ತಿಸಲಾರದಷ್ಟು ಕ್ಷೀಣರಾಗಿದ್ದರು. ಇಷ್ಟೆಲ್ಲ ಬೇನೆ ಇದ್ದರೂ ಬೋಸರ ಆನಂದ ಮುಖಮುದ್ರೆಯು ಮಾತ್ರ ವಿಚಿತ್ರವಾದದ್ದಿತ್ತು. **"ಶಾರೀರಿಕ ಶಕ್ತಿಯು ಕುಗ್ಗಿ ಹೋಗಿದ್ದರೂ ಆತ್ಮ ಶಕ್ತಿಯು ಮಾತ್ರ ಕುಂದಿಲ್ಲದೆ ಬೆಳಗುತ್ತಿದೆ"** ಎಂದು ಧೀರತನದಿಂದ ಅವರು ನುಡಿಯುತ್ತಿದ್ದುದನ್ನು ಕೇಳಿದರೆ ಆಶ್ಚರ್ಯವಾಗುವಂತಿತ್ತು.

ಸಂಜೆಯ ಮೂರುಘಂಟೆಯ ಸುಮಾರಕ್ಕೆ ಶರತ್‌ಚಂದ್ರ ಬೋಸರೂ ಡಾಕ್ಟರರೂ ಡೋಣಿಯನ್ನು ಬಿಟ್ಟು ಬಂದರು. ಸುಭಾಸಚಂದ್ರರು ಪ್ರತ್ಯೇಕವಾಗಿ ಮೇಜರ್ ಹಿಂಗ್ಸಟನ್ನರ ಆದರಾತಿಥ್ಯದಲ್ಲಿ ಇಡಲ್ಪಟ್ಟರು. ಅವರು ಬೋಸರನ್ನು ಸುಖದಾಯಕವಾಗಿಯೂ ಆನಂದದಾಯಕವಾಗಿಯೂ ಇಡಲು ಸಾಧ್ಯವಾದ ಎಲ್ಲ ಪ್ರಯೋಗಗಳನ್ನು ಮಾಡಿದರು. ಬೋಸರೂ ಮತ್ತು ಹಿಂಗ್ಸಟನ್ನರೂ ಇದ್ದ ಡೋಣಿಯು ಆ ರಾತ್ರಿಯಲ್ಲೆಲ್ಲ ನಡುನದಿಯಲ್ಲಿಯೇ ಎಲ್ಲಿಯೋ ಉಳಿಯಿತು. ಸೋಮವಾರ ಮುಂಜಾನೆ ದಾರ್ಜಿಲಿಂಗದಿಂದ ಶರಶ್ಚಂದ್ರ ಬೋಸರಿಗೆ ಒಂದು ತಂತಿಯ ವರ್ತಮಾನವು ಬಂದಿತು. "ಮಿ. ಮೊಬರ್ಲಿಯವರಿಗೆ ನೀವು ಕಳಿಸಿದ ತಾರಿಗೆ ಪ್ರತ್ಯುತ್ತರವಾಗಿ ಬಂಗಾಲ ಸರಕಾರವು ಸುಭಾಸಚಂದ್ರರನ್ನು ಬಿಡುಗಡೆ ಮಾಡುತ್ತದೆ. ದಯಮಾಡಿ ಅವರನ್ನು ನಿಮ್ಮ ವಶಕ್ಕೆ ತೆಗೆದುಕೊಳ್ಳುವ ವ್ಯವಸ್ಥೆಯಾಗಬೇಕು." ಎಂಬುದೇ ಆ ತಂತಿಯ ಅಭಿಪ್ರಾಯವಾಗಿತ್ತು.

ಸುಭಾಸಚಂದ್ರ ಬೋಸರ ಆರೋಗ್ಯದ ವಿಷಯಕ್ಕೆ ಸೋಮವಾರ ಮಧ್ಯಾಹ್ನದಲ್ಲಿ ಬಂಗಾಲ ಸರಕಾರವು ಪ್ರಕಟನೆಯೊಂದನ್ನು ಹೊರಗೆಡವಿತು. "ಸುಭಾಸಚಂದ್ರರ ಆರೋಗ್ಯದ ವಿಷಯಕ್ಕೆ ಬರ್ಮಾದಿಂದ ಬಂದ ಅನೇಕ ಅಸಮಾಧಾನಕರವಾದ ಸುದ್ದಿಗಳ ಮೇಲಿಂದ ಬೋಸರನ್ನು ಆಲ್ಮೋರಾಕ್ಕೆ ಕಳಿಸುವದು ಹಿತಕರವೆಂದು ಸರಕಾರವು ವಿಚಾರಿಸುತ್ತದೆ. ಬಂಗಾಲದ ಗವರ್ನರರು ತಮ್ಮ ಖಾಸಗಿ ಸರ್ಜನ್ ಮೆಜರ್ ಹಿಂಗ್ಸ್ಟನ್ (I. M. S.) ರನ್ನೂ, ಲೆ. ಕ. ಸ್ಯಾಂಡಿಸ್ (I. M. S) ರನ್ನು ಕೂಡಿಕೊಂಡು ಬೋಸರನ್ನು ಪರೀಕ್ಷಿಸಲು ಕಲ್ಕತ್ತೆಗೆ ಕಳಿಸಿಕೊಟ್ಟರು. ಈ ಪರೀಕ್ಷೆಯು ಮೊದಲಿನ ಸಂಗತಿಯನ್ನೇ ನಿಜವೆಂದು ಸಿದ್ಧಮಾಡಿತು. ಆದ್ದರಿಂದ ಬಂಗಾಲ ಸರಕಾರವು ಬೋಸರನ್ನು ಬಿಡುಗಡೆ ಮಾಡಲು ನಿಶ್ಚಯಿಸಿರುತ್ತದೆ. ಬೇಕಾದಲ್ಲಿಗೆ ಹೋಗಿ, ಯಾವತರದ ಪ್ರತಿಬಂಧಕವಿಲ್ಲದೆ ಔಷಧೋಪಚಾರ ಹೊಂದಲು ಅವರನ್ನು ಸ್ವತಂತ್ರ ಮಾಡಿದೆ" ಎಂದು ಆ ಪ್ರಕಟನೆಯಲ್ಲಿ ಬರೆಯಲ್ಪಟ್ಟಿತ್ತು.

"ನಾನು ಮನೆಗೆ ಬಂದಮೇಲೆ ನನ್ನ ಮೊಟ್ಟ ಮೊದಲನೆಯ ಕೆಲಸವೆಂದರೆ- ನನ್ನ ಪೂರ್ವದ ದೇಹಾರೋಗ್ಯವನ್ನು ಗಳಿಸುವದಿದೆ. ಕಾರ್ಯರಂಗದಲ್ಲಿ ಪುನಃ ಕಾಲಿಡಲು ನಾನು ಹಾತೊರೆಯುತ್ತೇನೆ. ಇಲ್ಲಿಯವರೆಗೆ ನಾನು ಸೆರೆಮನೆಯಲ್ಲಿದ್ದರೂ ಹಗಲೂ ರಾತ್ರಿಯೂ ನನ್ನ ಸಹಬಾಂಧವರ ಕಷ್ಟದ ಕಲ್ಪನೆಗಳು ನನ್ನನ್ನು ಬಿಡದೆ ಬೆನ್ನಟ್ಟಿವೆ. ನಾನು ಬೇಗನೆ ವಾಸಿಯಾಗಲೆಂದು ನನ್ನ ಬಾಂಧವರು ಬಯಸುವರೆಂದು ಆಶೆ. ಯಾಕಂದರೆ ನನ್ನ ಸರ್ವ ಶಕ್ತಿಯನ್ನೆಲ್ಲ ದೇಶ ಸೇವೆಯಲ್ಲಿಯೇ ಉಪಯೋಗಿಸಲು ನಾನು ಬಯಸುತ್ತೇನೆ. ಎಲ್ಲರ ಅಂತರಂಗವನ್ನು ಸುಡುತ್ತಿರುವ ದಾಸ್ಯದ ಬೆಂಕಿಯನ್ನು ನೊಂದಿಸಲು ನಾವೆಲ್ಲರೂ ಏಕಹೃದಯರಾಗಿ ಕೂಡಿ ದುಡಿಯಬೇಕಾಗಿದೆ."

ಬೋಸರ ಬಿಡುಗಡೆಯ ದಿನ ನಗರವೆಲ್ಲ ಹರ್ಷಾನಂದದಲ್ಲಿ ಮುಳುಗಿತು. ಅನೇಕ ಸಭೆಗಳು ಅವರ ಸನ್ಮಾನಾರ್ಥವಾಗಿ ಜರುಗಿದವು. ದೇವಾಲಯಗಳಲ್ಲೆಲ್ಲ ಪ್ರಾರ್ಥನೆಗಳು ನಡೆದವು. ಹಿಂದುಸ್ಥಾನದ ಎಲ್ಲ ಭಾಗಗಳಿಂದ ಅಭಿನಂದನದ ಸುರಿಮಳೆಯಾಯಿತು. ಆಗ ಮುಂಬೈಯಲ್ಲಿ ಕೂಡಿದ ಅಖಿಲ ಭಾರತ ಕಾಂಗ್ರೆಸ ಕಮಿಟಿಯು ( A. I. C. C. ) ಹಿತೇಚ್ಛೆಯ ಸಂದೇಶ, ಅಭಿನಂದನೆಗಳನ್ನು ಕಳಿಸಿತು.

## ೬. ಕಾರ್ಯರಂಗದಲ್ಲಿ

( ೧೯೨೭-೧೯೨೮. )

ಸುಭಾಸಚಂದ್ರರು ಬಂದೀಜೀವನದ ತೀಕ್ಷ್ಣವಾದ ಅಗ್ನಿಪರೀಕ್ಷೆಯಲ್ಲಿ ಪ್ರಜ್ವಲಿತರೂ ವಿಜಯಶಾಲಿಗಳೂ ಆಗಿ ಹೊರಬಿದ್ದರು. ಈ ಜೇಲಿಯಿಂದ ಪಾರಾಗಿ ಕಾರ್ಯಭೂಮಿಕೆಯಲ್ಲಿ ಸಜ್ಜುಗೊಡೆಮು ನಿಂತರು. “ ನಮ್ಮ ತಾಯ್ನಾಡಿನ ಸದ್ಯದ ಬಳಲಿಕೆಯ ಸ್ಥಿತಿಯಲ್ಲಿ ನಾವು ಬೇನೆ ಬೀಳುವದನ್ನು ನಿರ್ವಹಿಸಲಾರೆವು ” ಎಂದು ತಮ್ಮ ಪಾಟ್ನಾದ ಭಾಷಣದಲ್ಲಿ ಘೋಷಿಸಿದರು. ಈ ತರುಣ ವೀರರು ನುಡಿದಂತೆಯೇ ನಡೆಯುಳ್ಳವರೆಂಬುದು ಯಾರಿಗೂ ಸಂಶಯಬಾರದ ಮಾತಾಗಿದೆ. ಬಂಗಾಲದ ಪ್ರಾಂತಿಕ ಕಾಂಗ್ರೆಸ ಕಮಿಟಿಯು ತರುಣ ಅಧ್ಯಕ್ಷರಾದ ಇವರಲ್ಲಿ ಈತರದ ವರ್ತನವಿರುವದರಿಂದಲೇ ಜನತೆಯು ಇವರಲ್ಲಿ ಪೂರ್ಣವಿಶ್ವಾಸವನ್ನಿಟ್ಟಿರುವದು. ‘ ಬರದಿಂದ ಬಳಲುವವರ ಮಧ್ಯದಲ್ಲಿದ್ದುಕೊಂಡು ತನ್ನ ಕೆಲಸಗಾರರನ್ನು ಕೂಡಿಸುವದಕ್ಕಾಗಿ ಕಹಳೆಯ ಊದುತ್ತಿರುವ ಸುಭಾಸರನ್ನು ನಾವು ಕಂಡಿದ್ದೇವೆ. ಕೌನ್ಸಿಲ್ ಚೇಂಬರುಗಳಲ್ಲಿಯೂ ಚುನಾವಣಿಗಳ ಪ್ರಸಂಗಗಳಲ್ಲಿಯೂ ದೇಶದ ತುಂಬೆಲ್ಲ ಈ ರಣ

ಧೀರನು ಸತತವಾಗಿ ತನ್ನ ಸ್ವಾತಂತ್ರ್ಯ ಭೇರಿಯನ್ನು ಹೊಡೆಯುತ್ತಿರುವದನ್ನು ನಾವು ನೋಡುತ್ತಲೇ ಇದ್ದೇವೆ. ಇವರ ಪರಿಶ್ರಮ, ಸಹನಶೀಲತೆಗಳು ಅಸಾಧಾರಣವಾಗಿವೆ,' ಎಂದು ಜನರು ತಮ್ಮ ತಮ್ಮೊಳಗೆ ಮಾತಾಡುತ್ತಿದ್ದುದನ್ನು ಬಂಗಾಲದಲ್ಲಿ ನಾವು ಆಗ ಸಹಜವಾಗಿ ಕೇಳಬಹುದಾಗಿತ್ತು.

ಇವರು ಸೆರೆಮನೆಯಿಂದ ಬಿಡುಗಡೆಯಾಗಿ ಬಂದ ಆರೇ ತಿಂಗಳುಗಳಲ್ಲಿ ಅಂದರೆ ೧೯೨೭ನೆಯ ನವ್ಹಂಬರದಲ್ಲಿ ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಕೂಡಲೆ ಬಂಗಾಲ ಪ್ರಾಂತವನ್ನೆಲ್ಲ ಸುತ್ತುಹಾಕಿ ಪ್ರತಿಯೊಂದು ಪಟ್ಟಣ, ಜಿಲ್ಹೆಗಳನ್ನೆಲ್ಲ ಸಂಚರಿಸಿ, ಪ್ರಾಂತದಲ್ಲಿರುವ ಎಲ್ಲ ಕಾಂಗ್ರೆಸ ಕಮಿಟಿಗಳನ್ನು ಸುವ್ಯವಸ್ಥೆಗೊಳಿಸಿದ್ದಲ್ಲದೆ ಅಲ್ಲಿಯ ಕಾಂಗ್ರೆಸ ಸಂಸ್ಥೆಗಳಿಗೆಲ್ಲ ಸ್ಥಿರಸ್ವರೂಪವನ್ನು ತಂದುಕೊಟ್ಟರು. ಅಲ್ಲಿಯ ರಾಜಕಾರಣದಲ್ಲಿಯ ಅನೇಕ ಪಂಗಡಗಳಲ್ಲೆಲ್ಲ ಒಕ್ಕಟ್ಟನ್ನುಂಟುಮಾಡಿ ಮುಖ್ಯವಾದ ಸ್ವರಾಜ್ಯ ಪಂಗಡವನ್ನೇ ಬಲಪಡಿಸಿದರು. ಸಾಯಮನ್ ಕಮಿಶನ್ ನಿಯಮಿಸಿದ್ದರ ವಿರೋಧ ಪ್ರಕಟನೆಗಾಗಿ ಅಲ್ಲಲ್ಲಿ ಸಂಚರಿಸಿ ಸ್ವದೇಶೀ ಪ್ರೋತ್ಸಾಹ ಮತ್ತು ಪರದೇಶೀ ಬಹಿಷ್ಕಾರಗಳ ಚಳವಳಿಯನ್ನು ಅತಿಶಯವಾಗಿ ಹೆಚ್ಚಿಸಿದರು.

ಬಂಗಾಲದ ಯುವಕ ಚಳವಳಿ ಮತ್ತು ವಿದ್ಯಾರ್ಥಿ ಚಳವಳಿಗೆಲ್ಲ ಇವರೇ ಉತ್ಸಾಹದ ಆಧಾರಿಗಳು, ಸ್ಫೂರ್ತಿಯ ಉಗಮಸ್ಥಾನವು, ಎಂದು ಹೇಳಬಹುದು. ೧೯೨೮ ನೆಯ ಮೇ ತಿಂಗಳಲ್ಲಿ ಇವರು ಮುಂಬೈ, ಪುಣೆಗಳ ಕಡೆಗೆ ಬಂದು ಅಲ್ಲಿಯ ತರುಣರಲ್ಲಿ ನವಜೀವಕಳೆ ತುಂಬಿದರು. ಮಹಾರಾಷ್ಟ್ರ ಪ್ರಾಂತಿಕ ರಾಜಕೀಯ ಪರಿಷತ್ತಿನ ಅಧ್ಯಕ್ಷಪಟ್ಟದ ಬಹುಮಾನವು ಇವರ ಪಾಲಿಗೆ ಬಂದಿತ್ತು. ಮುಂಬೈ ಪ್ರಾಂತದ ತರುಣರ ಹೃದಯಗಳನ್ನೆಲ್ಲ ಆಗ ಇವರು ಸಂಪೂರ್ಣವಾಗಿ ಸೆಳೆದುಕೊಂಡು ಹೋದರು.

೧೯೨೮ನೆಯ ಮೇ ತಿಂಗಳಲ್ಲಿ ಮುಂಬೈ 'ಡೇಲಿ ಮೇಲ' (Daily Mail) ನಂಥ ಸೌಮ್ಯ ಪತ್ರಿಕೆಯ ಸುದ್ದಿಗಾರರು ಸಹ ಬೋಸರ ವಿಷಯಕ್ಕೆ ಈ ಪ್ರಕಾರ ಬರೆದಿರುತ್ತಾರೆ:

"ಸುಭಾಸಚಂದ್ರರು ಉಗ್ರಪಕ್ಷದ ವೀರ ಯುವಕ ನಾಯಕರು. ಆರೋಗ್ಯ ಕ್ಷೀಣತೆಯ ಕಾರಣದಿಂದ ಕಳೆದವರ್ಷ ಸೆರೆಮನೆಯಿಂದ ಬಿಡಲ್ಪಟ್ಟಿದ್ದಾರೆ. ಇವರು ಇಷ್ಟು ಬೇಗ ಗುಣಹೊಂದಿದ್ದನ್ನು ನೋಡಿದರೆ ಮಹಾತ್ಮಾ ಗಾಂಧಿ

ಯವರ ಸ್ಥಾನವನ್ನು ತಕ್ಕೊಳ್ಳಲು ಬಹುಶಃ ಇವರಿಂದಲೇ ಸಾಧ್ಯವೆಂದು ಅನಿಸುತ್ತದೆ." ಸುಭಾಸ ಬಾಬುಗಳ ಉಚ್ಚಭಾವನೆ, ಸ್ವಾತಂತ್ರ್ಯದ ದಾಹ, ಮಾತೃಭೂಮಿ ಸೇವೆಯ ಹುಚ್ಚುಗಳನ್ನು ನೋಡಿದರೆ ಇವರು ಇಷ್ಟು ಬೇಗ ಗುಣಪೊಂದಿದ್ದೂ ಇವರ ವಿಷಯಕ್ಕೆ ಸ್ತುತಿಪರ ಅಭಿಪ್ರಾಯಗಳು ಹೊರಬಿದ್ದದ್ದೂ ಆಶ್ಚರ್ಯಕರವಲ್ಲ. ಬೀಜಕ್ಕೆ ಬಿಡುವ ಕಾಯಿಯ ಗುಣವು ಹೀಚಿನಲ್ಲಿಯೇ ತಿಳಿಯುವದಲ್ಲವೇ?

ರಾಷ್ಟ್ರೀಯ ಮಹಾಸಭೆಯ ೪೩ ನೆಯ ಅಧಿವೇಶನವು ೧೯೨೮ ನೆಯ ಡಿಶಂಬರದಲ್ಲಿ ಕಲ್ಕತ್ತೆಯಲ್ಲಿ ಕೂಡಿತು. ಆಗ ಸುಭಾಸಚಂದ್ರರು ಸ್ವಯಂ ಸೇವಕ ಸೈನ್ಯದ ಸರ್ವಾಧಿಪತ್ಯದ ( General Officer commanding of the Volunteer Corps ) ಬಹುಮಾನದ ಹುದ್ದೆಯನ್ನು ವಹಿಸಿದ್ದರು. ಆ ಅಧಿವೇಶನದ ಅಧ್ಯಕ್ಷರಾದ ಪಂಡಿತ ಮೋತಿಲಾಲ ನೆಹರುಗಳನ್ನು ಅತ್ಯಂತ ಆದರದಿಂದ ಸತ್ಕರಿಸಿದರು. ಈ ಸಂದರ್ಭದಲ್ಲಿ ಆದಂಥ ಮೆರವಣಿಗೆಯು ವರ್ಣನಾತೀತವಾಗಿದೆ. ಅಂಥ ಮತ್ತೊಂದನ್ನು ಕಾಣುವದು ದುರ್ಲಭವೆಂದು ನೋಡಿದವರು ಹೇಳುತ್ತಾರೆ. ಅಂದಿನ ರಾಷ್ಟ್ರಧ್ವಜಾರೋಹಣವಂತೂ ವಿಶೇಷ ಗಾಂಭೀರ್ಯ, ಗೌರವದ ಸ್ವರೂಪವನ್ನು ಹೊಂದಿತ್ತು. ಮೆರವಣಿಗೆಯ ಒಂದು ದೃಶ್ಯವು ಕಲ್ಕತ್ತೆಯ 'ವೆಲ್ಫೇಯರ' ಪತ್ರಿಕೆಯಲ್ಲಿ ಹೀಗೆ ವರ್ಣಿತವಾಗಿದೆ:

"........ ಬೆಳಗಿನ ಜಾವದ ಪೂರ್ವದಲ್ಲಿಯೇ ರಸ್ತೆಯೊಳಗಿನ ದಾರಿಗಳೆಲ್ಲ ಜನಸಂದಣಿಯ ಸಾಲುಗಳಿಂದ ತುಂಬಿಹೋಗಿದ್ದವು. ಅಂಗಳ, ಕಡೆಗಟ್ಟಿಗಳು ಕಿಕ್ಕಿರಿದು ಬಿಗಿದಿದ್ದವು. ನೋಡಿದಲ್ಲೆಲ್ಲ ಆತುರಮುಖದಿಂದ ಕಾಯುತ್ತಿರುವ ಜನರೇ ಕಣ್ಣಿಗೆ ಬೀಳುತ್ತಿದ್ದರು. ಜನಸಾಗರದ ತೆರೆಗಳ ಮನೋಹರವಾದ ನೋಟವು ಆಹ್ಲಾದಕರವಾಗಿತ್ತು. ಒಂದು ಇಂಚಿನಷ್ಟು ಪ್ರದೇಶವು ಕೂಡ ಬರಿದಾಗಿ ಕಾಣುತ್ತಿರಲಿಲ್ಲ. ಲವಲವಿಕೆಯಿಂದ ಮೇಲ್ಬಿದ್ದು ಇಣಿಕಿನೋಡುವ ಮುಖಗಳು ಅಂತಸ್ತುಗಳ ಕಿಡಿಕೆಗಳನ್ನೆಲ್ಲ ತುಂಬಿದ್ದವು. ಕಣ್ಣುಗಳು ಕುಕ್ಕುವದರ ಪರಿವೆ ಇಲ್ಲದೆ ಎದುರು ನಿರೀಕ್ಷಿಸುತ್ತಿದ್ದವು. ಮಹಿಳಾಮಣಿಯರ ಮುಖಕಮಲಗಳು ಸ್ವಾಗತಕ್ಕಾಗಿ ಆಚ್ಛಾದನೆಗಳೊಳಗಿಂದ ಮೆಲ್ಲಮೆಲ್ಲನೆ ಹೊರಬಿದ್ದು ಅರಳುತ್ತಿದ್ದವು. ಅಂದಿನ ಮೆರವಣಿಗೆಯು ಅಖಿಲ ಭಾರತ ರಾಷ್ಟ್ರೀಯ ಮಹಾಸಭೆಯ ೪೩ ನೆಯ ಅಧಿವೇಶನದ ಅಧ್ಯಕ್ಷ

ಪಂಡಿತ ಮೋತಿಲಾಲ ನೆಹರುರವರನ್ನು ಸ್ವಾಗತಿಸುವದಿತ್ತು. ಇದೇನೋ ನಿಜ! ಆದರೂ ಅಂದಿನ ಸ್ವಾಗತ ಕೂಟವು ಇವಕ್ಕಿಂತಲೂ ಹೆಚ್ಚು ಉದಾತ್ತ ವಾದದ್ದೂ ರಾಷ್ಟ್ರೀಯ ದೃಷ್ಟಿಯಿಂದ ಹೆಚ್ಚು ಗಂಭೀರವಾದದ್ದೂ ಆದ ಮತ್ತೊಂದು ಮಹತ್ವದವಸ್ತುವಿನ ಸ್ವಾಗತಕ್ಕಾಗಿಯೂ ನೆರೆದಿತ್ತೆನ್ನಬಹುದು. ಅಂಥವಸ್ತುವೆಂದರೆ– ರಣಶೌರ್ಯಾಭಿಮಾನದ ಇಚ್ಛೆಯ ಜನ್ಮವೆಂದು ಹೇಳಬಹುದು. ರಣಮಲ್ಲರಲ್ಲದ ‘ ಹೇಡಿ ’ ಬಂಗಾಲಿಗಳೆನಿಸಿಕೊಂಡ ಜನಾಂಗದಲ್ಲಿ ಅಂದು ರಣಧೀರಾಭಿಮಾನದ ಕಳಕಳಿಯು ಜನ್ಮತಾಳಲು ತವಕಿಸುತ್ತಿತ್ತು. ಬಂಗಾಲಕ್ಕೆ ಅಂದು ಹೊಸ ಸೂರ್ಯನುದಯವಾಯಿತು. ರಣಶೂರರಾದ ಹೊಸಜನಾಂಗದುದಯದ ಆವೇಶದ ಚಿಹ್ನವು ಅಂದು ಎಲ್ಲರ ಮುಖದಮೇಲೆ ಒಡೆದು ಕಾಣುತ್ತಿತ್ತು. ನವಚೈತನ್ಯದ ಹುರುಪಿನ ತೆರೆಯು ಅಂದು ಎಲ್ಲರ ಮೊಗಗಳಲ್ಲಿ ತುಂಬಿ ಹೊರಸೂಸುತ್ತಿತ್ತು. ಆಶಾಮಿಶ್ರಿತ ಹೊಸ ಉತ್ಸಾಹವು ಹೆಣ್ಣುಮಕ್ಕಳ ಪರದೆಯನ್ನು ಓರೆಮಾಡಿ ಧಾವಿಸಿ ಹೊರ ಚಿಮ್ಮುವಂತೆ ತೋರುತ್ತಿತ್ತು. ಹಿಂದಕ್ಕೆ ಯುದ್ಧದಲ್ಲಿ ವಿಜಯಶಾಲಿಗಳಾಗಿ ಸೆರೆಯಾಳುಗಳನ್ನು ನಡೆಯಿಸಿಕೊಂಡು ಬರುವಾಗ ಮಹಿಳೆಯರ ಮುಸುಕು ಗಳೆಲ್ಲ ತಾವೇ ಬೈಲಾಗಿ ಚಂದ್ರಮುಖಿಯರು ವೀರರಣಮಲ್ಲರನ್ನು ಸ್ವಾಗತಿಸು ತ್ತಿದ್ದ ದೃಶ್ಯವನ್ನು ಇಂದು ಬಂಗಾಲವು ಪುನಃ ಕಂಡಿತು. ಕಡೆಗಟ್ಟೆ, ಗವಾಕ್ಷ ಗಳೆಲ್ಲ ಪ್ರೇಮಸ್ಮಿತಿಗಳಿಂದ ತುಂಬಿ ಹೊರಸೂಸುತ್ತಿದ್ದವು. ಸದಿಚ್ಛೆಯ ಹೂಮಳೆಗರೆಯಿತು. ಇದೆಲ್ಲ ಯಾರಮೇಲೆಂಬುವದನ್ನು ಹೇಳುವದು ಅನವ ಶ್ಯಕವು. ನಮ್ಮ ಚರಿತ್ರನಾಯಕ, ತರುಣವೀರ, ಸರ್ವಸೈನ್ಯಾಧಿಕಾರಿ ಸುಭಾಸಚಂದ್ರರೇ ಇಷ್ಟೆಲ್ಲ ಮನ್ನಣೆಗೆ ಅರ್ಹರೆಂಬುದು ವಾಚಕರಿಗೆ ಸೂಚಿತ ವಾಗಿರಲಿಕ್ಕೆ ಸಾಕು. ಸುಭಾಸಚಂದ್ರರು ಸೈನ್ಯಕ್ಕೆ ಅಪ್ಪಣೆಕೊಡುವ ಸಿಸ್ತಿ ನಲ್ಲಿ ಧೀರತನದಿಂದ ರಾಷ್ಟ್ರಪತಿಗಳ ಮೋಟರಿನ ಮುಂಭಾಗದಮೇಲೆ ನಿಂತು ಎಲ್ಲರ ದೃಷ್ಟಿಯನ್ನೂ ಆದರವನ್ನೂ ಸ್ವಾಭಾವಿಕವಾಗಿ ಆಕರ್ಷಿಸುತ್ತಿದ್ದರು. ದೃಷ್ಟಿಮಾತ್ರದಿಂದ ಜನತೆಯ ಉದಾಶೀನತೆ ಅಂಜುಬುರುಕತನಗಳನ್ನು ಹೊಡೆದೋಡಿಸಿ, ವಿಜಯಶಾಲಿಯಾದ ಶೂರ ಸುಭಾಸಚಂದ್ರರು ಅಂದು ರಣಭೇರಿ, ಕೊಂಬು, ಕಹಳೆಗಳ ಮಹತ್ವವನ್ನು ಎಲ್ಲರ ಹೃದಯಗಳಲ್ಲಿ ನೆಲೆಗೊಳಿಸಿದರು. ಬಹಳ ಹೇಳುವದೇನು? ವೀರಶ್ರೀಯೇ ಮೂರ್ತಿ ಮಂತಾಗಿ ಭೂಮಿಗೆ ಅವತರಿಸಿದಂತೆ ಅವರು ಕಂಗೊಳಿಸುತ್ತಿದ್ದರು.

ಅಂದು ಆ ದಿವ್ಯಮೂರ್ತಿಯನ್ನು ಕಣ್ತುಂಬನೋಡುವದಕ್ಕೆ ಎರಡು ಕಣ್ಣುಗಳು ಸಾಲದಾದವು. ವರ್ಣಿಸಲು ನಾಲಿಗೆಗೆ ಅಸದಳವಾಯಿತು. ಅಂದು ಅವರನ್ನು ಮನಸದಣಿನೋಡಿ ಆನಂದಬಾಷ್ಪಗಳನ್ನು ಸುರಿಸದವರು ಉಳಿಯಲಿಲ್ಲ. ಅವರ ಚಿತ್ರಗಳನ್ನು ತಮ್ಮೆದೆಯಲ್ಲಿ ಮೂಡಿಸಿಕೊಂಡು ಧನ್ಯವಾಗದ ಕ್ಯಾಮರಾಗಳೊಂದೂ ಕಲ್ಕತ್ತೆಯಲ್ಲಿ ಉಳಿಯಲಿಲ್ಲ. ವಾಹನವು ಸಾವಕಾಶವಾಗಿ ಹೊರಟಂತೆ ಯುಜವನಾಸತ್ವದ ಗಂಭೀರ ಮುಖಮುದ್ರೆಯಿಂದ ಯಾವಾಗಾದರೊಮ್ಮೆ ತನ್ನ ನೀಳ್ತೋಳುಗಳನ್ನು ಬೀಸುತ್ತ ಸೈನ್ಯದ ಚಲನವಲನಕ್ಕೆ ಅಪ್ಪಣೆಕೊಡುವ ಮೇಲಾಧಿಕಾರಿಯಾಗಿ ಅವರು ತೋರುತ್ತಿದ್ದರು........ ಅಸೂಯಾಸ್ಪದವಾದ ಅಂಥ ಸ್ಥಾನವನ್ನು ಪಡೆದ ಬೋಸರೇ ಧನ್ಯರು! ರೋಮ ರೋಮಗಳಲ್ಲಿ ಸರ್ವಸೈನ್ಯಾಧಿಕಾರಿಯ ಚಿನ್ಹಗಳು ಒಡೆದುಕಾಣುತ್ತಿದ್ದವು. ಇವರ ಆತ್ಮತಿಳಿವಳಿಕೆಯ ಮುಖಮುದ್ರೆಯೂ ಆತ್ಮವಿಶ್ವಾಸದ ದೃಷ್ಟಿಯೂ ವೀರರಿಗೊಪ್ಪುವ ಸ್ಪಷ್ಟವಾಗಿ ಒಡೆದುಕಾಣುವ ಆತ್ಮತೃಪ್ತಿಯೂ ಇವರ ಮುಖದಮೇಲೆ ತಪ್ಪದೆ ಮೆರೆಯುತ್ತಿದ್ದವು. ಇವರ ಆಕಾರವು ಇವೆಲ್ಲ ಒಗ್ಗೂಡಿದ ಮೂರ್ತಿಯೋ ಎಂಬಂತೆ ತೋರುತ್ತಿತ್ತು. ಇದೊಂದು ಕಾಲ್ಪನಿಕ ದೃಶ್ಯವು— ಅದೇಕೆ? ಅಲ್ಲ- ಅದು ನಿಜವಾಗಿಯೂ ನಮ್ಮ ಭಾವೀ ವೈಭವದ ಆಹ್ವಾನದ ದೃಶ್ಯವು— ಎಂದು ಹೇಳಬಹುದು. "

ಈ ಮಹಾಸಭೆಯಲ್ಲಿ ಎರಡು ಪಕ್ಷಗಳಾದವು. ಅಂತರ್ಗತ ಸ್ವರಾಜ್ಯ (Dominion Status) ದ ಠರಾವನ್ನು ಮಹಾತ್ಮಾ ಗಾಂಧಿಯವರು ಮಂಡಿಸಿದ್ದರು. ನಾಡಹಿರಿಯರೆಲ್ಲ ಅವರಿಗೆ ಬೆಂಬಲವಾಗಿದ್ದರು. ಆದರೆ ಅದಕ್ಕೆ ವಿರೋಧಿಗಳಿರದಿರಲಿಲ್ಲ. "ಸಂಪೂರ್ಣ ಸ್ವಾತಂತ್ರ್ಯವೇ (Complete Independence) ನಮ್ಮ ಗುರಿ; ಬ್ರಿಟಿಷರ ಸಂಬಂಧವನ್ನು ಪೂರಾ ಕಡಿದೊಗೆಯಬೇಕು; ಅದೇ ನಮ್ಮ ನಿರ್ಣಯವಾಗಬೇಕು" ಎಂಬ ತರುಣರ ತಂಡವೊಂದು ಕುಣಿಯುತ್ತಿತ್ತು. ತರುಣರ ಮುಖನೇ ಆದ ಸುಭಾಸಚಂದ್ರಬಾಬುಗಳು ತಮ್ಮದೊಂದು ಸೂಚನೆಯನ್ನು ಗಾಂಧೀಜಿಯವರ ವಿರುದ್ಧವಾಗಿ ಮಂಡಿಸಿದರು. ಅನುಭವಿಕ ನಾಯಕರೂ ಜಗದ್ವಂದ್ಯ ಮಹರ್ಷಿಯರೂ ಆದ ಗಾಂಧೀಜಿಯವರ ಪ್ರತಿಪಕ್ಷಿಯಾಗಿ ಹೋರಾಡುವದರಲ್ಲಿ ನಮ್ಮ ಚರಿತ್ರನಾಯಕರಿಗೆ ಜಯ ಶಿಗಲಿಲ್ಲವೆಂಬುದೇನೋ ನಿಜ. ಆದರೆ ಇವರ ಪಕ್ಷಕ್ಕೆ ಸಾಕಷ್ಟು ಬೆಂಬಲವು ಶೀಘ್ರದಲ್ಲಿಯೇ ಸಿಗುವ ಚಿನ್ಹಗಳು ಆಗಲೇ

ತೋರಿದವು. ಮುಂದೆ ಒಂದು ವರ್ಷ ಕಳೆಯುವಷ್ಟರಲ್ಲಿ ಇಡೀ ರಾಷ್ಟ್ರವೇ ಆ ನಿರ್ಣಯಕ್ಕೆ ಬಂದದ್ದು ಸ್ಪಷ್ಟವದೆ.

ಬೋಸರು ಸಂಪೂರ್ಣ ಸ್ವಾತಂತ್ರ್ಯವಾದಿಗಳು. ಮಹಾರಾಷ್ಟ್ರ ಪ್ರಾಂತಿಕ ಪರಿಷತ್ತಿನ ಅಧ್ಯಕ್ಷರಾದಾಗ ತಮ್ಮ ಭಾಷಣದಲ್ಲಿ ತಮ್ಮ ಗುರಿಯನ್ನು ಈ ಪ್ರಕಾರ ಹೇಳಿದ್ದಾರೆ:

“ ದಾಸ್ಯಸಂಕೋಲೆಗಳನ್ನು ಕಡಿದುಹಾಕಿ ಸ್ವಾತಂತ್ರ್ಯ ಸಾಮ್ರಾಜ್ಯದಲ್ಲಿ ಲೋಲಾಡುವ ಭಾರತವು ನಮ್ಮದಾಗಬೇಕು. ಜಗತ್ತಿನೊಳಗಿನ ಎಲ್ಲ ಸ್ವತಂತ್ರ ರಾಷ್ಟ್ರಗಳಲ್ಲಿ ತಲೆಎತ್ತಿ ಮೆರೆಯುವ ಹಿಂದುಸ್ತಾನವು ನನಗೆ ಬೇಕು. ಸಂಪೂರ್ಣ ಸ್ವಾತಂತ್ರ್ಯದಿಂದ ಹೊಂದತಕ್ಕ ಆನಂದವೆಲ್ಲ ನಮ್ಮ ಭಾರತಕ್ಕೆ ಬೇಕು. ಇಂಥ ಆನಂದಾನುಭವದಿಂದಲೇ ತನಗೂ ವಿಶ್ವಕ್ಕೂ ಮಹತ್ತರವಾದ ವಸ್ತುಗಳನ್ನು ಹುಟ್ಟಿಸಿಕೊಡುವ ಶಕ್ತಿಯು ಸ್ವತಂತ್ರ ಭಾರತಕ್ಕೆ ಸ್ವಾಭಾವಿಕವಾಗಿ ಬರುತ್ತದೆ. ಭಾರತವು ತನ್ನ ಸ್ವಂತ ಹಡಗುಪಡೆಯನ್ನು ಕಾಯ್ದಿಡಬೇಕು. ಭಾರತ ಧ್ವಜವನ್ನು ಆಕಾಶದಲ್ಲಿ ನಿರಂಕುಶವಾಗಿ ಹಾರಿಸಿ ಮೆರೆಯಿಸುವ ಚೈತನ್ಯವುಳ್ಳ ಸ್ವತಂತ್ರ ಭಾರತವು ನನ್ನ ಗುರಿಯು. ಸ್ವತಂತ್ರವಾಗಿರುವ ಪರರಾಷ್ಟ್ರಗಳಲ್ಲಿ ಭಾರತೀಯ ರಾಯಭಾರಿಗಳು ಮನ್ನಣೆಹೊಂದುವ ದಿವಸಗಳು ನಮ್ಮ ಭಾರತಭೂಮಿಗೆ ಬೇಗ ಬರಬೇಕೆಂಬುದು ನನ್ನ ಬಲವಾದ ಹಂಬಲ. ಸ್ವಾತಂತ್ರ್ಯವು ನನ್ನ ಪರಿಪೂರ್ಣವಾದ ಅಂತಿಮ ಧ್ಯೇಯವು. ಅದು ಅಪಾರವೂ ಅಪರಿಮಿತವೂ ಆಗಿದೆ. ಜೀವಕೋಟಿಗೆ ಉಸಿರಾಡಿಸಲು ಶುದ್ಧಹವೆಯು ಎಷ್ಟು ಅವಶ್ಯಕವೋ ಅಷ್ಟೇ ಅವಶ್ಯವಾದದ್ದು ಈ ಸ್ವಾತಂತ್ರ್ಯವು. ಅಂತೆಯೇ ಸ್ವಾಮಿ ವಿವೇಕಾನಂದರು ನಿಜವಾಗಿ “ **ಸ್ವಾತಂತ್ರ್ಯವು ಆತ್ಮನ ಆರ್ತಗೀತೆ** ” ಎಂದು ಹೇಳಿದ್ದಾರೆ. ಅಂಥ ಸ್ವಾತಂತ್ರ್ಯವೇ ನಿಜವಾದ ಅಮೃತವು. ಅದೇ ಜೀವಕೋಟಿಯ ಜೀವಾಳವು.

ನಮ್ಮೆಲ್ಲರ ಬೇನೆಬೇಸರಿಕೆಗಳಿಗೂ ಸ್ವರಾಜ್ಯವೊಂದೇ ರಾಜವೈದ್ಯ. ಅದೇ ನಮಗೆ ರಾಮಬಾಣ. ನಮ್ಮ ಸ್ವಾತಂತ್ರ್ಯಾರ್ಹತೆಯನ್ನು ಒರೆಗಲ್ಲಿಗೆ ಹಚ್ಚಬೇಕಾದುದಿಲ್ಲ. ಸ್ವತಂತ್ರರಾಗಬೇಕೆಂಬ ಬಲವತ್ತರವಾದ ಇಚ್ಛೆಯೇ ನಮ್ಮ ಅರ್ಹತೆಯು. ಬೇರೆ ಒರೆಗಲ್ಲುಗಳೆಲ್ಲ ಅನವಶ್ಯಕ” ವೆಂದು ಅವರು ಹೇಳುತ್ತಾರೆ.







## ೭. ಹರೆಯದ ಹಂಬಲ

ತಾರುಣ್ಯದ ಕಾರ್ಯವು ತರುಣರಿಗಾಗಿ ಹೊಸ ಜಗತ್ತನ್ನೇ ನಿರ್ಮಿಸು ವದಿದೆ. ತರುಣರಿಗಷ್ಟೇ ಏಕೆ? ಮಾನವಕೋಟಿಗೆಲ್ಲ ನವವಿಶ್ವವನ್ನೇ ಸೃಷ್ಟಿಸಿ ತೋರಿಸುವದರಲ್ಲಿಯೇ ಯುವಕರ ಕರ್ತೃತ್ವಶಕ್ತಿ ಇದೆ. ತರುಣರಿಂದ ನಡೆಯಿಸಲ್ಪಟ್ಟ ಎಲ್ಲ ಚಳವಳಿಗಳೂ ಪರಿಪಕ್ವವಾದವುಗಳೆಂದೇ ನಾನು ನಂಬು ವದಿಲ್ಲ. ಸಮಾಜದ ಭಾವೀ ಏಳಿಗೆಯ ನವೀನವಾದ ದೃಶ್ಯ ಮತ್ತು ಹೊಸ ದಾದ ನಂಬುಗೆಗಳಿಂದ ಪ್ರೇರೇಪಿಸಲ್ಪಟ್ಟ, ದಯಾಂತಃಕರಣದ ಪರಿಶುದ್ಧ ಭಾವನೆಯ ಸ್ಫೂರ್ತಿಯಿಂದ ಹುಟ್ಟಿದ ಚಳವಳಿಗಳು ಮಾತ್ರ ಯುವಕ ಚಳ ವಳಿಗಳೆಂದು ಹೇಳಬಹುದು. ತಾರುಣ್ಯದ ಕಾರ್ಯವೆಂದರೆ ಮೊಟ್ಟಮೊದಲು ನಮ್ಮ ಆಂತರಿಕ ಜೀವನದ ಕಲ್ಪನಾಸಾಮ್ರಾಜ್ಯವನ್ನು ಕನಸುನೆನಸುಗಳಲ್ಲಿ ಕಂಡುಕೊಳ್ಳುವದು. ಮುಂದೆ ಅದನ್ನು ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ ಸಾಧಿಸಲು ಮಾಡುವ ಭಗೀರಥ ಪ್ರಯತ್ನದಲ್ಲಿ ತಾರುಣ್ಯದ ಸತ್ವಪರೀಕ್ಷೆಯಾಗುವದು. ಯೌವನದ ಇಂಥ ಕಾರ್ಯಗಳಲ್ಲಿ ನನ್ನ ಸಂಪೂರ್ಣ ನಂಬುಗೆಯಿದೆ. ಯಾಕಂದರೆ ತಾರುಣ್ಯದ ಸಹವಾಸದಲ್ಲಿಯೇ ಮಾತ್ರ ನಮ್ಮಲ್ಲಿ ಹುದುಗಿದ್ದ ಅತ್ಯುತ್ತಮ ಶಕ್ತಿಯು ಹೊರಬೀಳುತ್ತದೆ.

ಈಗ ಹಿಂದುಸ್ತಾನದ ಕಾರ್ಯಭಾರವು ಕೇವಲ ಅಪೂರ್ಣವಾಗಿ ಜಗತ್ತಿನ ಕಣ್ಣಿಗೆ ಕಾಣುತ್ತದೆ. ಯೋಗ್ಯ ಮಾರ್ಗ ತೋರಿಸುವವರಲ್ಲಿ ನಮ್ಮ ನಾಯಕರು ತಪ್ಪಿರುವರೆಂದು ನನ್ನ ತರುಣ ಗೆಳೆಯರನೇಕರು ಅನ್ನುತ್ತಾರೆ. ಸುತ್ತುಮುತ್ತಲು ನೋಡಿಕೊಂಡು, ವಿಶಾಲದೃಷ್ಟಿಯಿಂದ ವಿಚಾರಿಸಿ, ಸದ್ಯದ ಪ್ರಸಂಗದ ಅವಶ್ಯಕತೆಗಳನ್ನೆಲ್ಲ ಚನ್ನಾಗಿ ಪರಿಶೋಧಿಸಿ ರಾಷ್ಟ್ರೀಯ ಪುನರುಜ್ಜೀವನದ ಕಾರ್ಯಭಾರವನ್ನು ಮೈಮೇಲೆ ವಹಿಸಿಕೊಂಡು ನಾಯಕರಾಗುವದು ಪ್ರತಿಯೊಬ್ಬ ತರುಣನ ಕರ್ತವ್ಯವಾಗಿದೆ.

ಅರ್ವಾಚೀನ ಪರಿಸ್ಥಿತಿಯ ಮೂಲಕ ನವಜೀವನದ ದಾರಿಯಲ್ಲಿರುವ ಇಟಲೀದೇಶವನ್ನು ನೋಡಿರಿ. ಅವರ ಹೊಸಹುಟ್ಟು ಹೇಗಾಯಿತು? ಅದು ಜೋಸೆಫ ಮ್ಯಾಝಿನಿ ಮತ್ತು ಅವರ ಸಂಗಡಿಗರ ಕನಸು ಕಲ್ಪನೆಗಳ ಫಲವಲ್ಲದೆ ಮತ್ತೇನು? ಜರ್ಮನಿ, ಪರ್ಶಿಯಾ, ಚೀನ ಮೊದಲಾದ ರಾಷ್ಟ್ರಗಳ ಹಣೇಬರಹವನ್ನು ಬರೆದವರಾರು? ತರುಣರ ಕನಸು, ನೆನಸು, ಹಂಬಲ, ಹಾರೈಕೆಗಳೇ ರೂಪಧರಿಸಿ ಅವತರಿಸಿರುವವಲ್ಲದೆ ಮತ್ತೇನು? ಭಾರತದ ಒಂದು ದೊಡ್ಡ ಕೊರತೆಯೆಂದರೆ- ಅದು ತನ್ನಲ್ಲಿ ಸಾಕಷ್ಟು ಆತ್ಮವಿಶ್ವಾಸವನ್ನು ಹೊಂದಿಲ್ಲವೆಂಬುದು. ತನ್ನ ಶಕ್ತಿಯ ವಿಷಯಕ್ಕೆ ಉಂಟಾಗಿರುವ ಸಲ್ಲದ ಸಂಶಯಗಳೇ ದಾಸ್ಯಕ್ಕೆ ಮೂಲವಾಗಿವೆ.

## ಭಾರತದ ಕರ್ತವ್ಯ

ಇಂದಿನ ಭಾರತದ ಕರ್ತವ್ಯವು ದ್ವಿಮುಖವಾಗಿದೆ: – (೧) ತನ್ನ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಪ್ರಶ್ನೆಗಳನ್ನು ಬಿಡಿಸುವದೊಂದು ಮತ್ತು (೨) ವಿಶ್ವದ ಸುಧಾರಣೆಗೆ ತನ್ನ ಸಹಾಯವನ್ನಿತ್ತು ವಿಶ್ವವ್ಯಾಪಕ ಪ್ರಶ್ನೆಗಳನ್ನು ಬಿಡಿಸುವದು ಮತ್ತೊಂದು. ಈ ಕಾರ್ಯಗಳೆರಡನ್ನೂ ಪೂರ್ತಿಗೊಳಿಸಬೇಕಾದರೆ ಭಾರತದ ಯುವಕರು ಭೂತಕಾಲದ ನಮ್ಮ ಉಜ್ವಲ ಇತಿಹಾಸದ ಕಡೆಗೂ ಭವಿಷ್ಯದ ಝಗಝಗಿಸುವ ಕಲ್ಪವೃಕ್ಷದ ಕನಸುಗಳ ಕಡೆಗೂ ನೋಡಿ ಮನಸ್ಸಂಕಲ್ಪ ಮಾಡಬೇಕು. ತಾರುಣ್ಯದ ಕನಸುಗಳನ್ನು ಕೃತಿಗಳನ್ನಾಗಿ ಮಾಡಲು ಹೆಮ್ಮೆಯ ಹಂಬಲವು ಹೃದಯದಲ್ಲಿ ಬೆಳಗುತ್ತಿರಬೇಕು. ಸಾಂಘಿಕ ಜೀವನದಲ್ಲಿಯ ಆದರ್ಶಗಳನ್ನು ಕಾರ್ಯರೂಪದಲ್ಲಿ ತರುವ ಪ್ರಬಲೇಚ್ಛೆಯು ತರುಣರ ಹೃದಯದಲ್ಲಿ ತಳಮಳಿಸುತ್ತಿರಬೇಕು.

ಇಂದಿನ ಆದರ್ಶಗಳೆಂದರೆ, ರಾಜಕೀಯ ರಂಗದಲ್ಲಿ ಸ್ವತಂತ್ರರೂ ಸರಿ ಸಮಾನರೂ ಆದ ರಾಷ್ಟ್ರಗಳ ಸಂಘಟಿತ ಸಂಘವೂ (Federation of Self-governing nations) ಮತ್ತು ಸಾಂಸ್ಕೃತಿಕ ರಂಗದಲ್ಲಿ, ಭಿನ್ನ ಸಂಸ್ಕೃತಿಗಳ ಸಂಘಟಿತ ಸಂಘವೂ (Federation of Cultures) ಎಂದು ಹೇಳಬಹುದು. ಜನಜಂಗುಳಿಯನ್ನು ಸಂಘಟಿತವಾಗಿ ರೂಪುಗೊಳಿಸುವದೇ ಜಗತ್ತಿನ ಸದ್ಯದ ದೊಡ್ಡಪ್ರಶ್ನೆಯಾಗಿದೆ. ಭಾರತವು ಈ ಪ್ರಶ್ನೆಯನ್ನು ಬಿಡಿಸುವ ಮೊದಲು ತನ್ನ ರಾಷ್ಟ್ರೀಯ ಪ್ರಶ್ನೆಗಳನ್ನು ಬಿಡಿಸಿಕೊಳ್ಳಲಿಕ್ಕೆ ಬೇಕು. ಮನೆಗೆದ್ದು ಮಾರು ಗೆದೆಯಬಹುದಲ್ಲದೆ ಅನ್ಯಥಾ ಶಕ್ಯವಿಲ್ಲವು. ಮೊದಲು ತನ್ನನ್ನು ಬಲಪಡಿಸಿಕೊಳ್ಳುವದು ಭಾರತದ ಆದ್ಯ ಕರ್ತವ್ಯವು. ಆಮೇಲೆ ಅಂತರರಾಷ್ಟ್ರೀಯ ಸಂಘಟನೆಯಲ್ಲಿ ಇದಕ್ಕೆ ಮಹತ್ವವು ಬಂದೀತು.

## ಐಕ್ಯವೇ ಹಿಂದುಸ್ತಾನದ ಅಡಿಗಲ್ಲು

ಭಾರತದ ರಾಷ್ಟ್ರೀಯ ಪ್ರಶ್ನೆಯನ್ನು ಬಿಡಿಸಲೆಳಿಸುವ ತರುಣನು ಹಿಂದೂಸಮಾಜದ ತಳಹದಿಯಾಗಿರುವ ಐಕ್ಯವನ್ನೂ ಅದರ ಸುಧಾರಣೆಯ ಗತಿಯನ್ನೂ ಚನ್ನಾಗಿ ತಿಳಿದಿರಬೇಕು. ನನ್ನ ದೃಷ್ಟಿಯಿಂದ ಹಿಂದುಸ್ತಾನದ ಸಾಂಸ್ಕೃತಿಕ ಸುಧಾರಣೆಯು ವಿಶಾಲವಾದ ಒಂದು ನದಿಯಂತಿರುವದು. ಅದರ ಉಗಮವು ಅನಾದಿಕಾಲದಲ್ಲಾಗಿದೆ; ಮುಖದ ಪರ್ಯವಸಾನವು ನಿರ್ಣಯಿಸಲಶಕ್ಯವು. ಕಾಲಕಾಲಕ್ಕೆ ನಾನಾಪ್ರಕಾರದ ಸಂಸ್ಕಾರಗಳು ಉದಯಿಸಿ ಆ ಮಹಾನದಿಗೆ ಎಲ್ಲ ಕಡೆಯಿಂದಲೂ ಬಂದು ಕೂಡುವ ಶಾಖೆಗಳಾಗಿವೆ. ನವೀನವಾಗಿ ಹುಟ್ಟಿಬಂದ ಶಾಖೆಗಳೆಲ್ಲ ಮೊದಲಿದ್ದ ಮೂಲ ಸಂಸ್ಕೃತಿ ಪ್ರವಾಹವನ್ನೇ ಹೆಚ್ಚಾಗಿ ಬಲಪಡಿಸಿವೆ. ಕಾಶ್ಮೀರದಿಂದ ಕನ್ಯಾ-ಕುಮಾರಿಯವರೆಗೂ ಬಂಗಾಲದಿಂದ ಗುಜರಾಥದವರೆಗೂ ಹಬ್ಬಿರುವ ಸಾಂಸ್ಕೃತಿಕ ಸುಧಾರಣೆಯು ಮೂಲತಃ ಒಂದೇ ಆಗಿರುವದು. ಹೊರಗೆ ನಾನಾತರದ ಪ್ರಭೇದಗಳು ಕಾಣುತ್ತಿದ್ದರೂ ನಾವು ಓದುವ ಇತಿಹಾಸಗಳು ಬೇರೆಬೇರೆ ಭೇದಗಳನ್ನು ಹೇಳುತ್ತಿದ್ದರೂ ಅವುಗಳನ್ನು ಆಳವಾಗಿ ನಾವು ವಿಚಾರಿಸಿದಲ್ಲಿ ಆ ಐಕ್ಯಮೂಲವನ್ನು ಕಾಣದಿರಲಾರೆವು. ನಾವು ಕಲಿಯುತ್ತಿರುವ ಅನೇಕ ಐತಿಹಾಸಿಕ ಸಂಗತಿಗಳನ್ನು ಇದೀಗ ಮರೆಯಲೇಬೇಕಾಗಿದೆ. ಪರನಾಡಿನ ಇತಿಹಾಸಕಾರರು ನಮಗೆ ಕಲಿಸಿದ ಅನೇಕ ಐತಿಹಾಸಿಕ ಸಂಗತಿಗಳು ಬೇಗನೇ ನಮ್ಮ ಮನಸ್ಸಿನಿಂದ ಕಿತ್ತುಹಾಕಲ್ಪಡಬೇಕಾದಷ್ಟು ಅಸಹ್ಯ

ವಾಗಿವೆ. ಹಿಂದಿನ ವಿಷಯಗಳನ್ನೆಲ್ಲ ನಾವೇ ಚೆನ್ನಾಗಿ ಪರಿಶೀಲಿಸಿ, ಸಂಶೋಧಿಸಿ, ನಮ್ಮ ನಿಜವಾದ ಐತಿಹಾಸಿಕ ಜ್ಞಾನವನ್ನು ಬೆಳಿಸಿ ಅದರಿಂದ ನಮ್ಮ ಸುಧಾರಣೆಯ ಪೂರ್ವದ ಘನತೆಯನ್ನು ಅನುಭವಕ್ಕೆ ತಂದುಕೊಳ್ಳಬೇಕು. ಕಾಲನ ದವಡೆಯಲ್ಲಿ ಸಿಲುಕಿ ಒದ್ದಾಡುತ್ತಿರುವ ನಮ್ಮ ಬಡಭಾರತಮಾತೆಯನ್ನು ಉದ್ಧರಿಸಲು ಹೆಣಗುವ ತರುಣ ಪೀಳಿಗೆಗೆ ಅವಳ ಗತವೈಭವವೇ ಗತಿಯು. ಸಾಮಾಜಿಕ, ನೈತಿಕ, ಧಾರ್ಮಿಕ, ತಾತ್ವಿಕ ಮತ್ತು ಕಲಾನೈಪುಣ್ಯ ಮೊದಲಾದ ವಿಷಯಗಳಲ್ಲಿ ಭಾರತವು ಒಂದಾನೊಂದು ಕಾಲಕ್ಕೆ ಏರಿದ ಉನ್ನತಶಿಖರವನ್ನು ಪ್ರತಿಯೊಬ್ಬ ಭಾರತೀಯನು ಮರೆಯಲಿಕ್ಕಾಗದು. ಆ ಸುಧಾರಣೆಯಲ್ಲಿ ಹಿಂದೂ-ಮುಸಲ್ಮಾನವೆಂಬ, ಬ್ರಾಹ್ಮಣ-ಬ್ರಾಹ್ಮಣೇತರವೆಂಬ ಪ್ರತ್ಯೇಕ ಭೇದವಿಲ್ಲ. ಅದು ಅನೇಕ ಸಂಸ್ಕೃತಿಗಳ ಸಾಮರಸ್ಯದ ಪರಿಣಾಮವೇ ಆಗಿದೆ. ಹಾಲುಗಲ್ಲಿನಲ್ಲಿ ಒಡಮೂಡಿದ ತಾಜಮಹಾಲ ಮಂದಿರದ ದೃಶ್ಯವನ್ನು ಬೆಳದಿಂಗಳಿನಲ್ಲಿ ನೋಡಿರಿ. ಅದನ್ನು ರಚಿಸಿದ ಮಾನವನ ಮನಸ್ಸಿನ ಸೌಂದರ್ಯವೆಷ್ಟಿರಬೇಕೆಂಬದನ್ನು ಕಲ್ಪಿಸಿ ತಿಳಿಯಿರಿ. "ಕಲ್ಲಾಗಿ ಒಡಮೂಡಿಕೊಂಡ ಕಣ್ಣೀರು" ಮುಂತಾಗಿ ಅದನ್ನು ಕವಿಗಳು ಎಷ್ಟೋ ಅಂದವಾಗಿ ವರ್ಣಿಸಿದ್ದಾರೆ. ಶಿಲ್ಪಕಲೆಯಲ್ಲಿಯೂ ಕೂಡ ರಾಷ್ಟ್ರಜೀವನದ ಮತ್ತು ಸ್ವಭಾವದ ಆದರ್ಶವು ಕಂಡುಬರುವದಿಲ್ಲವೆ? ತಾಜಮಹಾಲನ್ನುಳಿದು ಬೇರೆ ಏನನ್ನು ತಮ್ಮ ಹಿಂದೆ ಹಿಂದುಸ್ತಾನದಲ್ಲಿ ಬಿಡದಿದ್ದರೂ ಸರಿ, ಅದೊಂದಕ್ಕಾಗಿಯೇ ಮೊಗಲರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ. ತಮ್ಮ ಆಳಿಕೆಯ ಅಂತ್ಯದಲ್ಲಿ ಬ್ರಿಟಿಶಸರಕಾರವು ಏನನ್ನು ಬಿಡುವದು? ಕುರೂಪಿ ಕೋಣೆಗಳಿಂದಲೂ ಅಸಹ್ಯವಾದ ಕಟ್ಟಡಗಳಿಂದಲೂ ಕೂಡಿದ ಸೆರೆಮನೆಗಳಲ್ಲದೆ ಮತ್ತೇನೂ ಇರಲಾರದು.

ಜನಾಂಗದ ಬಹಿರ್ಮುಖವಾದ ವಿವಿಧ ದೃಷ್ಟಿಕೋನಗಳನ್ನು ಅಂತರ್ಮುಖಮಾಡಿ ಕೇಂದ್ರೀಕರಿಸುವದರಲ್ಲಿಯೂ ಬೇರೆ ಬೇರೆ ಭಿನ್ನ ಸಂಸ್ಕೃತಿಗಳ ಸಾಮರಸ್ಯಮಾಡುವದರಲ್ಲಿಯೂ ಅನೇಕ ವಿಕೃತ ನಾದಗಳನ್ನು ಮೇಳವಿಸಿ ಏಕನಾದವಾಗುವಂತೆ ಹೊಂದುಗೂಡಿಸುವದರಲ್ಲಿಯೂ ಭಾರತ ರಾಷ್ಟ್ರಜೀವನದ ವೈಶಿಷ್ಟ್ಯವು ಕಂಡುಬರುತ್ತದೆ. ಯುರೋಪವು ಈ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸಿತು. ಆದರೆ ಹೇಗೆ? ಯಾವ ಮಾರ್ಗದಿಂದ? ಪರಿಣಾಮವೇನೆಂಬುದನ್ನು ನೋಡಿರಿ. ಇಂಗ್ಲಂಡ ಮತ್ತು

ಯುರೋಪದ ಇತರ ರಾಷ್ಟ್ರಗಳು ಆಫ್ರಿಕಾ ಮತ್ತು ಏಶಿಯಾ ಖಂಡಗಳಲ್ಲಿ ಮಾಡಿದ ಪ್ರಯತ್ನದ ಫಲವೇನಾಯಿತು? ಯುರೋಪದ ಸುಧಾರಣೆಯ ಸೆಳವಿಗೆ ಸಿಕ್ಕ ಮೂಲನಿವಾಸಿಗಳು ಈಗ ಎಲ್ಲಿದ್ದಾರೆ? ಅಮೇರಿಕಾ ದೇಶದ ನಿಗ್ರೋಜನರ ಪ್ರಶ್ನೆಯನ್ನು ಅಮೇರಿಕೆಯು ಹೇಗೆ ಬಿಡಿಸುತ್ತಲಿದೆ? ಹಿಂದುಸ್ಥಾನವು ಅಂಥ ಬಾಹ್ಯಾಡಂಬರದ ಮಾರ್ಗಗಳಿಗೆ ಮರುಳಾಗದೆ ತನ್ನ ಆತ್ಮತೇಜದ ಬೆಳಕಿನಿಂದ ತನ್ನ ಜೀವನಯಾತ್ರೆಯ ಗೆಲವಿಗಾಗಿ ಪ್ರಯತ್ನಿಸುತ್ತಲಿದೆ. ಹಿಂದೆ ವರ್ಣಾಶ್ರಮ ಧರ್ಮದಮೂಲಕ ಮಾನವೀ ಭೇದ ಭಾವಗಳನ್ನೆಲ್ಲ ಸಂಕಲನಮಾಡುವ ಪ್ರಯತ್ನವು ಮಾಡಲ್ಪಟ್ಟಿತು. ಆದರೆ ಸದ್ಯದಲ್ಲಿ ಪರಿಸ್ಥಿತಿಗಳು ಬಹಳ ಬದಲಾವಣೆ ಹೊಂದಿವೆ. ಆದ್ದರಿಂದ ಅದಕ್ಕಿಂತಲೂ ಹೆಚ್ಚು ಉದಾತ್ತವೂ ಸಶಾಸ್ತ್ರೀಯವೂ ಆದ ಸಂಘಟಿತ ಜೀವನದಕಡೆಗೆ ನಾವೆಲ್ಲರೂ ಈಗ ನೋಡಬೇಕಾಗಿದೆ. ಈಗ ಅಂಥ ಕಾಲವು ಸಮೀಪಿಸಿರುತ್ತದೆಂದು ಹೇಳಬಹುದು.



## ೮. ಹೊಸ ವಿಚಾರಗಳು (೧೯೨೮)

" The only knowledge that can really make us better is not of things and their laws but of persons and their thoughts. "

- James Mastinean.

### —ರಾಷ್ಟ್ರೀಯತ್ವದ ಕಲ್ಪನೆ—

### ಸ್ವತಂತ್ರ ಪ್ರಜಾಸತ್ತಾತ್ಮಕ ಸಂಸ್ಥೆಯೇ ನಮ್ಮ ಗುರಿಯು

**ನಮ್ಮ ಆಂದೋಲನದ ಉಗಮವು :—** ನಮ್ಮ ರಾಷ್ಟ್ರೀಯ ಆಂದೋಲನದ ಉಗಮವು ಪರಕೀಯರಿಂದಾಗಿದೆ ಎಂದು ಕೆಲವರು ಆಕ್ಷೇಪಿಸುತ್ತಾರೆ. ಪರಕೀಯರಿಂದಲೇ ನಮ್ಮಲ್ಲಿ ಜೀವಕಳೆಯುಂಟಾಗಿದೆ ಎಂತಲೂ ನಾವು ಅವರ ಕಿತ್ತಿಗಳನ್ನು ಎದುರಿಗಿರಿಸಿಕೊಂಡು ತೀಡುತ್ತಿದ್ದೇವೆಂತಲೂ ಹಲಕೆಲವು ಪರದೇಶದ ಅಜ್ಞಪಂಡಿತರು ಅಭಿಪ್ರಾಯಪಡುತ್ತಾರೆ. ಆದರೆ ಇದು ಅಸಂಗತವಾದ ಮಾತೆಂದು ಸಿದ್ಧಮಾಡುವ ಅವಶ್ಯಕತೆ ಕೂಡ ಇರುವದಿಲ್ಲ. ಪಾಶ್ಚಾತ್ಯರ ಸಂಬಂಧವು ಬೌದ್ಧಿಕ ಮತ್ತು ನೈತಿಕ ನಿದ್ರೆಗಳಿಂದ ನಾವು ಎಚ್ಚರಿಯುವದರಲ್ಲಿ ಸಹಾಯಕವಾಗಿರುವದೆಂಬುದರಲ್ಲಿ ಸಂಶಯವಿಲ್ಲ.

ಆದರೆ ಆ ಸಂಬಂಧದಿಂದ ಪಾಶ್ಚಾತ್ಯ ರಾಷ್ಟ್ರವು ನಮ್ಮ ಮರೆತುಹೋದ ತಿಳಿವಳಿಕೆಯನ್ನು ಪುನಃ ತಂದುಕೊಟ್ಟಿದೆ. ಆ ತಿಳಿವಳಿಕೆಯಿಂದ ನಮ್ಮಲ್ಲಿ ಪೂರ್ಣ ಎಚ್ಚರಹುಟ್ಟಿ ನಮ್ಮ ಆಂದೋಲನವನ್ನು ನಾವೇ ಸುರುವ್ರಮಾಡಿದ್ದೇವೆ. ಇದು ಶುದ್ಧ ಸ್ವದೇಶೀ ಚಳವಳಿಯು. ಇದರ ಉಗಮವು ಅನ್ಯ ರಾಷ್ಟ್ರಗಳಲ್ಲಿ ಆಗಲು ಶಕ್ಯವಿಲ್ಲ. ಹಿಂದುಸ್ತಾನವು ಅಂಧಶ್ರದ್ಧೆಯ ಕಾಲವನ್ನು ದಾಟಿ ಈಗ ವಿಚಾರಮಯ ಜಗತ್ತಿನಲ್ಲಿ ಕಾಲಿಟ್ಟಿದೆ. ಅನ್ಯರ ಬಾಹ್ಯಾನುಕರಣಗಳಲ್ಲಿ ಎಷ್ಟೋ ದಿವಸಗಳನ್ನು ಕಳೆದು ಈಗ ಬುದ್ಧಿಗಲಿತಿದೆ. ನಮ್ಮ ನಾಡು ಅನೇಕಾನೇಕ ಪರಿಸ್ಥಿತಿಗಳ ದವಡೆಗಳೊಳಗಿಂದ ಪಾರಾಗಿ ತಾನಾಗಿಯೇ ಉಳಿದದ್ದು ನಮ್ಮೆಲ್ಲರ ಸುದೈವವು. ಅದು ಎಷ್ಟೋಸಾರೆ ಪರಿವರ್ತನಹೊಂದಿದೆ. ಇಂದು ತನ್ನ ನಿಜವಾದ ಅಂತರಾತ್ಮವನ್ನು ಕಂಡುಹಿಡಿದು ದೇಶೋದ್ಧಾರಕ್ಕಾಗಿ ತನ್ನ ಈ ರಾಷ್ಟ್ರೀಯ ಚಳವಳಿಯನ್ನು ಸುರುವ್ರಮಾಡಿದೆ. ನಮ್ಮ ರಾಷ್ಟ್ರೀಯ ಆದರ್ಶಗಳ ಬೆಳಕಿನಿಂದಲೇ ಈ ಆಂದೋಲನವು ನಡೆದಿದೆ. ರಾಜಕೀಯ ಮತ್ತು ಆರ್ಥಿಕ ಪರಾವಲಂಬನೆಯಿಂದಮಾತ್ರವೇ ನಾವು ಈಗ ಬಳಲುತ್ತಿರುವದಿಲ್ಲ. ಅಷ್ಟೇ ಆಗಿದ್ದರೆ ಅದನ್ನು ಕಿತ್ತೊಗೆಯುವದು ಬಹಳ ದೊಡ್ಡ ಕೆಲಸವಾಗುತ್ತಿದ್ದಿಲ್ಲ. ಆದರೆ ನಮ್ಮ ಸಂಸ್ಕೃತಿಯಮೇಲೆ ಪಾಶ್ಚಾತ್ಯ ಸಂಸ್ಕೃತಿಯು ನಡೆಯಿಸಹತ್ತಿರುವ ಅನ್ಯಾಯದ ಸತ್ತೆಯನ್ನು ಕಿತ್ತೊಗೆಯುವದು ಮಹತ್ವದ್ದಿದೆ. ಏಶಿಯಾ ಖಂಡವು ಪಾಶ್ಚಾತ್ಯರ ವಿರೋಧವಾಗಿ ತಲೆಯೆತ್ತುತ್ತಿರುವದರ ಮೂಲವು ಸಾಂಸ್ಕೃತಿಕ ಸ್ವಾತಂತ್ರ್ಯಕ್ಕಾಗಿಯೇ ಇದೆ. ಜೋರಿನಿಂದ ಬೀಳುವ ಬರ್ಫದ ಬಂಡೆಗಳಂತೆ ಕಠಿಣವಾದ ಅಲೆಗ್ಝಾಂಡರ ಮತ್ತು ಚಂಗಿಜಖಾನರ ಕಟುತರವಾದ ಹಿಂಸಾತ್ಮಕ ದೌಡುಗಳಿಂದ ನಾವು ಅಷ್ಟೊಂದು ಜರ್ಜರಿತರಾಗಲಿಲ್ಲ. ಆದರೆ ಬ್ರಿಟಿಶರ ಆಳಿಕೆಯು ನಮ್ಮ ನಾಡಿನ ಕೀಲುಗಳನ್ನು ಮೆಲ್ಲಗೆ ಸಡಿಲಿಸಿ ಲಿಕಿಲಿಕಿ ಮಾಡಿದೆ. ಅದು ನಮಗೆ ಗೋಚರವಾಗದಂತೆ ನಮ್ಮನ್ನು ಮೆತ್ತಗೆಮಾಡಿ ನಮ್ಮ ಅಸ್ತಿತ್ವವನ್ನೇ ನಾಶಮಾಡಹತ್ತಿದೆ. ಗೆದ್ದಲಿಯಂತೆ ಒಳಹೊಕ್ಕು ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಜೀವಾಳವನ್ನೇ ಮೆಯ್ಯುಹತ್ತಿದೆ. ಜಿಗಳಿಯಂತೆ ನಮ್ಮ ರಕ್ತವನ್ನೆಲ್ಲ ಈಗಾಗಲೆ ಹೀರಿದೆ. ನಮ್ಮ ಜನಾಂಗವು ನಿರ್ವೀರ್ಯವಾಗಿ ದಾಸ್ಯಪ್ರಿಯವಾಗುತ್ತ ನಡೆದುದಕ್ಕೆ ಬ್ರಿಟಿಶರೇ ಹೊಣೆಗಾರರು.

ವ್ಯಕ್ತಿಗಳ ಏರಿಳಿತಗಳಂತೆ ರಾಷ್ಟ್ರಜೀವನ, ಸಮಾಜಜೀವನಗಳ ಗತಿಯೂ ಅಭ್ಯುದಯ ಅವನತಿಗಳನ್ನು ಹೊಂದುತ್ತಲಿದೆ. ಸರ್ ಫ್ಲಿಂಡರ್ಸ್ ಪೆಟ್ರಿ (Sir Flinders Petrie) ಯವರ ಅಭಿಪ್ರಾಯಗಳು ಎಲ್ಲರೂ ಒಪ್ಪತಕ್ಕವುಗಳಾಗಿವೆ. ಪ್ರತಿಯೊಂದು ಸುಧಾರಣೆಯ ಜನ್ಮ, ಜೀವನಕ್ರಮ, ಆಯುಷ್ಯಗಳು ಮೊದಲೇ ನಿಯಮಿಸಲ್ಪಡುತ್ತವೆ. ಯಾವದೊಂದು ವಿಶಿಷ್ಟ ಸುಧಾರಣೆಯು ವಿನಾಶೋನ್ಮುಖವಾಗಿದ್ದರೂ ಅನುಕೂಲ ಪರಿಸ್ಥಿತಿಗಳೊದಗಿದಾಗ ಅದು ಮತ್ತೆ ಹೊಸದಾಗಿ ಜನ್ಮವೆತ್ತುವದು ಶಕ್ಯವಿದೆ. ಅದರ ಪುನರ್ಜನ್ಮದ ನೂತನಶಕ್ತಿಯೂ ಜೀವನದ ತಿರುಳೂ ಹೊರಗಿನಿಂದ ಬರುವದು ಶಕ್ಯವಿಲ್ಲ. ಅವು ಸ್ವಯಂಭೂತವಾಗಿಯೇ ಜನ್ಮತಾಳುತ್ತವೆ. ಆದ್ದರಿಂದಲೇ ಅದು ಪ್ರಾಚೀನಕಾಲದ್ದಿದ್ದಾಗ್ಯೂ ಅದರಲ್ಲಿ ನಾವೀನ್ಯವೂ ತಾರುಣ್ಯವೂ ಯಾವಾಗಲೂ ತುಂಬಿರುತ್ತವೆ. ಬ್ರಿಟಿಶರ ಆಗಮನದ ಪೂರ್ವದಲ್ಲಿಯ ಕೀಳುದಿವಸಗಳು ಹಿಂದುಸ್ತಾನದ ಸುಧಾರಣಾಚಕ್ರದ ಅವನತಿ ಪಥದ ಅಧೋಬಿಂದುವನ್ನು ಸೂಚಿಸುತ್ತವೆ. ಆದುದರಿಂದ ಸ್ವಾಭಾವಿಕವಾಗಿಯೇ ಹಿಂದುಸ್ತಾನವು ಈಗೀಗ ಸಾವಕಾಶವಾಗಿ ತಲೆಯೆತ್ತತೊಡಗಿದೆ. ಪ್ರೇಮೋಲ್ಲಿ ಹಾಯುತ್ತಿರುವ ತೆರೆಗಳನ್ನೊಂದೊಂದಾಗಿ ಕಾಲಕೆಳಗೆ ತುಳಿಯಹತ್ತಿದೆ. ಇನ್ನು ಮುಂದೆ ಬರಲಿರುವ ಸ್ವಲ್ಪೇಕಾಲಾವಧಿಯಲ್ಲಿ ಹಿಂದುಸ್ತಾನವು ಜಯದಮೇಲೆ ಜಯವನ್ನು ದೊರಕಿಸುತ್ತ ಉನ್ನತಿಯ ಅತ್ಯುಚ್ಚ ಶಿಖರವನ್ನೇರುವದರಲ್ಲಿ ಸಂದೇಹವಿಲ್ಲ. ಜಗತ್ತಿನ ಎಲ್ಲ ಸುಧಾರಣೆಗಳಿಗಿಂತ ಮೇಲಾಗಿ ತಲೆಯೆತ್ತಿ ಉನ್ನತಸ್ಥಾನದಲ್ಲಿ ಶೋಭಿಸುವ ಭಾರತಮಾತೆಯನ್ನು ಕಾಣಲು ಜೀವಿಸುವ ಭಾರತೀಯನು ಧನ್ಯನು.

ಭಾರತೀಯ ಸಂಸ್ಕೃತಿಯು ಇನ್ನೂ ಜೀವಂತವಿರುವದೆಂಬಬಗ್ಗೆ ಕೆಲವರಿಗೆ ಸಂಶಯವಿರಬಹುದು. ಅಂಥವರಿಗೆ ಉತ್ತರವಿಷ್ಟೆ— "ಎಡವಿಡದೆ ನಿಮ್ಮ ಸುತ್ತಲು ನಡೆಯುತ್ತಿರುವ ನಿಮ್ಮ ಉತ್ಪಾದನ ಕ್ರಿಯೆಯ ಕಡೆಗೆ ನೋಡಿರಿ". ಶಿಲ್ಪಕಲಾ, ವಾಙ್ಮಯ, ತತ್ವಜ್ಞಾನ, ಶಾಸ್ತ್ರೀಯ ವಿಷಯ, ವ್ಯವಹಾರೋದ್ಯೋಗಗಳಲ್ಲಿಯೂ ಕೂಡ, ಅದೇಕೆ ಜೀವನದ ಪ್ರತಿಯೊಂದು ಶಾಖೆಯಲ್ಲಿಯೂ ತನ್ನ ಅಸ್ತಿತ್ವವನ್ನು ಭಾರತವು ಕಾಯ್ದುಕೊಳ್ಳುತ್ತಿರುವದು ಕಂಡುಬರುವದು. ಪೂರ್ವದ ಸಂಸ್ಕೃತಿಯಿಂದಲೇ ಬೆಳೆದು ಹೊಸವಿಚಾರಗಳ ಅರಳುಮೊಗ್ಗುಗಳನ್ನು ಈಗ ಅದು ಕೊಡುತ್ತಲಿದೆ. ನಿತ್ಯಸತ್ಯವಾದ ತತ್ವ

ಗಳನ್ನು ಹೊಸದಾಗಿ ಕಂಡುಕೊಂಡು ಪ್ರಪಂಚಕ್ಕೆ ಮಾರ್ಗದರ್ಶಕವಾಗ ಹತ್ತಿದೆ. ಹೊಸತರದ ಶಿಲ್ಪಕಲೆ, ಲಲಿತಕಲೆಗಳನ್ನು ಉತ್ಪಾದಿಸುವ ಹಂಚಿಕೆಯಲ್ಲಿದೆ. ನವಯುಗದ ಹೊಸಪದ್ಧತಿಯ ಕಟ್ಟಡಗಳನ್ನು ಕಟ್ಟುವವರಲ್ಲಿಯೂ ಮಾದರಿಯ ಸಂಸ್ಥೆಗಳನ್ನು ಸ್ಥಾಪಿಸುವವರಲ್ಲಿಯೂ ಭರತಖಂಡವು ಜೋರಿನಿಂದ ಪ್ರಯತ್ನಿಸುತ್ತಲಿದೆ.

ಸಾಮಾಜಿಕ ಕಟ್ಟಳೆಗಳನ್ನು ತಿದ್ದುವವರಲ್ಲಿಯೂ ನೈತಿಕ ಪ್ರಮಾಣಗಳಿಗೆ ಹೊಸರೂಪವನ್ನು ಕಲ್ಪಿಸುವವರಲ್ಲಿಯೂ ಹೊಸ ಕಟ್ಟಳೆಗಳನ್ನು ಜಾರಿಯಲ್ಲಿ ತರುವವರಲ್ಲಿಯೂ ಹೊರಗಿನಿಂದಬಂದ ಪ್ರೇರಣೆ ಪ್ರತಿಷ್ಠೆಗಳನ್ನು ತನ್ನಲ್ಲಿದ್ದ ಮೂಲಸ್ವರೂಪದೊಡನೆ ಸಜಾತೀಕರಿಸುವವರಲ್ಲಿಯೂ ಮತ್ತು ತನ್ನ ರಾಷ್ಟ್ರೀಯ ಸಂಸ್ಥೆಗಳನ್ನು ಹೊಸಮಾದರಿಯಮೇಲೆ ಕಟ್ಟುವವರಲ್ಲಿಯೂ ಭಾರತವರ್ಷವು ಈಗ ಹೊಸವನ್ನೇನೂ ಮಾಡುತ್ತಿಲ್ಲ. ಅದು ತನ್ನ ಪೂರ್ವದ ಇತಿಹಾಸದಲ್ಲಿ ಪುನಃ ಪುನಃ ಮಾಡಿದ್ದನ್ನೇ ಈಗ ತಿರುಗಿ ಮತ್ತೆ ಮಾಡುತ್ತಲಿದೆ. ಬ್ರಿಟಿಶರು ಹಿಂದುಸ್ತಾನಕ್ಕೆ ಬರದಿದ್ದರೂ ಈ ಕಾರ್ಯಗಳು ನಡೆದೇ ನಡೆಯುತ್ತಿದ್ದವು. ಒಳಗಿನಿಂದ ಉಕ್ಕಿಬರುವ ಸ್ವಯಂಸ್ಫೂರ್ತಿಯು ( "Elan Vital" ) ನವಯುಗದ ಅವಶ್ಯಕತೆಗಳ ಮೂಲಕ ಅದನ್ನು ಹೀಗೆಮಾಡಲಿಕ್ಕೆ ಹಚ್ಚುತ್ತಿದ್ದವು. ಕಾರಣ ಗ್ರೇಟಬ್ರಿಟನ್‌ವಾಗಲಿ ಅಥವಾ ಯಾವದೇ ಪಾಶ್ಚಾತ್ಯದೇಶವಾಗಲಿ ಹಿಂದುಸ್ತಾನವನ್ನು ಜಾಗ್ರತೆಗೊಳಿಸಿದ ಬಹುಮಾನಕ್ಕೆ ಯೋಗ್ಯವಾಗಲಾರದು. ಅಂಥ ಬಹುಮಾನಕ್ಕೆ ಅವು ಆಶೆಪಡುತ್ತಿದ್ದರೆ ಅದು ದುರಾಶೆ ದುರಭಿಮಾನವೇ ಸರಿ.

## ಪ್ರಜಾಪ್ರಭುತ್ವಸಂಸ್ಥೆ ಪಾಶ್ಚಾತ್ಯರಿಂದ ಜನ್ಮತಾಳಿತೋ ?

ಪ್ರಜಾಪ್ರಭುತ್ವಸಂಸ್ಥೆಯು ಪಾಶ್ಚಾತ್ಯರ ಕಂಕುಳ ಕೂಸೋ? ಪ್ರಜಾಪ್ರಭುತ್ವಾಧಿಕಾರಿ ವಿಚಾರವು ಕೇವಲ ಪಾಶ್ಚಾತ್ಯರಿಂದ ಉಗಮವಾಗಿದೆ. ಹಿಂದುಸ್ತಾನವು ಪೂರ್ಣ ಅಥವಾ ಅರ್ಧ ಪ್ರಜಾಪ್ರಭುತ್ವಸಂಸ್ಥೆಯನ್ನು ಸ್ವೀಕರಿಸುವದೆಂದರೆ ತಾನು ಪಾಶ್ಚಾತ್ಯದೇಶವಾಗಹತ್ತಿದೆ ಎಂದು ಅನೇಕರು ಆರೋಪಿಸುತ್ತಾರೆ. ಪ್ರಜಾಪ್ರಭುತ್ವ ಪದ್ಧತಿಯು ಪೌರ್ವಾತ್ಯರ ಮನಸಿಗೆ ಒಪ್ಪುವಂತಹದಲ್ಲವೆಂದೂ ಕೆಲವರ ಮತ. ಹಿಂದುಸ್ತಾನದ ರಾಜಕೀಯ ಪ್ರಗತಿಯು ಆ ದಿಕ್ಕಿನಲ್ಲಿ ಮಾಡಲ್ಪಡಬಾರದೆಂದು ಅನೇಕ ಪಾಶ್ಚಾತ್ಯ ಪಂಡಿತರು ಅನ್ನುತ್ತಾರೆ. ಲಾರ್ಡ ರೊನಾಲ್ಡಸೇಯುವರು ಈ ತರದ ಸ್ಪಷ್ಟ

ಅಭಿಪ್ರಾಯದವರಲ್ಲಿ ಒಬ್ಬರಿದ್ದಾರೆ. ಇದು ಅಜ್ಞಾನದ ಪರಮಾವಧಿಯಲ್ಲದೆ ಮತ್ತೇನು? ಅಜ್ಞಾನವೂ ಭೀವಾರಿತನವೂ ಇದಕ್ಕಿಂತ ಮೀರಿಹೋಗ ಲಾರವು. ಪ್ರಜಾಪ್ರಭುತ್ವವು ಪಾಶ್ಚಾತ್ಯರ ಗುತ್ತಿಗೆಯ ಸಂಸ್ಥೆಯಲ್ಲ. ಅದು ಮಾನವಕೋಟಿಯ ಸಂಸ್ಥೆಯಿದೆ. ಎಲ್ಲೆಲ್ಲಿ ರಾಜಕೀಯ ಸಂಸ್ಥೆಗಳ ಉತ್ಪಾದನಕ್ಕಾಗಿ ಹೆಣಗಾಟವು ನಡೆದಿದೆಯೋ ಅಲ್ಲಲ್ಲೆಲ್ಲ ಮಾನವಪ್ರಾಣಿಯ ಮನಸಿನಲ್ಲಿ ಈ ಚಮತ್ಕಾರಿಕ ಸಂಸ್ಥೆಯ ವಿಚಾರಗಳು ಬಂದೇ ಬಂದಿವೆ. ಹಿಂದುಸ್ತಾನದ ಪೂರ್ವೇತಿಹಾಸವು ಪ್ರಜಾಪ್ರಭುತ್ವ ಸಂಸ್ಥೆಗಳ ಉದಾಹರಣೆಗಳಿಂದ ತುಂಬಿ ತುಳುಕುತ್ತದೆ. ಮಿ. ಕೆ. ಪಿ. ಜಯಸ್ವಾಲರು ತಮ್ಮ ಹಿಂದೂ ರಾಜ್ಯಶಾಸ್ತ್ರ ("Hindu Polity") ಎಂಬ ಗ್ರಂಥದಲ್ಲಿ ಈ ವಿಷಯವನ್ನು ಚನ್ನಾಗಿ ವಿವರಿಸಿದ್ದಾರೆ. ಪೂರ್ವಕಾಲದಲ್ಲಿದ್ದ ಆಗ ಪ್ರಜಾಧಿಪತ್ಯದ ರಾಜ್ಯಗಳ ಪಟ್ಟಿಯೊಂದನ್ನು ಅವರು ಅದರಲ್ಲಿ ಕೊಟ್ಟಿದ್ದಾರೆ. ಹಿಂದುಸ್ತಾನದ ಎಲ್ಲ ಭಾಷೆಗಳಲ್ಲಿ ಉತ್ತಮ ಪ್ರಗತಿಹೊಂದಿದ ರಾಜಕೀಯ ಸಂಸ್ಥೆಗಳಿಗೆ ಸಂಬಂಧಿಸಿದ ವಿಶಿಷ್ಟ ಶಬ್ದಸಂಗ್ರಹವು ಸಾಕಷ್ಟು ಸಿಗುತ್ತದೆ. ಹಿಂದುಸ್ತಾನದ ಕೆಲ ಭಾಗಗಳಲ್ಲಿ ಈಗ್ಯೂ ಅಂಥ ಸಂಸ್ಥೆಗಳನ್ನು ಕಾಣಬಹುದು. ಉದಾಹರಣಾರ್ಥ: ಆಸಾಮದ ಖಾಸಿಸರು ತಮ್ಮನ್ನಾಳುವ ಒಡೆಯರನ್ನು ಈಗಲೂ ಮತಕೊಟ್ಟು ಆರಿಸುವರು. ಈ ಪದ್ಧತಿಯು ಅವರಲ್ಲಿ ಅನಾದಿಯಿಂದ ನಡೆದು ಬಂದಿದೆ. ಹಳ್ಳಿ ಮತ್ತು ಪಟ್ಟಣಗಳ ಆಡಳಿತಗಳಲ್ಲಿ ಪ್ರಜಾಪ್ರಭುತ್ವದ ತತ್ವಗಳೇ ನೆಲೆಗೊಂಡಿವೆ. ಉತ್ತರ ಭಾಗದಲ್ಲಿ ರಾಜಶಾಹಿಯ ವರೇಂದ್ರ ಸಂಶೋಧನೆಯ ಕಾರ್ಯಾಲಯದಲ್ಲಿ ಒಂದು ಹಿಂದಿನಕಾಲದ ತಾಮ್ರಪಟವಿದೆ. ಅದರಲ್ಲಿ ನಗರದ ಆಡಳಿತೆಯು ಶ್ರೇಷ್ಠಿ (ಶೆಟ್ಟಿ) ಯನ್ನೊಳಗೊಂಡು ಐದು ಜನರದೊಂದು ಪಂಚರಸಭೆಯಿಂದ ಜರಗುತ್ತಿತ್ತೆಂದು ಉಲ್ಲೇಖವಿದೆ. ಆ ನಗರ ಶ್ರೇಷ್ಠಿಯೇ ಈಗಿನ ಅಧ್ಯಕ್ಷ ಅಥವಾ ಮೆಯರ (Mayor) ರೆಂದು ಹೇಳಬಹುದು. ಹಿಂದುಸ್ಥಾನದ ಹಳ್ಳಿಗಳ ಪಂಚಾಯತಿ ಆಳಿಕೆಯ ವಿಷಯಕ್ಕೆ ಭಾರತೀಯರಿಗೆ ಹೊಸದಾಗಿ ಹೇಳುವ ಅವಶ್ಯಕತೆ ಇಲ್ಲ. ಅನಾದಿ ಕಾಲದಿಂದ ವಂಶಪರಂಪರೆಯಾಗಿ ಈ ವ್ಯವಸ್ಥೆಯು ನಮ್ಮಲ್ಲಿ ನಡೆಯುತ್ತ ಬಂದಿದೆ. ಪ್ರಜಾಪ್ರಭುತ್ವಪಷ್ಟೆ ಯಾಕೆ, ಇಂಥ ಇತರ ಯಾವ ಸುಧಾರಿಸಿದ ಸಾಮಾಜಿಕ ರಾಜಕೀಯ ಉಚ್ಚ ತತ್ವಗಳೂ ಹಿಂದುಸ್ತಾನಕ್ಕೆ ಪೂರ್ವಕಾಲದಲ್ಲಿ ಅಪರಿಚಿತವಿದ್ದಿಲ್ಲವೆಂದು ಧೈರ್ಯದಿಂದ ಹೇಳಬಹುದು. ಉದಾಹರಣಾರ್ಥ:

ಕಮ್ಯೂನಿಜಂ (Communism) ವೂ ಕೂಡ ಯುರೋಪದ ಸಂಸ್ಥೆಯಲ್ಲ. ಮೇಲೆಹೇಳಿದಂತೆ ಆಸಾಮುದ ಖಾಸಿಸ ಜನರಲ್ಲಿ ಪ್ರತ್ಯೇಕವಾದ ವೈಯಕ್ತಿಕ ಆಸ್ತಿಗಳು ಕಲ್ಪನೆಯಲ್ಲಿಕೂಡ ಕಂಡುಬರುವದಿಲ್ಲ. ಇಡೀ ಭೂಮಿಯನ್ನೆಲ್ಲ ಆ ಜನಾಂಗವು ತಮ್ಮೆಲ್ಲರ ಒಟ್ಟಿನಲ್ಲ ಸೇರಿಸಿದೆ. ಇಂಥ ಉದಾಹರಣೆಗಳು ಹಿಂದುಸ್ಥಾನದ ಬೇರೆ ಭಾಗಗಳಲ್ಲ ಮತ್ತು ನಮ್ಮ ನಾಡಿನ ಪೂರ್ವದ ಇತಿಹಾಸದಲ್ಲಿ ಸಾಕಷ್ಟು ಸಿಗುತ್ತವೆ.

ಬೇರೆ ಬೇರೆ ಕಾಲ, ದೇಶಗಳಲ್ಲಿ ಪ್ರಪಂಚದೆದುರಿಗೆ ಬಂದ ಪ್ರಶ್ನೆಗಳೂ ಅವುಗಳಿಗೆ ಆಗಾಗ್ಗೆ ದೊರೆತ ಉತ್ತರಗಳೂ ಒಂದೇಬಗೆಯವಾದಷ್ಟು ಕಂಡು ಬರುವವು. ರಾಜಕೀಯ ಪ್ರಗತಿ-ವಿಗತಿಗಳು, ಸಂಸ್ಥೆಗಳ ತೇಲು-ಮುಳುಗುಗಳು ವರ್ತುಲನೇಮವನ್ನನುಸರಿಸಿ ನಡೆಯುತ್ತವೇಬದನ್ನು ಗ್ರೀಕ ತತ್ವಜ್ಞಾನಿಗಳು ಎಷ್ಟೋ ಶತಮಾನಗಳ ಹಿಂದೆ ಕಂಡು ಹಿಡಿದಿದ್ದಾರೆ. ಏಕಚಕ್ರಾಧಿಪತ್ಯ, ಪ್ರತಿಷ್ಠಾಪ್ರಭುತ್ವ,ಪ್ರಜಾಧಿಪತ್ಯವೇ ಮೊದಲಾದ ಪದ್ಧತಿಗಳು ಒಂದರಹಿಂದೊಂದು ಕ್ರಮವಾಗಿ ಅಧಿಕಾರ ಪದದಲ್ಲಿ ಬರುತ್ತವೆ. ಪ್ರಜಾಧಿಪತ್ಯದಿಂದ ಕೆಲವು ಸಾರೆ ಅರಾಜಕತೆಯುಂಟಾಗಿ ಪುನಃ ಸಾರ್ವಭೌಮಾಧಿಪತ್ಯ ಪದ್ಧತಿಯು ಸ್ವಾಭಾವಿಕವಾಗಿ ಜನಿಸುವದು. ಸಾಧಾರಣವಾಗಿ ಈ ಮೇಲಿನ ತತ್ವವನ್ನು ವಿಚಾರಿಸಿದರೆ ಅದು ಗ್ರೀಕ ಅಥವಾ ಯುರೋಪಕ್ಕಷ್ಟೇ ಸತ್ಯವಾಗಿರದೆ ಇಡೀ ಪ್ರಪಂಚಕ್ಕೇನೇ ಅನ್ವಯಿಸುವ ನಿಯಮವಾಗಿದೆ. ವಿಶ್ವದೊಳಗಿನ ಪ್ರಾಚೀನ ಸುಧಾರಣೆಗಳಲ್ಲೆಲ್ಲ ಚೈತನ್ಯ ರೂಪವಾಗಿರುವ ಸಂಸ್ಕೃತಿಯನ್ನು ನಿದರ್ಶಿಸುತ್ತಿರುವ ನಾವು ಕಾಲಗತಿಯಲ್ಲಿ ಎಲ್ಲ ತರದ ರಾಜಕೀಯ ಸಂಸ್ಥೆಗಳ ಉತ್ಪತ್ತಿ-ಲಯುಗಳೊಳಗಿಂದ ಪಾರಾಗಿದ್ದೇವೆ. ಬ್ರಿಟಿಶರು ಬರುವ ಮೊದಲು ಕೆಲಶತಮಾನಗಳಲ್ಲಿ ಸಾರ್ವಭೌಮಾಧಿಪತ್ಯ ಪದ್ಧತಿಯ ಸಲುವಾಗಿ ಪ್ರಯತ್ನಗಳೂ ಪುನರ್ಘಟನೆ-ಪುನರಾವರ್ತನೆಗಳೂ ನಡೆದದ್ದು ನಿಜವು. ಆದರೆ ಇದರ ಮೇಲಿಂದಲೇ ಪ್ರಜಾಪ್ರಭುತ್ವದಂಥ ಸಂಸ್ಥೆಗಳು ಹಿಂದೂ ಜನರಿಗೆ ಗೊತ್ತೇ ಇರಲಿಲ್ಲವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲವೆ? ಇಷ್ಟರಿಂದಲೇ ಅವು ನಮ್ಮ ಸ್ವಭಾವಕ್ಕೆ ಸರಿಬೀಳಲಾರವೆಂದೂ ಹೇಳಲಿಕ್ಕೆ ಬರುವದಿಲ್ಲ.

### ರಾಷ್ಟ್ರೀಯತ್ವ ಮತ್ತು ಅಂತರರಾಷ್ಟ್ರೀಯತ್ವ:

ರಾಷ್ಟ್ರೀಯತ್ವದ ಮತ್ತು ಅಂತರರಾಷ್ಟ್ರೀಯತ್ವದ ದೃಷ್ಟಿಗಳನ್ನು ವಿಚಾರಿಸಿ ಅನೇಕರು ರಾಷ್ಟ್ರೀಯತ್ವವಮೇಲೆ ಟೀಕಾತ್ಮಕಗದೆಯನ್ನು ಎತ್ತುತ್ತಾರೆ.

ಇದರ ವಿಷಯಕ್ಕೆ ನನ್ನ ದೇಶಬಾಂಧವರಿಗೆ, ಅದರಲ್ಲಿಯೂ ನನ್ನ ತರುಣ ಮಿತ್ರರಿಗೆ ಎಚ್ಚರಿಕೆ ಕೊಡುವದು ಅವಶ್ಯವೆಂದು ತೋರುತ್ತದೆ. ಅಂತರ ರಾಷ್ಟ್ರೀಯ ಸಂಸ್ಕೃತಿಗಳ ದೃಷ್ಟಿಯಿಂದ ರಾಷ್ಟ್ರೀಯ ಭಾವವು ಸಣ್ಣದೂ ಕ್ಷುಲ್ಲಕವಾದದ್ದೂ ಜಗಳತರುವಂಥಾದ್ದೂ ಆಗಿದೆ ಎಂದು ಕೆಲವರು ಆರೋಪಿಸುತ್ತಾರೆ. ಮನಸಿನ ಸುಧಾರಣೆಯ ಪ್ರಗತಿಯಲ್ಲಿ ಅದು ಅಂತರರಾಷ್ಟ್ರೀಯ ಭಾವನೆಯ ಬೆಳವಣಿಗೆಗೆ ಅಡ್ಡಬರುವದೆಂದು ತಿಳಿಯುತ್ತಾರೆ. ಆದರೆ ಭಾರತೀಯರ ರಾಷ್ಟ್ರಾಭಿಮಾನವು ಕ್ಷುಲ್ಲಕವೂ ಒಡಕು ಹುಟ್ಟಿಸುವಂಥಹದೂ ಇಲ್ಲವೆಂಬುದೇ ಅದಕ್ಕೆ ಉತ್ತರವು. ಅದು ಮಾನವ ಪ್ರಾಣಿಯ ಅತ್ಯುನ್ನತವಾದ ಆದರ್ಶಗಳ ಫಲವಾಗಿ ಜನ್ಮತಾಳಿದೆ. ಸತ್ಯ, ಶಿವತ್ವ, ಸೌಂದರ್ಯಗಳೇ ಅದರ ಮಾದರಿಯ ಆದರ್ಶಗಳು. ರಾಷ್ಟ್ರಭಾವನೆಯಿಂದ ಭಾರತೀಯರಲ್ಲಿ ಸತ್ಯ, ಪ್ರಾಮಾಣಿಕತನ ಮತ್ತು ಪೌರುಷಗಳು ಬಂದಿವೆ. ಅದರಿಂದಲೇ ತ್ಯಾಗ ಮತ್ತು ಸೇವಾಭಾವನೆಗಳು ನಮ್ಮಲ್ಲಿ ನೆಲೆಗೊಂಡಿವೆ. ಎಲ್ಲಕ್ಕಿಂತಲೂ ಹೆಚ್ಚಿನದೆಂದರೆ ನಮ್ಮ ಜನರಲ್ಲಿ ಎಷ್ಟೋ ಶತಮಾನಗಳವರೆಗೆ ಹುದುಗಿಕೊಂಡಿದ್ದ ಉತ್ಪಾದಕ ಶಕ್ತಿಯನ್ನು ಅದು ಹೊಡೆದೆಬ್ಬಿಸಿ ಎಚ್ಚರಗೊಳಿಸಿದೆ. ಅದರ ಪರಿಣಾಮವಾಗಿ ನಾವು ಭಾರತೀಯ ಕಲೆಗಳ ಹಾಗೂ ಜ್ಞಾನಸಂಪತ್ತಿಯ ಅಭಿವೃದ್ಧಿಯನ್ನನುಭವಿಸುತ್ತಿದ್ದೇವೆ. ಸ್ವಾತಂತ್ರ್ಯಮಂತ್ರದ ಉಸಿರಿನ ಸ್ಪರ್ಶವಾಗದಿದ್ದರೆ ನಮ್ಮ ಸಂಸ್ಕೃತಿಯ ಗತಿಯು ಇಷ್ಟರಲ್ಲಿ ಏನಾಗುತ್ತಿತ್ತೋ ಹೇಳಲಿಕ್ಕಾಗುವದಿಲ್ಲ.

ಮತ್ತೊಂದು ಮಹತ್ವದ ಮಾತೆಂದರೆ, ಎಲ್ಲ ಮಾನವೀಯ ಕಲಾಸಂಸ್ಕೃತಿಗಳ ಮೂಲವೂ ಒಂದೇ ಎಂಬುದು ಆಳವಾಗಿ ವಿಚಾರಿಸದರೆ ಸಿದ್ಧವಾಗುವದು. ಆದಾಗ್ಯೂ ಅವು ಬೇರೆ ಬೇರೆ ತರಗತಿಯವಿರುವವೆಂಬ ಮಾತು ಒಪ್ಪತಕ್ಕದ್ದಾಗಿದೆ. ಈ ಭೇದಗಳನ್ನೆಲ್ಲ ಅಳಿದು ಜಡವಾದ ಐಕ್ಯರೂಪವನ್ನು ಕೊಡುವದರಿಂದ ಅವುಗಳ ನಿಜವಾದ ಏಳ್ಗೆಯು ಆಗಲಾರದೆಂದು ನನ್ನ ಮತವಿದೆ. ಮಾನವೀಸುಧಾರಣೆಯು ಸರ್ವಾಂಗ ಪರಿಪೂರ್ಣತೆಯ ಶಿಖರವನ್ನೇರಬೇಕಾದರೆ ಈ ನಾನಾವಿಧದ ಕಲೆ, ಸಂಸ್ಕೃತಿಗಳನ್ನು ಬೇರೆ ಬೇರೆ ಮಾರ್ಗಗಳಿಂದಲೇ ಏಳ್ಗೆಗೆ ಒಯ್ಯಬೇಕಾದದ್ದು ಅವಶ್ಯವಿದೆ. ಆದರೆ ನಿಜವಾದ ಏಕತ್ವದಗುಟ್ಟು ಈ ಬಗೆಯ ವೈವಿಧ್ಯದಲ್ಲಿಯೇ ಅದೆ. ವೈವಿಧ್ಯದ ಮುಖಾಂತರವೇ ಏಕತ್ವದ ದರ್ಶನವಾಗುವದುಂಟು. ಅಂತೆಯೇ ರಾಷ್ಟ್ರೀ

ಯತ್ವವು ನಿಜವಾಗಿ ಸಂಸ್ಕೃತಿಯ ಉನ್ನತಿಗೆ ಅಡ್ಡಬರುವದರ ಬದಲು ಅದು ಅತ್ಯಂತ ಬಲವತ್ತರವಾದ ಪ್ರೇರಣೆಯಂತೆ ಉಪಯೋಗವಾಗುವದು. ಇದಲ್ಲದೆ ಪರನಾಡಿನ ಆದರ್ಶಗಳ ಜುಲುಮೆಯ ಬಲಿಯೊಳಗಿಂದಲೂ ಪದ್ಧತಿಗಳೊಳಗಿಂದಲೂ ಹಿಂದುಸ್ತಾನವು ಬೇಗ ಬಿಡುಗಡೆ ಹೊಂದಲೇ ಬೇಕು. ಅವುಗಳ ಭಾರದಿಂದ ಪಾರಾಗಿ ಭಾರತೀಯ ಸಂಸ್ಕೃತಿಯು ತನ್ನ ವಿಶಿಷ್ಟಮಾರ್ಗದಲ್ಲಿ ಉನ್ನತಿಹೊಂದಿದರೆ ನಮ್ಮ ಪ್ರಾಚೀನ ಆದರ್ಶಗಳು ಹೆಚ್ಚು ಹೆಚ್ಚಾಗಿ ನಮ್ಮ ಕೈಯಳವಿಗೆ ನಿಲುಕುವವು.

ಕಮ್ಯುನಿಸ್ಟರ ( Communists ) ಅಥವಾ ಅಂತರರಾಷ್ಟ್ರೀಯ ಕಾಮಗಾರರ ದೃಷ್ಟಿಯಿಂದ, ರಾಷ್ಟ್ರೀಯತ್ವದ ವ್ಯಾಖ್ಯೆಯನ್ನು ಮಾಡುವದು ಒಂದು ಬಗೆಯ ಅಪರಾಧವೇ! ಆದರೆ ನಾವು ನಮ್ಮ ಭಾರತ ಸಮಾಜದ ಯಾವದೇ ತರದ ಪುನರ್ಘಟನೆಯನ್ನು ಹೊಸ ತಳಹದಿಯ ಮೇಲೆ ಕಟ್ಟಲು ಯತ್ನಿಸುವ ಪೂರ್ವದಲ್ಲಿ ನಮ್ಮ ಭಾವೀಪ್ರಗತಿಯನ್ನು ನಮ್ಮ ಮನಸಿಗೆ ಬಂದ ದಿಕ್ಕಿಗೆ ತಿರುಗಿಸಿಕೊಳ್ಳುವ ಅಧಿಕಾರವು ನಮ್ಮ ಕೈಯಲ್ಲೇ ಇರಬೇಕೆಂಬ ಮಾತು ಸಾಧಾರಣ ಮನುಷ್ಯನಿಗೆ ಕೂಡ ತಿಳಿದಿರಲಿಕ್ಕೆ ಸಾಕು. ಎಲ್ಲಿಯವರೆಗೆ ಹಿಂದುಸ್ತಾನವು ಬ್ರಿಟಿಶರ ಪಾದಧೂಳಿಯನ್ನು ಪವಿತ್ರ ಭಸ್ಮದಂತೆ ಶಿರಸಾವಹಿಸಿ ನಡೆಯುತ್ತಿರುವದೋ, ಅಲ್ಲಿಯವರೆಗೆ ನಮಗೆ ಅಂಥ ಸ್ವತಂತ್ರ ಅಧಿಕಾರವು ದೊರೆಯಲಾರದು. ಆದ್ದರಿಂದ ಪ್ರತಿಯೊಬ್ಬನ ಅತ್ಯುತ್ಕೃಷ್ಟ ಕರ್ತವ್ಯವೆಂದರೆ ಶಕ್ಯವಿದ್ದಷ್ಟು ಬೇಗನೆ ರಾಜಕೀಯ ಸ್ವಾತಂತ್ರ್ಯವನ್ನು ಹಿಂದುಸ್ತಾನಕ್ಕೆ ತಂದುಕೊಡುವದಾಗಿದೆ. ಇದನ್ನು ರಾಷ್ಟ್ರೀಯಪಕ್ಷದವರೇ ಮಾಡಬೇಕೆಂತಲ್ಲ. ಇದು ಎಲ್ಲ ಪಕ್ಷದವರಿಗೂ ಅತ್ಯಂತವಾಗಿ ಸಂಬಂಧಿಸಿದ ಕರ್ತವ್ಯವಾಗಿದೆ. ರಾಜಕೀಯ ಸ್ವಾತಂತ್ರ್ಯವು ದೊರೆತನಂತರ ಸಾಮಾಜಿಕ ಆರ್ಥಿಕ ಪ್ರಶ್ನೆಗಳನ್ನು ಹೆಚ್ಚು ನಿಧಾನವಾಗಿ ಬಿಡಿಸುವ ವೇಳೆಯು ಬರಬಹುದು. ಬಹುತರವಾಗಿ ಎಲ್ಲ ದೇಶಗಳಲ್ಲಿಯ ಪ್ರಮುಖ ಕಮ್ಯೂನಿಸ್ಟರ ಅಭಿಪ್ರಾಯವು ಹೀಗೆಯೇ ಇರುವದು. ನಮ್ಮ ನಮ್ಮೊಳಗೆ ಹೊಸ ಒಡಕುಗಳ ತೊಡಕನ್ನುಂಟುಮಾಡುವದೂ ಜಾತಿ ಜಾತಿಗಳ ವಿಷಯಕ್ಕೆ ಬಹಿರಂಗವಾಗಿ ಮಾತನಾಡುವದೂ ಮತ್ತು ಅವುಗಳ ಸಲುವಾಗಿ ಮಡಿಯುವದೂ ಈಗಿನ ಕಾಲದಲ್ಲಿ ರಾಷ್ಟ್ರದ್ರೋಹವೆಂದು ಹೇಳಬಹುದು. ಅಂತರರಾಷ್ಟ್ರೀಯ ಭಾವನೆಯು ನವದಿಂದ ಬ್ರಿಟಿಶರ ಅಥವಾ

ಪರದೇಶೀ ಬಟ್ಟೆಗಳಿಗೆ ಉತ್ತೇಜನ ಕೊಡಬೇಕೆಂದು ಡಂಗುರಸಾರುವ ಭಾರತೀಯ ಕೂಲಿಕಾರ ಪಕ್ಷದವರ ಮಾತನ್ನು ನಮ್ಮ ಈ ಪರಿಸ್ಥಿತಿಯಲ್ಲಿ ಕೇಳುವದೆಂದರೆ ಕಾರ್ಲಮಾರ್ಕ್ಸ ( Karl Marx ) ಮತ್ತು ಬ್ಯಾಕುನಿಸ್ (Bakunin) ರ ವಿಚಾರಗಳನ್ನು ತಪ್ಪು ಅರ್ಥಮಾಡಿಕೊಂಡು ಹಾಳಾಗುವದೇ ಸರಿ.

ಕೂಲಿಕಾರ ಚಳವಳಿಗೆ ಬಾಧೆತರತಕ್ಕ ವಿಚಾರಗಳೇನೂ ನನ್ನಲ್ಲಿಲ್ಲವೆಂದು ನಾನು ತಿಳಿಯುತ್ತೇನೆ. ರಾಷ್ಟ್ರೀಯಭಾವನೆ ಮತ್ತು ಕೂಲಿಕಾರ ಚಳವಳಿಗಳ ನಡುವಿನ ಎಲ್ಲ ತಪ್ಪು ತಿಳಿಸಳಿಕೆಗಳನ್ನು ತೆಗೆಯುವದೇ ನನ್ನ ಉದ್ದೇಶವಾಗಿದೆ. ಹಾಗೆಮಾಡಿ, ಸುವ್ಯವಸ್ಥಿತನಾದ ಸಂಘಟನೆಯುಳ್ಳ ರಾಜಕೀಯ ಮತ್ತು ಕೂಲಿಕಾರರ ಸಂಘಗಳ ಬಲಗಳನ್ನು ಏಕೀಕರಿಸಿ ಅವುಗಳ ಮಾರ್ಗವನ್ನು ಸುಗಮವಾಗಿ ಮಾಡುವದೇ ನನ್ನ ವಿಚಾರವದೆ. ಈ ಸಂದರ್ಭದಲ್ಲಿ ಐರ್ಲಂಡನ ಉದಾಹರಣೆಯನ್ನು ನಮ್ಮ ಕಣ್ಣೆದುರಿಗೆ ಇರಿಸಿಕೊಳ್ಳುವದು ಒಳ್ಳೆಯದಾಗಿದೆ.

ರಾಷ್ಟ್ರೀಯತ್ವವು ಯಾವದೇ ದೃಷ್ಟಿಯಿಂದ ಅಂತರರಾಷ್ಟ್ರೀಯತ್ವಕ್ಕೆ ವಿರೋಧವಾಗಿರುವದಿಲ್ಲ. ನಿಜವಾಗಿ ನೋಡಿದರೆ ಎರಡನೆಯದಕ್ಕೆ ಮೊದಲನೆಯದರ ಅವಶ್ಯಕತೆ ಬಹಳವಿದೆ. ನಾನು ಅಂತರರಾಷ್ಟ್ರೀಯತ್ವದಲ್ಲಿ ಬಲವಾದ ನಂಬುಗೆಯುಳ್ಳವನು. ಆದರೆ ಬೇರೆ ಬೇರೆ ಜನಾಂಗಗಳು ತಮ್ಮ ಪ್ರತ್ಯೇಕವಾದ ಅಸ್ತಿತ್ವವನ್ನು ದೊರಕಿಸದೆ ಮತ್ತು ನಾನಾತರದ ಸಂಸ್ಕೃತಿಗಳು ತಮ್ಮ ವಿಶಿಷ್ಟರೂಪಗಳಲ್ಲಿ ಶಾಶ್ವತವಾಗಿ ರೂಪುಗೊಳ್ಳದೆ, ರಾಜಕೀಯ ದೃಷ್ಟಿಯಿಂದಾಗಲಿ ಸಾಂಸ್ಕೃತಿಕ ದೃಷ್ಟಿಯಿಂದಾಗಲಿ ಅಂತರರಾಷ್ಟ್ರೀಯತ್ವವನ್ನು ಕಂಡುಕೊಳ್ಳುವದು ಅಸಾಧ್ಯವೆಂದು ನಾನು ಸಾಧಿಸುತ್ತೇನೆ. **ಅಂತರರಾಷ್ಟ್ರೀಯತ್ವದ ಕಟ್ಟಡವನ್ನು ಸಮಾನಾಧಿಕಾರವುಳ್ಳ ಸ್ವತಂತ್ರ ಸಂಘಟಿತ ರಾಷ್ಟ್ರೀಯ ಸಂಸ್ಥೆಗಳ ತಳಹದಿಯ ಮೇಲೆಯೇ ಮಾತ್ರ ಕಟ್ಟಲು ಸಾಧ್ಯವು. ಇದೇ ವೈವಿಧ್ಯದಲ್ಲಿ ತೋರುವ ಏಕತ್ವವು** ( Unity in diversity ). ಒಂದೆಡೆಗೆ ಎಲ್ಲ ಸಂಸ್ಕೃತಿಗಳ ಸ್ವಸಂಘಟಿತಸಂಸ್ಥೆಗಳೂ ಮತ್ತೊಂದೆಡೆಗೆ ಎಲ್ಲ ರಾಷ್ಟ್ರಗಳ ಸ್ವಸಂಘಟಿತ ಸಂಸ್ಥೆಗಳೂ ಸರ್ವಸಾಮಾನ್ಯವಾಗಿ ಒಂದು ಸಂಘವಾಗಿ, ಸಮಾನಾಧಿಕಾರ ಹೊಂದಿ ಅಳಿಯದೆಯೂ ಉಳಿಯದೆಯೂ, ಕೂಡುವದೇ ನನ್ನ ಅಂತರರಾಷ್ಟ್ರೀಯ

ತ್ವದ ಕಲ್ಪನೆಯು. ನಮ್ಮ ರಾಷ್ಟ್ರೀಯ ಸಂಸ್ಕೃತಿಯನ್ನು ಬೆಳೆಸುವದರಿಂದಲೂ ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ದುಡಿಯುವದರಿಂದಲೂ ಹಿಂದುಸ್ತಾನವು ಅಂತರರಾಷ್ಟ್ರೀಯತ್ವವನ್ನನುಸರಿಸುವ ಯೋಗ್ಯತೆಗೆ ಬರುವಂತೆ ನಾವು ಮಾಡುತ್ತಲಿದ್ದೇವೆ. ಈ ಪ್ರಸಂಗದಲ್ಲಿ ಇನ್ನೊಂದು ಮಾತನ್ನು ಇಲ್ಲಿ ಹೇಳದಿರಲಾರೆನು. ಹಿಂದುಸ್ತಾನವು ಜಗತ್ತಿನ ಶಿಖರದಂತೆ ತೋರುತ್ತದೆ. ಅದರ ಮುಖಾಂತರವಾಗಿಯೇ ಇಂದಿನ ಪ್ರಪಂಚದ ಕಾಲ್ತೊಡಕನ್ನು ಕಡಿಯ ಬೇಕಾಗಿದೆ. ಅದಕ್ಕಾಗಿಯೇ ಈಗ ಇಷ್ಟೆಲ್ಲ ತಿಕ್ಕಾಟ ಮುಕ್ಕಾಟಗಳು. ಎಲ್ಲ ಸಂಸ್ಕೃತಿಗಳಲ್ಲಿಯೂ ಸಾಮರಸ್ಯವುಂಟಾಗಿ, ಸ್ವತಂತ್ರ ರಾಷ್ಟ್ರಘಟನಾ ಸಂಸ್ಥೆಗಳು ಸಾಮಾನ್ಯವಾಗಿ ಹಿಂದುಸ್ತಾನದಲ್ಲಿ ನೆಲೆಗೊಂಡಾಗ ಭರತ ಖಂಡವು ಎಲ್ಲ ದೇಶಗಳಿಗೂ ಆದರ್ಶವಾಗುವದು.

## ಕೂಲಿಕಾರ ಪಕ್ಷವೂ ಮತ್ತು ರಾಷ್ಟ್ರೀಯತ್ವವೂ

ಕೂಲಿಕಾರರ ಪಕ್ಷವೂ ರಾಷ್ಟ್ರೀಯ ಪಕ್ಷವೂ ಒಂದೆಯಾಗಬೇಕೆಂಬುದೇ ನನ್ನ ಇಚ್ಛೆ. 'ಕೂಲಿಕಾರ' ಶಬ್ದದ ಅರ್ಥವು ಇಲ್ಲಿ ವಿಶಾಲ ದೃಷ್ಟಿಯಿಂದ ಉಪಯೋಗಿಸಲ್ಪಟ್ಟಿರುವದರಿಂದ ಅದರಲ್ಲಿ ರೈತರೂ ಅಡಕವಾಗಿದ್ದಾರೆ. ಕೂಲಿಕಾರರ ಸಾಮಾಜಿಕ ಏಳ್ಗೆಯ ಬಗ್ಗೆ ಕಾಂಗ್ರೆಸದಲ್ಲಿ ಕಾಲಕಾಲಕ್ಕೆ ಗೊತ್ತುವಳಿಗಳಾಗುತ್ತಬಂದಿದ್ದರೂ ನಿಜವಾದ ಕಾರ್ಯವೇನೂ ಆಗಿಲ್ಲವೆಂಬ ಮಾತು ಒಪ್ಪತಕ್ಕದ್ದಾಗಿದೆ. ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ: (೧) ನಮ್ಮ ಕೂಲಿಕಾರರ ಸಂಘದಲ್ಲಿ ಶಾರೀರಕ ಸಂಪತ್ತು, ಬುದ್ಧಿವಂತಿಕೆ ಮತ್ತು ನೈತಿಕಭಾವನಾಪ್ರಧಾನರಾದ ಸಾಕಷ್ಟು ಕೆಲಸಗಾರರು ಸಿಗದಿರುವದು. ಮತ್ತು (೨) ಕಾಂಗ್ರೆಸ ತನ್ನ ಕಾರ್ಯಕ್ರಮದಲ್ಲಿ ಆ ವಿಷಯಗಳನ್ನು ಹಾಕಿಕೊಂಡಿದ್ದರೂ ಅವುಗಳಿಗೆ ಸಾಕಷ್ಟು ಲಕ್ಷ್ಯವನ್ನು ಕೊಟ್ಟಿಲ್ಲವೆಂಬದು. ವಿಶ್ವದೊಳಗಿನ ಎಲ್ಲ ರಾಷ್ಟ್ರಗಳಲ್ಲಿ "**ಸ್ವಾತಂತ್ರ್ಯವನ್ನು ಸ್ವಾತಂತ್ರ್ಯಕ್ಕೋಸುಗವೇ ಪ್ರೀತಿಸು**"ವ ಜನರು ಬಹಳ ಕಡಿಮೆ. ಆದರೆ ಸ್ವಾತಂತ್ರ್ಯದಿಂದ ಭೂಮಿಯ ಮೇಲಿನ ತಮ್ಮ ಜೀವನದ ಅನೇಕ ಕಷ್ಟಗಳು ನೀಗುವವೆಂಬುದನ್ನರಿತು ಬಹುಸಂಖ್ಯಾಕರು ಸ್ವಾತಂತ್ರ್ಯ ಸಂಗ್ರಾಮವನ್ನು ಸೇರುತ್ತಾರೆ. ನನ್ನ ಸ್ವಂತದ ವಿಷಯಕ್ಕೆ ಹೇಳಬೇಕೆಂದರೆ: ರಾಜಕೀಯ ಸ್ವಾತಂತ್ರ್ಯವನ್ನು ನಾವು ದೊರಕಿಸದಿದ್ದರೆ ಹಿಂದುಸ್ತಾನದ ಮೇಲೆ ನಡೆದಿರುವ ಜುಲುಮೆಯ ಆರ್ಥಿಕ ಗುಲಾಮಗಿರಿಯೊಳಗಿಂದ ನಾವು

ಪಾರಾಗಲಾರೆವೆಂಬುದು ನನ್ನ ಬಲವಾದ ನಂಬುಗೆ. ಆದ್ದರಿಂದಲೇ ಹಿಂದುಸ್ಥಾನದ ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಹೆಣಗಾಡುವ ಎಲ್ಲ ಜನರು ಅರ್ಥಾತ್ ಕೂಲಿಕಾರ ಪಕ್ಷದವರು ರಾಷ್ಟ್ರೀಯ ಮಹಾಸಭೆಯನ್ನು ಸೇರಿ, ಅದನ್ನು ಬಲಪಡಿಸಿ ಸರ್ವದಾಸ್ಯಶೃಂಖಲೆಗಳನ್ನು ಕಡಿದುಹಾಕಬೇಕೆಂಬುದು ನನ್ನ ಬಲವಾದ ಬಯಕೆ.

## ಖಾದಿ

ಖಾದಿಯ ಉದ್ಯೋಗದಿಂದಲೇ ಲಕ್ಷಗಟ್ಟಲೆ ಜನರು ಜೀವಿಸುತ್ತಾರೆ. '**ಎಲ್ಲರೂ ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ**' ಎಂಬಂತೆ ಹೊಟ್ಟೆ ಬಟ್ಟೆಗಳೆರಡೂ ಮಾನವ ಪ್ರಾಣಿಯ ಮೂಲಪ್ರಶ್ನೆಗಳು. ಇವೆರಡನ್ನೂ ಖಾದಿಯು ಸುಲಭವಾಗಿ ಬಿಡಿಸುತ್ತದೆ. ಇದು ಜನಸಾಮಾನ್ಯರಿಗೆಲ್ಲ ಯೋಗ್ಯವಾಗಿದ್ದರೂ ಹೊಟ್ಟೆತುಂಬಿದ ಧನಿಕರು ಇದರಲ್ಲಿ ಭಾಗವಹಿಸಲು ಹಿಂಜರಿಯದಿರಲಾರರೆಂಬ ಬಗ್ಗೆ ಸಂಶಯ ಬರುತ್ತದೆ. ಆದ್ದರಿಂದ ಇದು ಎಷ್ಟರಮಟ್ಟಿಗೆ ವಿಶ್ವವ್ಯಾಪಕವಾದೀತೆಂಬುದರಲ್ಲಿ ನನಗೆ ಸಂಶಯವಿದೆ.

ಈ ಖಾದಿಚಳವಳಿಯ ರಹಸ್ಯವು ಜನಜಂಗುಳಿಯ ಹೃದಯವನ್ನು ಸೇರುವಂತೆ ಪ್ರಯತ್ನಿಸುವ ಮಹತ್ಕಾರ್ಯದಲ್ಲಿದೆ. ಅಸಹಕಾರ ಚಳವಳಿಯಿಂದ ಈ ವಿಷಯದಲ್ಲಿ ವಿಶೇಷ ಕೆಲಸವಾಗಿದೆ. ಜನತೆಯ ಆರ್ಥಿಕ ಸ್ಥಿತಿಯು ತೀರಾ ಕೆಳಗಿನ ತರಗತಿಯಲ್ಲಿದ್ದಾಗ ಮಾತ್ರ ಖಾದಿಯ ಉದ್ಯೋಗದಲ್ಲಿ ಕೈಹಾಕಿ, ಪರಿಸ್ಥಿತಿಯು ಸುಧಾರಿಸಿದ ಕೂಡಲೆ ಬೇರೆ ಉದ್ಯೋಗಗಳನ್ನು ಜನತೆಯು ಕೈಕೊಳ್ಳುವದು ಸ್ವಾಭಾವಿಕವಿದೆ. ಆದರೂ ಸಾಕಷ್ಟು ಹಣವೂ ಸವ್ಯವಸ್ಥೆಯೂ ಆದಲ್ಲಿ ಖಾದೀಕೆಲಸವು ಮುಂದುವರಿದು ಜನಹಿತವಾಗಬಹುದೆಂಬ ಆಶೆ ತುಂಬಾ ಇದೆ.

## ಜನಜಂಗುಳಿಯ ಚಳವಳಿ

ಕಾಂಗ್ರೆಸ ಪಕ್ಷದವರು ಸಂಯುಕ್ತಪ್ರಾಂತದ ರೈತರ ಚಳವಳಿಯಲ್ಲಾಗಲಿ, ಇಲ್ಲವೆ ಬಂಗಾಲದ ಸಣಬಿನ ಬೆಳವಣಿಗೆಯ ಪ್ರಶ್ನೆಯಲ್ಲಾಗಲಿ, ಅಥವಾ ಗುಜರಾಥದ 'ಕರ ನಿರಾಕರಣೆ' ಚಳವಳಿಯಲ್ಲಾಗಲಿ ಭಾಗ ತೆಗೆದುಕೊಳ್ಳದಿದ್ದರೆ, ಅವರು ಜನಜಂಗುಳಿ (Masses) ಯ ಹೃದಯದಿಂದ ಬಹುದೂರವಿರುತ್ತಿದ್ದರು. ಜನಸಾಮಾನ್ಯರಾದವರು ಸ್ವಾಭಾವಿಕವಾಗಿ ಕಾಂಗ್ರೆಸಿನಿಂದ ದೂರ ನಿಲ್ಲುತ್ತಿದ್ದರು.

ಜನತೆಯು ಜಾಗ್ರತವಾಗಿ ಕಾಂಗ್ರೆಸ್ಸನ್ನು ಸೇರಬೇಕಾದರೆ ಅದರ ಹಿತದ ಪ್ರಶ್ನೆಗಳನ್ನು ಕಾಂಗ್ರೆಸ್ಸು ಕೈಕೊಳ್ಳಬೇಕು. ಅಸಹಕಾರ ಚಳವಳಿಯಲ್ಲಿ ಈ ದೃಷ್ಟಿಯಿಂದ ಕೆಲಮಟ್ಟಿಗೆ ಕೆಲಸವಾಗಿದೆ. ಒಮ್ಮೆ ಎಚ್ಚೆತ್ತ ಜನತೆಯನ್ನು ತಡೆಯುವದು ಯಾರಿಂದಲೂ ಸಾಧ್ಯವಿಲ್ಲ. ಅಸಹಕಾರದ ದಿನಗಳಿಂದ ಇಲ್ಲಿಯವರೆಗೆ ಅದು ಬೆಳೆದು ಪುಷ್ಟವಾಗಿದೆ. ಯಾವ ಮುಖದಿಂದ ತನ್ನ ಜಾಗೃತಸ್ಥಿತಿಯನ್ನು ಜಗತ್ತಿಗೆ ತೋರ್ಪಡಿಸಬೇಕೆಂಬ ಪ್ರಶ್ನೆಯು ಈಗ ಉಳಿದಿದೆ. ಕಾಂಗ್ರೆಸ್ಸೇ ಅದರ ಮುಖವಾಗಿ ಅದರ ಹಿತ ಸಾಧಿಸದಿದ್ದರೆ ಜನಸಾಮಾನ್ಯರಲ್ಲಿಕೂಡ ಪಂಗಡಗಳಾಗಿ ಅವು ಕಾಂಗ್ರೆಸ ಬೆಳವಣಿಗೆಗೆ ಅಡ್ಡಬರಬಹುದು. ಒಳಪಂಗಡಗಳ ಜಗಳದಲ್ಲಿ ರಾಷ್ಟ್ರಭಾವನೆಯು ಸಹ ನಾಶ ಹೊಂದಬಹುದು. ಪರತಂತ್ರದ ಪಾದತಲದಲ್ಲಿ ಸಿಕ್ಕು ನರಳುತ್ತಿರುವಾಗ ಕೂಡ ನಾವೆಲ್ಲರು ನಮ್ಮ ನಮ್ಮೊಳಗೆ ಬಡಿದಾಡುವದು ಲಾಂಛನಾಸ್ಪದವೇ ಸರಿ; ನಮ್ಮೆಲ್ಲರ ಸಾಮಾನ್ಯ ವೈರಿಯ ಆನಂದವನ್ನು ಹೆಚ್ಚಿಸಿದಂತೆಯೇ ಸರಿ.

'ಹಿಂದುಸ್ತಾನದ ಜೀವವು ಹಳ್ಳಿಗಳಲ್ಲಿದೆ' ಎಂಬ ಮಾತು ಹೊಸದಲ್ಲ. ಆದರೆ ಹಿಂದುಸ್ತಾನದಂಥ ದೊಡ್ಡ ರಾಷ್ಟ್ರವನ್ನು ಒಂದೇ ಕೂಗಿನಿಂದ ಎಚ್ಚರಿಸುವದು ಸುಲಭಸಾಧ್ಯವಲ್ಲ. ಎಚ್ಚತ್ತಮೇಲೆ ಯೋಗ್ಯ ರೀತಿಯಿಂದ ನಡೆಯಿಸಿಕೊಂಡು ಹೋಗುವದೂ ಅತ್ಯಂತ ಕಠಿಣವೆ. ಬೇರೆ ಬೇರೆ ಪ್ರಾಂತದವರಿಗೆ ಬೇರೆ ಬೇರೆ ತರದ ಕೊರತೆಗಳಿವೆ. ನಾನಾತರದ ವಿಚಾರದವರಿಗೆ ಅವರವರ ಸಂತೃಪ್ತಿಯಾಗಬೇಕು. ಹಳ್ಳಿಗಳಲ್ಲಿ ತುಂಬಿಕೊಂಡಿರುವ ಜನಜಂಗುಳಿಯ ಆರ್ಥಿಕ ಹಿತವನ್ನು ಬಯಸುವ ಒಂದೇ ತರದ ಕಾರ್ಯಕ್ರಮವು ಎಲ್ಲರಿಗೂ ಸರಿ ಬೀಳಲಾರದು. ಹೀಗಾಗಿ ಕಾಂಗ್ರೆಸ ಕೆಲಸವು ಬಹಳ ಬಿಕ್ಕಟ್ಟಿನದಾಗಿದೆ. ಇಂಥ ಪ್ರಸಂಗಗಳಲ್ಲಿ ಕೂಡ ಕಾಂಗ್ರೆಸ ಕಾರ್ಯಕ್ರಮವನ್ನು ಹಳಿಯುತ್ತ ಕೂಡ್ರುವ ದೇಶಬಾಂಧವರೆಷ್ಟೋ ಜನರಿದ್ದಾರೆ. ಅಂಥವರು ವಿಶಾಲ ದೃಷ್ಟಿಯಿಂದ ವಿಚಾರಿಸಿ ಕಾಂಗ್ರೆಸದೊಳಗೆ ಹೊಕ್ಕು ಪರಿಶೋಧಿಸಿ ನೋಡಿ ಕಾಂಗ್ರೆಸ ಮುಖಾಂತರ ಜನಹಿತ ಕಾರ್ಯದಲ್ಲಿ ತೊಡಗುವದು ಒಳ್ಳೇದಲ್ಲವೇ? ಬೇರೆ ಬೇರೆ ಪ್ರಾಂತದವರು ತಮತಮಗೆ ಸರಿಬೀಳುವ ಏರ್ಪಾಡುಗಳನ್ನು ಅವರವರೇ ಮಾಡಿಕೊಂಡರೆ ಹಿತವೂ ಆಗಬಲ್ಲದು. ಪ್ರಾಂತಗಳ ಸ್ಥಿತಿಗತಿಗಳ ಮೇಲೆ ಆ ಪ್ರಾಂತದ ಕಾರ್ಯಕ್ರಮವು ಅವಲಂಬಿಸಿದ್ದರೆ ಹೆಚ್ಚು ಲಾಭದಾಯಕ ಕೆಲಸವಾದೀತು.

## ನಮ್ಮ ಗುರಿ

ವರ್ತಮಾನ ಕಾಲದಲ್ಲಿಯ ಅಸಮಾಧಾನಕರವಾದ ಸಂಗತಿಗಳನ್ನು ಕೆಲ ಹೊತ್ತು ಮರೆತು ನಮ್ಮ ಮುಂದೆ ಇರಿಸಿಕೊಂಡಿರುವ ರಾಷ್ಟ್ರದ ಭಾವೀ ಆದರ್ಶದ ಕಡೆಗೆ ನೋಡೋಣ. ನಾವು ಈಗ ಏನನ್ನು ಬೆನ್ನಟ್ಟಿ ಓಡುತ್ತಿದ್ದೇವೆಂಬುದನ್ನು ಕಂಡು ಕೊಳ್ಳಲು ನಮ್ಮ ಹೃದಯಗಳಲ್ಲಿ ಹುಡುಕಿ ನೋಡುವದು ಒಳ್ಳೇದು. ಯಾಕೆಂದರೆ ಅಲ್ಲಿಯ ಆದರ್ಶ ಬೆಳಕಿನಿಂದಲೇ ಮಾತ್ರ ನಮ್ಮ ಮತ್ತು ಭಾವೀ ಜನಾಂಗದ ಉನ್ನತಿ ಮಾರ್ಗದಲ್ಲಿ ನಡೆಯಲು ಸಾಧ್ಯವು. ಅದನ್ನು ಚನ್ನಾಗಿ ತಿಳಿಯುವದರಿಂದಲೇ ನಮ್ಮ ಕಾರ್ಯಗಳು ವಿಶಿಷ್ಟ ರೂಪವನ್ನು ಧರಿಸಬಲ್ಲವು.

ವಸಾಹತಿ ಸ್ವರಾಜ್ಯ ಇಲ್ಲವೆ ಮತ್ತಾವುದರಿಂದಾಗಲಿ ಭಾರತವು ಸಂತುಷ್ಟವಾಗಲಾರದು. ಹಲವುಬಗೆಯ ಬಾಯಿಗೆ ನೀರು ಬಿಡುವ ಬರೀ ತೋರಿಕೆಯ ಸ್ವಾತಂತ್ರ್ಯದ ಅಧಿಕಾರಗಳನ್ನು ಆಳರಸರು ಜುಲುಮೆಯಿಂದ ನಮ್ಮ ಮೇಲೆ ಹೊದಿಸಿದರೂ ಈಗ ಹಿಂದುಸ್ತಾನವು ಆ ದಾಸ್ಯದ ಹೊದಿಕೆಯನ್ನು ಮೀರಿ ನಿಲ್ಲುವಷ್ಟು ಬಲವಾಗಿ ಬೆಳೆದು ನಿಂತಿದೆ. ತನ್ನ ಹಿತದ ಭಾರವನ್ನು ತಾನು ಹೊರುವಷ್ಟು ಬಲಶಾಲಿಯಾಗಿರುವದಲ್ಲದೆ, ತನಗೆ ಬೇಕಾದ ವಿಧಾಯಕ ಕಾರ್ಯವನ್ನು ಸಾಗಿಸುವ ಶಕ್ತಿಯುಳ್ಳದ್ದೂ ಆಗಿದೆ. ಭಾರತವು ಮೊದಲಿನಿಂದಲೂ ಭಾರತೀಯರ ಸೊತ್ತು. ಕಾನಡಾ, ಆಸ್ಟ್ರೇಲಿಯಾ, ಆಫ್ರಿಕಾಗಳಂತೆ ಬಿಳಿಯರ ವಸಾಹತು ಆಗಿಲ್ಲ. ಭಾರತೀಯರು ಪೌರ್ವಾತ್ಯರು, ಕಪ್ಪು ತೊಗಲಿನವರು; ಬ್ರಿಟನ್ನಕ್ಕೂ ಹಿಂದುಸ್ತಾನಕ್ಕೂ ಯಾವ ತರದ ಹೋಲಿಕೆಯೂ ಸರಿ ಬೀಳದು. ಬ್ರಿಟಿಶ ಸಾಮ್ರಾಜ್ಯದಲ್ಲಿದ್ದುಕೊಂಡು ಅನುಭವಿಸುವ ಸ್ವಾತಂತ್ರ್ಯವು ಹೆಸರಿಗೆ ಮಾತ್ರವಾದದ್ದು. ಅದು ಹಿಂದುಸ್ತಾನಕ್ಕೆ ಎಂದೂ ಸರಿ ಬೀಳಲಾರದು. ಬ್ರಿಟಿಶರ ಆಧೀನಕ್ಕೊಳಪಟ್ಟಲ್ಲಿ ಹಿಂದುಸ್ತಾನದ ನಾಶವು ಕಟ್ಟಿಟ್ಟದ್ದೇ ಎಂಬುವನ್ನು ಮರೆಯಲಾಗದು. ಇಲ್ಲಿಯವರೆಗೆ ಬ್ರಿಟಿಶರ ಆಧೀನತೆಯೊಳಗೆ ಅರೆನಡೆದದ್ದರಿಂದಲೇ ಇಂಗ್ಲೀಷ ಜನರ ವಿಷಯದಲ್ಲಿ ಸ್ವಾಭಾವಿಕವಾಗಿ ಬೆಳೆದ ' ಜೀ ' ಭಾವನೆಯನ್ನು ಕಿತ್ತೊಗೆಯುವದು ಅನೇಕರಿಗೆ ಇನ್ನೂ ಆಗಲಾರದಾಗಿದೆ. ಅವರ ಆಧೀನತೆಯಲ್ಲಿದ್ದುಕೊಂಡು, ಅವರು ಮಾಡುತ್ತಿರುವ 'ಗುಪ್ತದರೋಡೆ' ಯನ್ನು ನಿಲ್ಲಿಸುವದು ನಮಗೆ ಕಷ್ಟವಾಗಿದೆ. ಅಷ್ಟರಿಂದ ಯಾವದೇ ರೀತಿಯ ಬಂಧನವೂ ಇಲ್ಲದ ಸಂಪೂರ್ಣ ಸ್ವತಂತ್ರ ಫೆಡರಲ್

ಪ್ರಜಾ ಪ್ರಭುತ್ವವು ( Independent Federal Republic ) ದೊರೆಯದೆ ನಮ್ಮ ಹಸಿವು ಹಿಂಗಲಾರದು. ಅಂಥ ಸ್ವಾತಂತ್ರ್ಯವುಮಾತ್ರ ನಿಜವಾದ ಅಮೃತವು. ಸಾವಿನೆದುರಿನಲ್ಲಿ ಜೀವದಾನ ಮಾಡಬಲ್ಲ ಸಂಜೀವಿನಿಯು.

### ಭಾರತದ ಸಂರಕ್ಷಣೆ

ಬ್ರಿಟನ್ನದ ಸಹಾಯವಿಲ್ಲದೆ ಹಿಂದುಸ್ಥಾನವು ಆತ್ಮರಕ್ಷಣೆ ಮಾಡಿಕೊಳ್ಳಲಾರದೆಂಬುದು ಹುಡುಗಾಟಿಕೆಯಮಾತೇ ಸರಿ. ಭಾರತದ ಸೈನ್ಯವೇ ಈಗಲೂ ಅದನ್ನು ರಕ್ಷಿಸುತ್ತಿದೆ. ಬ್ರಿಟಿಶ ಸೈನ್ಯದಿಂದ ಮಾತ್ರ ಈಗ ಅದರ ರಕ್ಷಣೆಯಾಗುತ್ತಿರುವದಿಲ್ಲ. ಆಂಗ್ಲರ ಬೆನ್ನುಕಟ್ಟಿಹೋಗಿ ಪರನಾಡಿನಲ್ಲಿ ಕೂಡ ಯುದ್ಧಮಾಡಿ ಜಯಿಸಿಬರುವಷ್ಟು ಬಲವಾದದ್ದು ಹಿಂದುಸ್ಥಾನವಿದೆ ಎಂಬುದು ಕಳೆದ ಮಹಾಯುದ್ಧದಲ್ಲಿ ನಿದರ್ಶನಕ್ಕೆ ಬಂದ ಮಾತಾಗಿದೆ. ಹೀಗಿದ್ದು ಪರದಾಳಿಗಳಿಂದ ಆತ್ಮರಕ್ಷಣೆ ಮಾಡಿಕೊಳ್ಳಲಾರದೆಂಬ ಮಾತಿನ ಅರ್ಥವೇನು? ಭಾರತದ ಸೈನ್ಯವು ತಿಬೇಟ, ಚೀನ, ಮೆಸೊಪೊಟಾಮಿಯಾ, ಪರ್ಶಿಯಾ, ಇಜಿಪ್ತ ಮತ್ತು ಫ್ಲಾಂಡರ್ಸಗಳಲ್ಲೆಲ್ಲ ಯುದ್ಧ ಮಾಡಿದ್ದು ಗೊತ್ತಿದ್ದು ಆತ್ಮರಕ್ಷಣೆಯ ಅಶಕ್ತತೆಯ ಆರೋಪ ಹೊರಿಸುವದೆಂದರೇನು? ಒಮ್ಮೆ ಹಿಂದುಸ್ಥಾನವು ಸ್ವತಂತ್ರವಾಯಿತೆಂದರೆ ಜಗತ್ತಿನೊಳಗಿನ “ **ಶಕ್ತಿಸಮತೋಲನೆ** ” ( Balance of power ) ಯ ವಿಚಾರದಿಂದ ಹಿಂದುಸ್ಥಾನದ ರಕ್ಷಣೆಯಾಗುವದರಲ್ಲಿ ಸಂದೇಹವಿಲ್ಲ. ಅಂತರರಾಷ್ಟ್ರೀಯ ಸಂಘವು ಸಜೀವ ಸಂಸ್ಥೆಯಾದರೆ ದಾಳಿದೌಡುಗಳ ದಿವಸಗಳು ಹಿಂದೆಯಾದವೆಂದು ತಿಳಿಯಬೇಕು.

### ಸಾಮಾಜಿಕ ಪ್ರಜಾಧಿಪತ್ಯ

ಸ್ವಾತಂತ್ರ್ಯಕ್ಕಾಗಿ ಹೆಣಗಾಡುವ ನಾವು ಎಲ್ಲ ದೃಷ್ಟಿಯಿಂದಲೂ ವಿಚಾರಿಸಬೇಕಾಗಿದೆ. ಒಂದು ಭಾಗವನ್ನು ಸ್ವತಂತ್ರಮಾಡಿ ಉಳಿದದ್ದನ್ನು ದಾಸ್ಯದಲ್ಲಿಯೇ ಬಿಡಲಿಕ್ಕಾಗುವದಿಲ್ಲ. ಒಂದು ಕೋಣೆಯಲ್ಲಿ ಬೆಳಕಿನ ಪ್ರವೇಶವಾದಮೇಲೆ ಅದರ ಯಾವ ಮೂಲೆಯಲ್ಲಿಯೂ ಕತ್ತಲೆಯು ಉಳಿಯಲಾರದು. ರಾಜಕೀಯ ಬಾಬಿನಲ್ಲಿ ಪ್ರಜಾಧಿಪತ್ಯವನ್ನು ಸ್ಥಾಪಿಸಿ, ಸಾಮಾಜಿಕ ವ್ಯವಸ್ಥೆಯಲ್ಲಿ ಅದನ್ನು ತಡೆಯಲಿಕ್ಕಾಗುವದಿಲ್ಲ. ಹಾಗಾಗುವದರಿಂದ ನಮ್ಮ ಬಾಳು ಒಂದು ವಿಚಿತ್ರವಾದ ಮಿಶ್ರಣವಾಗುವದು. ರಾಜಕೀಯ ಸಂಸ್ಥೆಗಳು ಜನತೆಯ ಸಾಮಾಜಿಕ ಜೀವನಕ್ಕೆ ಪ್ರಚೋದಕಗಳಾಗಿರುವವು.

ರಾಷ್ಟ್ರೀಯ ವಿಚಾರಗಳ ಮತ್ತು ಆದರ್ಶಗಳಮೇಲಿಂದ ಸಮಾಜಗಳ ಸ್ವರೂಪಗಳು ನಿರ್ಮಾಣವಾಗುತ್ತವೆ. ನಿಜವಾಗಿಯೂ ಹಿಂದುಸ್ತಾನವು ಹೆಗ್ಗಳಿಕೆ ಅಥವಾ ವೈಭವಕ್ಕೆ ಏರಬೇಕಾದರೆ ನಾವು ಸಾಮಾಜಿಕ ಪ್ರಜಾಧಿಪತ್ಯದ ಸಿಂಹಾಸನದ ಮೇಲೆ ರಾಜಕೀಯ ಪ್ರಜಾಪ್ರಭುತ್ವವನ್ನು ಸ್ಥಾಪಿಸಬೇಕು. ಜನ್ಮತಃ ಉಂಟಾಗುವ ಜಾತಿವಾರಹಕ್ಕಿನ ಸವಲತ್ತುಗಳು ದೂರಾಗಲಿಕ್ಕೆ ಬೇಕು. ಜಾತಿ-ಧರ್ಮ-ಪಂಥಗಳ ಭೇದಭಾವನೆಗಳಿಲ್ಲದೆ ಎಲ್ಲರಿಗೂ ಸರಿಯಾಗಿ ಅನುಕೂಲ ಪ್ರಸಂಗಗಳನ್ನು ಕಲ್ಪಿಸಿಕೊಡಬೇಕು. ಸ್ತ್ರೀಯರ ಜೀವನದ ಉನ್ನತಿಯಂತೂ ಅತ್ಯವಶ್ಯವಿದೆ. ಜನಹಿತದ ಕಾರ್ಯಗಳಲ್ಲಿ ಹೆಚ್ಚಿನ ಬುದ್ಧಿವಂತಿಕೆಯ ಉಪಯೋಗವನ್ನೂ ಮತ್ತು ವಿಶಾಲದೃಷ್ಟಿಯಿಂದ ತಮ್ಮ ವಿಚಾರಗಳನ್ನು ಮಾರ್ಪಡಿಸುವದನ್ನೂ ನಮ್ಮ ಮಹಿಳಾವರ್ಗಕ್ಕೆ ಕಲಿಸಲಿಕ್ಕೆಬೇಕು. ಯುರೋಪ, ಅಮೇರಿಕಾಗಳ ಹೆಂಗಳೆಯರ ಚಳವಳಿಗಳು ನಮ್ಮ ಭಾರತದ ಪುತ್ರಿಯರಿಗೆ ಬೇಕಾಗಿಲ್ಲ. ಅಲ್ಲಿಯ ಸ್ತ್ರೀಯರ ಕ್ರಾಪು, ಗಿಡ್ಡಂಗಿಗಳು ಭಾರತ ಮಹಿಳೆಯರಿಗೆ ಬೇಕಾಗಿಲ್ಲ. ತದ್ವಿರುದ್ಧವಾಗಿ ನಮ್ಮಲ್ಲಿ ಸ್ತ್ರೀಯರ ಆಂದೋಲನವು ನಮ್ಮ ರಾಷ್ಟ್ರೀಯ ಆದರ್ಶಗಳ ಪ್ರೇರಣೆಯಿಂದಲೇ ಜನ್ಮತಾಳಬೇಕು. ನಮ್ಮ ಪೂರ್ವಪದ್ಧತಿಗಳನ್ನನುಸರಿಸಿ ನಮ್ಮ ವೈಶಿಷ್ಟ್ಯವನ್ನು ಜಗತ್ತಿಗೆ ತೋರಿಸಬೇಕು. ಆದರೆ ನಮ್ಮಲ್ಲಿ ಹಲಕೆಲವರು ಹೆಣ್ಣುಮಕ್ಕಳಿಗೆ ಸ್ವತಂತ್ರ ಅಸ್ತಿತ್ವದ ಅಧಿಕಾರವನ್ನು ಒಪ್ಪುವದಿಲ್ಲ. ಕೆಲವು ಇತಿಹಾಸಗಳೂ ಶಾಸ್ತ್ರಗಳೂ ಅವರ ಅನಧಿಕಾರವನ್ನು ಪ್ರಸ್ತಾಪಿಸುತ್ತವೆ. ಈ ಗೊಡ್ಡು ವಿಚಾರಗಳಲ್ಲಿ ಬೇಗನೆ ವಿಶೇಷ ಬದಲಾವಣೆಯಾಗಲಿಕ್ಕೆ ಬೇಕು. ಹೆಚ್ಚಿನ ಸುಧಾರಣೆಯ ಬೆಳಕು ನಮ್ಮ ಸ್ತ್ರೀ ಸಮಾಜಕ್ಕೂ ಮುಟ್ಟುವದು ಅತ್ಯವಶ್ಯವು.

## ಆರ್ಥಿಕ ಪುನರ್ಘಟನೆ

ನವಭಾರತದ ಆರ್ಥಿಕ ಪುನರ್ಘಟನೆಯ ವಿಷಯಕ್ಕೆ ಯಾವ ಎಣಿಕೆಯನ್ನೂ ನಾನು ಈಗ ಹಾಕಲಾರೆ. ಪ್ರಜಾಪ್ರಭುತ್ವ, ಸಮಾಜ ಸಮತಾವಾದ ಮೊದಲಾದ ಯಾವದೊಂದು ಮಾರ್ಗದಲ್ಲಿ ನಾವು ಕಾಲಿಡುವ ಮೊದಲು ನಮ್ಮ ಭೂತಕಾಲದ ಕಡೆಗೆ ನೋಡಿ ಇತಿಹಾಸದ ಬೆಂಬಲದಿಂದ ನಮ್ಮ ತಿಳುವಳಿಕೆಯನ್ನು ಬಲಪಡಿಸಿಕೊಂಡು ಮುಂದುವರಿವರೆ ನಮ್ಮ ಅದೃಷ್ಟವಾದ ಭವಿಷ್ಯದಮೇಲೆ ಸಾಕಷ್ಟು ಬೆಳಕುಬಿದ್ದು ಮಾರ್ಗವು ಸ್ವಚ್ಛ

ವಾಗಿ ಕಾಣುವದು. ಪಾಶ್ಚಾತ್ಯರು ನಡೆಯಿಸಿರುವ ಪ್ರಯೋಗಗಳ ಪರಿಣಾಮವನ್ನು ನಾವು ನೋಡಬೇಕಾಗಿದೆ. ಪರನಾಡಿನ ಯಾವದೇ ಸಮಾಜ ಸಮತಾ ತತ್ವವನ್ನು ನಮ್ಮ ಪ್ರಾಚೀನ ಭಾರತದಲ್ಲಿ ಸ್ವೀಕರಿಸುವ ಮೊದಲು ಇಲ್ಲಿಯ ಹುರುಪಿನ ಕಾರ್ಲಮಾರ್ಕ್ಸನ ಅನುಯಾಯಿಗಳಿಗೆ ಎಚ್ಚರಿಕೆಕೊಡಬೇಕು. ರಶಿಯಾದಲ್ಲಿ ಸ್ಥಾಪಿತವಾಗಿರುವ ಸಮಾನಾಧಿಕಾರದ ಮತವೂ, ಕಾರ್ಲಮಾರ್ಕ್ಸನ ಮತವೂ ಮತ್ತು ಜರ್ಮನಿಯು ಅನುಸರಿಸುತ್ತಿರುವದೆಂದು ಹೇಳುವ ಈ ಮತವೂ ಬೇರೆಬೇರೆಯಾಗಿವೆ. ರಶಿಯಾದೇಶವು ಕಾರ್ಲಮಾರ್ಕ್ಸನನ್ನು ಅನುಸರಿಸಿದ್ದರೆ ಅದು ಈಗಿದ್ದಂತೆ ಉಳಿಯುತ್ತಿದ್ದಿಲ್ಲ. ಯಾಕೆಂದರೆ ಸಮಾಜ ಸಮತಾವಾದವು ಬರುವ ಪೂರ್ವದಲ್ಲಿ, ಬಂಡವಲಗಾರಿಕೆ (Capitalism) ಮತ್ತು ಔದ್ಯೋಗಿಕತೆ (Industrialism) ಗಳ ಸಾರ್ವಭೌಮ ಆಳಿಕೆಗಳು ಮುಗಿದು ಹೋಗಿರಲಿಕ್ಕೆ ಬೇಕಾಗಿತ್ತು. ಆದರೆ ಈಗ ಹಾಗೆ ಆಗಲಿಲ್ಲವೆಂಬುದು ಸ್ಪಷ್ಟವದೆ. ಆದ್ದರಿಂದ ಯಾವದೊಂದು ತತ್ವದ ಅಂಧಾನುಕರಣವು ಉಪಯೋಗವಾಗಲಾರದು. ಇದಲ್ಲದೆ ಹಿಂದುಸ್ತಾನದ ಮೂಲ ಪ್ರಶ್ನೆಯು ಭೂಮಿಯ ವಿಷಯದ್ದಾಗಿರುವದು. ಆದ್ದರಿಂದ ಹಿಂದುಸ್ತಾನಕ್ಕೆ ಸರಿ ಬೀಳುವ ಆರ್ಥಿಕ ಪುನರ್ಘಟನೆಯನ್ನು ಕೈಕೊಳ್ಳುವ ಪೂರ್ವದಲ್ಲಿ ನಮ್ಮ ಆಳವಾದ ಅನುಭವದ ಮೇಲೆ ಕೊನೆಯ ನಿರ್ಣಯವನ್ನು ಸ್ಥಾಪಿಸಬೇಕು.

## ಜಾತಿ ಭೇದಗಳ ಪ್ರಶ್ನೆ

ಗೃಹಕಲಹದ ಬೇಗೆಯು ಅಲ್ಪಸ್ವಲ್ಪ ಸಾಹಸದಿಂದ ನೊಂದತಕ್ಕದ್ದಲ್ಲ. ಆ ಬೇಗೆಗೆ ತಕ್ಕ ಪ್ರತೀಕಾರದ ಉಪಾಯವೊಂದನ್ನು ಮಾಡಬೇಕು. ಭಾರತವು ತುಂಬಿಹರಿಯುವ ಮಹಾನದಿಯಂತಿದೆ. ನಿಯಮಾತೀತವಾದ ಅನಾದ್ಯನಂತಗಳೇ ಅದರ ಎರಡು ದಂಡೆಗಳಾಗಿವೆ. ಅದರ ಜೀವನಕ್ರಮದಲ್ಲಿ ನಾನಾ ದಿಕ್ಕುಗಳಿಂದ ಬೇರೆ ಬೇರೆ ಸ್ಥಳಗಳಲ್ಲಿ ಅದಕ್ಕೆ ಬಂದುಕೂಡುವ ವಿವಿಧವಾದ ಸಂಸ್ಕೃತಿ ಶಾಖೆಗಳು ಅನೇಕ ಉಂಟು. ಭಾರತದ ನಿಜವಾದ ಕಲ್ಪನೆಯು ಬರಬೇಕಾದರೆ ನಮ್ಮ ಬುದ್ಧಿ ಎಂಬ ಕಣ್ಣಿನಿಂದ ನಮ್ಮ ಇತಿಹಾಸವನ್ನು ಚನ್ನಾಗಿ ನಿರೀಕ್ಷಿಸಬೇಕು. ಮತ್ತು ಅನಾದಿಕಾಲದ ನಮ್ಮ ಪೂರ್ವಜರ ಜೀವನಗಳನ್ನು ಜೀವಿಸಬೇಕು. ಆಮೇಲೆ ನಮ್ಮ ಗತವೈಭವದ ನಿಜವಾದ ಜ್ಞಾನವು ಜಾಗ್ರತವಾಗುವದು. **ವಿಶ್ವದ ಪ್ರಶ್ನೆಯನ್ನು ಬಿಡಿಸುವದಕ್ಕಾಗಿಯೇ**

**ಪರಮಾತ್ಮನು ಭಾರತವನ್ನು ಕಲ್ಪಿಸಿರಲಿಕ್ಕೆ ಸಾಕು** ಮಾನವ ಕುಟುಂಬ ವ ಬೇರೆ ಬೇರೆ ಗುಂಪುಗಳನ್ನು ಒಂದುಗೂಡಿಸುವದು, ನಾನಾತರದ ಆಕಾಂಕ್ಷೆಗಳನ್ನೂ ದೃಷ್ಟಿಗಳನ್ನೂ ಸಮರಸವಾಗಿ ಬೆರೆಸುವದು, ವಿಶಿಷ್ಟ ಸಂಸ್ಕೃತಿಗಳನ್ನೆಲ್ಲ ಕೇಂದ್ರೀಕರಿಸುವದು, ಇವೇ ಮೊದಲಾದ ಮಹತ್ಕಾರ್ಯಗಳನ್ನು ಹಿಂದುಸ್ಥಾನವು ಮಾಡಿತೋರಿಸಿದೆ. ಬಾಹ್ಯಜೀವನದಲ್ಲಿ ಹಲವು ಬಗೆಯ ಹೆಣಗಾಟಗಳು ನಡೆದಿರುವಾಗಲೇ ನಾವು ಪ್ರಪಂಚವಲ್ಲೆಲ್ಲ ಏಕರೂಪವಾದ ಶಾಂತಿಯನ್ನು ಕಂಡುಕೊಳ್ಳಬೇಕಾಗಿದೆ. ಪ್ರಪಂಚದ ದಂಗುಬಡಿಸುವಂಥ ಅನೇಕತ್ವದಲ್ಲಿಯೇ ಏಕತ್ವವನ್ನು ಕಾಣುವದು ಮಹತ್ವದ್ದಿದೆ. ಈ ಏಕತ್ವದ ತಳಹದಿಯನ್ನು ಶೋಧಿಸಿ ಅಡಿಗಲ್ಲನ್ನು ನಿಲ್ಲಿಸುವ ಭಾರವು ಭಾರತದಮೇಲೆ ಬಿದ್ದಿದೆ. ಈ ಮಹತ್ಕಾರ್ಯದ ಗಾಂಭೀರ್ಯತೆ ವ್ಯಾಪಕತ್ವಗಳು ಅನ್ಯದೇಶದವರ ಮನವೊಲಿಸಲು ಸಾಕಷ್ಟಿವೆ. ಅನಾದಿಕಾಲದಿಂದ ನಮ್ಮ ಜನಾಂಗವು ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡು ಚಿರಂಜೀವಿಯಾಗಿ ಉಳಿದಿರುವದರಿಂದ ಈ ಕಾರ್ಯವಲ್ಲಿ ನಮಗೆ ಅಂಜಿಕೆ, ನಿರಾಶೆಗಳಿಗೆ ಆಸ್ಪದವಿರಲಾರದು.

ಪ್ರತಿಯೊಂದು ಮತಕ್ಕೆ ಸ್ಥಾನವಿತ್ತಂತೆ ಇಸ್ಲಾಮಕ್ಕೆ ಕೂಡ ಭಾರತವು ಈ ದೃಷ್ಟಿಯಿಂದ ಯೋಗ್ಯಸ್ಥಾನವನ್ನಿತ್ತಿದೆ. ತಮ್ಮ ತಮ್ಮ ಧರ್ಮದ ಇತಿಹಾಸ, ನಡಾವಳಿ ಆದರ್ಶಗಳನ್ನು ಗೊತ್ತುಪಡಿಸಿಕೊಳ್ಳುವದು ಆ ಆ ಮತದವರ ಕರ್ತವ್ಯವಾಗಿದೆ. ಸಂಸ್ಕೃತಿಗಳ ಸಮೀಕರಣವು ಜಾತಿಭೇದವನ್ನಳಿದು ಮತ್ತೈಕ್ಯತೆಯನ್ನೂ ಶಾಂತತೆಯನ್ನೂ ಉಂಟುಮಾಡುತ್ತದೆ. ಬೇರೆ ಬೇರೆ ಮತಗಳ ಏಕತ್ವದ ತಳಗಲ್ಲು ಸಾಂಸ್ಕೃತಿಕ ಪುನರುಜ್ಜೀವನದಿಂದ ಆಗುತ್ತದೆಂದು ನಾನು ತಿಳಿಯುತ್ತೇನೆ. ಆದರೆ ಭಾರತದ ಈಗಿನ ಸ್ಥಿತಿಯನ್ನು ನೋಡಿದರೆ ಎಲ್ಲ ಮತಗಳು ಒಂದನ್ನೊಂದು ಅಲಕ್ಷಿಸುತ್ತಿರುವಂತೆ ತೋರುವದು ನಮ್ಮ ದುರ್ದೈವವು.

ಸಾಂಸ್ಕೃತಿಕ ಪುನರುಜ್ಜೀವನದ ಸಹಾಯಕ್ಕಾಗಿ ಸಶಾಸ್ತ್ರೀಯವೂ ವ್ಯವಹಾರಿಕವೂ ಆದ ಔಷಧವೊಂದು ಬೇಕಾಗಿದೆ. ಸಂಸ್ಕೃತಿಗಳ ಒಡನಾಟದಲ್ಲಿ ಮತಭ್ರಾಂತಿಯು ಒಂದು ದೊಡ್ಡ ಮುಳ್ಳಿನಂತಿದೆ. ಮತಭ್ರಾಂತಿಗೆ ಸಶಾಸ್ತ್ರೀಯವೂ ವ್ಯವಹಾರಿಕವೂ ಆದ ಪ್ರಾಪಂಚಿಕ ಶಿಕ್ಷಣದ ಹೊರತು ಬೇರೆ ಉಪಾಯಗಳಿಲ್ಲ. ಈ ಬಗೆಯ ಶಿಕ್ಷಣವು ಇನ್ನೊಂದು ರೀತಿಯಿಂದ ನಮ್ಮ

ಆರ್ಥಿಕ ದುಸ್ಥಿತಿಯ ಕಲ್ಪನೆಗಳನ್ನು ಎಚ್ಚರಿಸುತ್ತದೆ. ಆರ್ಥಿಕ ವಿಪತ್ತಿನ ತಿಳಿವಳಿಕೆಯು ಮತಭ್ರಾಂತಿಯನ್ನು ನಾಶಮಾಡುತ್ತದೆ. ಮುಸಲ್ಮಾನ ಜಮೀನದಾರನಿಗೂ ಮುಸಲ್ಮಾನ ರೈತನಿಗೂ ಇದ್ದ ಸಂಬಂಧಕ್ಕಿಂತ ಹೆಚ್ಚಿನ ಸಮೀಪ ಸಂಬಂಧವು ಮುಸಲ್ಮಾನರೈತ ಮತ್ತು ಹಿಂದೂರೈತರ ನಡುವೆ ಇದ್ದದ್ದು ಕಂಡುಬರುತ್ತದೆ. ತಮ್ಮ ಆರ್ಥಿಕ ಹಿತವು ಯಾತರಲ್ಲಿದೆ ಎಂಬದನ್ನು ಜನಸಾಮಾನ್ಯಕ್ಕೆ ತಿಳಿಸಿಕೊಡಬೇಕು. ಅದರ ಮರ್ಮವು ನಿಜವಾಗಿ ತಿಳಿದಲ್ಲಿ ಯಾರೂ ಎಂದೂ ಜಾತಿಯ ಒಳಜಗಳದಲ್ಲಿ ಕೈಹಾಕಿ ತಮ್ಮನ್ನು ಅನ್ಯರ ಸ್ವಾಧೀನರನ್ನಾಗಿ ಮಾಡಿಕೊಳ್ಳಲಾರರು. ಸಾಂಸ್ಕೃತಿಕ, ಶೈಕ್ಷಣಿಕ, ಮತ್ತು ಆರ್ಥಿಕ ದೃಷ್ಟಿಗಳಿಂದ ಹೆಣಗಾಡಿ ಸಾವಧಾನವಾಗಿ ಮತಭ್ರಾಂತಿಯನ್ನು ಪೂರ್ಣ ನಾಶಮಾಡಲು ಶಕ್ಯವಿದೆ; ಮತ್ತು ಇದರಿಂದಲೇ ಆರೋಗ್ಯಕರವಾದ ರಾಷ್ಟ್ರೀಯತ್ವದ ಬೆಳವಣಿಗೆಯಾಗುವದು ಸಾಧ್ಯವಿದೆ.

## ಯುವಕ ಚಳವಳಿ

ಅತ್ಯಂತ ಆಶಾಜನಕವಾದ ಈಗಿನ ಒಂದು ಸಂಗತಿಯೆಂದರೆ ಇಂದಿನ ಭಾರತೀಯ ತರುಣರಲ್ಲಿ ಹೊಸ ಹುರುಪು ಮೊಳೆತು ಬಂದುದು. ಯುವಕ ಚಳವಳಿಯು ಇಂದು ನಾಡಿನ ಒಂದು ತುದಿಯಿಂದ ಮತ್ತೊಂದು ತುದಿಯ ವರೆಗೂ ಹಬ್ಬಿಕೊಂಡಿದೆ. ಅದು ಅಖಿಲ ಭಾರತದ ತರುಣರನ್ನಷ್ಟೇ ಅಲ್ಲದೆ ತರುಣಿಯರನ್ನೂ ಸಹ ಆಕರ್ಷಿಸಿದೆ. ಈ ಯುಗದ ತರುಣರು ತಮ್ಮ ಜೀವನದ ನಿಜವಾದ ತಿಳಿವಳಿಕೆಗೆ ಬರತೊಡಗಿದ್ದಾರೆ. ಒಂದಾನೊಂದು ಆದರ್ಶದ ಮಿಂಚಿನಿಂದ ಅವರು ಪೂರ್ಣಎಚ್ಚರಾಗಿದ್ದಾರೆ. ಅಂತರಾತ್ಮನ ಸ್ವಭಾವಕ್ಕನುಗುಣವಾಗಿ ವರ್ತಿಸಿ ತಮ್ಮ ಧ್ಯೇಯವನ್ನು ಕಂಡುಕೊಳ್ಳುವದರಲ್ಲಿ ಅವರು ಆತುರರಾಗಿದ್ದಾರೆ. ಈ ಚಳವಳಿಯು ರಾಷ್ಟ್ರಪುರುಷನ ಸ್ವಾಭಾವಿಕ ಆತ್ಮದೃಶ್ಯವೇ ಆಗಿದೆ. ರಾಷ್ಟ್ರದ ಭಾವೀ ಉನ್ನತಿ-ಅವನತಿಗಳು ಈ ಆಂದೋಲನದ ಅಂತಶ್ಶಕ್ತಿಯನ್ನೇ ಅವಲಂಬಿಸಿವೆ. ಕಾರಣ ಹೊಸದಾಗಿ ಜನ್ಮತಾಳಿದ ಈ ಹುರುಪನ್ನು ಕುಗ್ಗಿಸದೆ ಅದನ್ನು ಹಿಗ್ಗಿಸಿ ಹದಗೊಳಿಸಿ ರೂಪುಗೊಳಿಸುವದು ನಮ್ಮ ಕರ್ತವ್ಯವಾಗಿದೆ. ಮಾನವ ಪ್ರಾಣಿಯಲ್ಲಿಯ ದಿವ್ಯಭಾವನೆಯನ್ನು ಎಚ್ಚರಿಸಬೇಕಾದರೆ ಅವನಲ್ಲಿ ಹುದುಗಿಕೊಂಡಿರುವ ಅಪಾರವಾದ ಬಲವನ್ನೂ ಕಾರ್ಯಕರ್ತೃತ್ವ ಶಕ್ತಿಯನ್ನೂ ಎಚ್ಚರಗೊಳಿಸಬೇಕು. ಸ್ವಾತಂತ್ರ್ಯ ಮಂತ್ರವನ್ನು ಅವನೆದೆಯಲ್ಲಿ ಸ್ಥಿರವಾಗಿ ನೆಲೆಗೊ

ಳಿಸಬೇಕು. ಈ ಸ್ವಾತಂತ್ರ್ಯ ಮಂತ್ರವೇ ಯುವಕರ ಹುರುಪು ಹಂಬಲಗಳ ತಾಯಿ; ಅದು ಸರ್ವಶಕ್ತಿಗಳ ಉಗಮಸ್ಥಾನವು. ಅದು ವ್ಯಕ್ತಿಶಕ್ತಿಯೊಳಗಿರುವ ಗುಪ್ತಗಾಮಿನಿ ಝರಿಯು. ವಸಂತಮಾಸದ ಪ್ರಭಾವದಿಂದ ನಿಸರ್ಗವೇ ಬದಲಾಗುವಂತೆ ಸ್ವಾತಂತ್ರ್ಯ ಸುಧೆಯನ್ನು ಕುಡಿದು ಮನುಷ್ಯನು ಮೈಮರೆತಾಗ ಅವನ ಜೀವನವೇ ಹೊಸದಾಗಿ ಮಾರ್ಪಡುತ್ತದೆ. ಆತನು ಪರಿವರ್ತನೆ ಪ್ರಯೋಗಶಾಲೆಯೊಳಗಿಂದ ಹೊಸ ಜೀವಿಯಾಗಿ ಹೊರಗೆ ಬರುತ್ತಾನೆ. ಆಗ ಮಾತ್ರ ನಾವು ಆತನ ವೈಯಕ್ತಿಕ ಪ್ರಭಾವವನ್ನೂ ಅಸದೃಶಕರ್ತೃತ್ವಶಕ್ತಿಯನ್ನೂ ನೋಡಿ ಆಶ್ಚರ್ಯಪಡದಿರಲಾರೆವು.

ತರುಣರ ಚಳವಳಿಗಳನ್ನು ಬೆಳೆಯಿಸುವದರಲ್ಲಿ ಮತ್ತು ಅವುಗಳನ್ನು ಸುವ್ಯವಸ್ಥೆಗೊಳಿಸುವದರಲ್ಲಿ ಪ್ರತಿಯೊಬ್ಬರು ಹೆಚ್ಚಿನ ಶ್ರಮವಹಿಸಿ ಕೆಲಸ ಮಾಡಬೇಕಾಗಿದೆ. ತರುಣರ ಚಳವಳಿಯು ತನ್ನ ನಿಜಸ್ವರೂಪವನ್ನು ಕಂಡುಕೊಂಡು ಅದಕ್ಕೊಪ್ಪುವಂಥ ಕಾರ್ಯಗಳನ್ನು ಕೈಕೊಳ್ಳುವದಲ್ಲದೆ ಮುಂದಿನ ಕನಸುಗಳನ್ನೂ ಕಲ್ಪನೆಗಳನ್ನೂ ಕಟ್ಟಬಲ್ಲದು. ತಾರುಣ್ಯ ಶಕ್ತಿಯು ತನಗೆ ವಿರೋಧವಾದ ಶಕ್ತಿಗಳನ್ನೆಲ್ಲ ಕೊಂದುಬಿಡುವದಲ್ಲದೆ ತನಗೆ ಸಹಾಯಕವಾದ ನವಶಕ್ತಿಗಳನ್ನು ಹುಟ್ಟಿಸಿಕೊಳ್ಳಬಹುದು. ಲಯೋತ್ಪಾದನೆಗಳ ತೌರುಮನೆಯು ತಾರುಣ್ಯವೇ ಎಂದು ಹೇಳಬಹುದು.

ಜನಸಾಮಾನ್ಯರು ಅಪಜಯಹೊಂದಿದರೂ ತಾರುಣ್ಯಶಕ್ತಿಗೆ ಯಶವು ಬರದಿರಲಾರದು. ಅದು ಸ್ವತಂತ್ರ ಭಾರತಕ್ಕೆ ನವಜನ್ಮ ಕೊಡುವದು. ತನ್ನ ಅಪಯಶಸ್ಸುಗಳಿಂದಲೇ ಬುದ್ಧಿಗಲಿತು, ಸ್ವಪ್ರಯತ್ನದಿಂದಲೂ ಅನುಭವಜನ್ಯ ಜಾಣತನದಿಂದಲೂ ಸ್ವತಂತ್ರವಾದ ನವಭಾರತವನ್ನು ಸಜ್ಜುಗೊಳಿಸುವದು ಅದಕ್ಕೆ ಸಾಧ್ಯವಿದೆ. ಜಾತಿ ಪಂಗಡವನ್ನೂ ಮತ್ತು ಮತಭ್ರಾಂತಿಯನ್ನೂ ಬೇರೊರಿಸಿ ಕಿತ್ತೊಗೆಯಬೇಕಾದರೆ ನಾವು ತರುಣರ ಕಾರ್ಯಗಳ ಕಡೆಗೆ ಪೂರ್ಣ ಲಕ್ಷ್ಯಪೂರೈಸಬೇಕು.

## ಸ್ತ್ರೀಯರ ಆಂದೋಲನ

ಸ್ತ್ರೀಯರ ಚಳವಳಿಯು ನಮ್ಮ ನಾಡಿನಲ್ಲಿ ಬಹಳವಾಗಿ ಅಲಕ್ಷಿಸಲ್ಪಟ್ಟಿದೆ. ಜನಾಂಗದ ಅರ್ಧಾಂಗವಾದ ಸ್ತ್ರೀಸಮಾಜದ ಸಹಾನುಭೂತಿ ಇಲ್ಲದೆ ಉಳಿದ ಅರ್ಧಾಂಗದಿಂದಲೇ ಸ್ವಾತಂತ್ರ್ಯವನ್ನು ಗಳಿಸುವದು ಅಶಕ್ಯವು. ಎಲ್ಲ ದೇಶಗಳಲ್ಲಿ, ಇಂಗ್ಲಂಡಿನ ಕೂಲಿಕಾರಪಕ್ಷದಲ್ಲಿ ಕೂಡ

ಸ್ತ್ರೀಯುಗಸಂಘಟನೆಯಿಂದ ಮಹತ್ವದ ಕಾರ್ಯಗಳಾಗಿವೆ. ರಾಜಕೀಯವಲ್ಲದ ಎಷ್ಟೋ ಸಂಸ್ಥೆಗಳು ಹೆಮ್ಮಕ್ಕಳಿಂದಲೇ ನಡಿಸಲ್ಪಟ್ಟಿದ್ದನ್ನು ನಾವು ಅಲ್ಲಿ ನೋಡುತ್ತೇವೆ. ಆದರೆ ನಮ್ಮ ದೇಶದತುಂಬೆಲ್ಲ ಮೊದಲು ರಾಷ್ಟ್ರೀಯ ಸಂಸ್ಥೆಗಳಾಗುವದು ಅತ್ಯವಶ್ಯವದೆ. ಇಂಥ ಸಂಸ್ಥೆಗಳು ನಮ್ಮ ಹೆಣ್ಣುಮಕ್ಕಳಲ್ಲ ರಾಷ್ಟ್ರೀಯಭಾವನೆಯನ್ನು ತುಂಬುವದಲ್ಲದೆ ಅವರ ನೈತಿಕ ಮತ್ತು ಮಾನಸಿಕ ಬೆಳವಣಿಗೆಯನ್ನು ಸ್ವಾಭಾವಿಕವಾಗಿಯೇ ಮಾಡಿಬಿಡುತ್ತವೆ. ಬಹಿಷ್ಕಾರ ಮತ್ತು ಸ್ವದೇಶಿ ಕಾರ್ಯಗಳನ್ನು ಪೂರ್ತಿಗೊಳಿಸಬೇಕಾದರೆ ಇಂಥ ಸಂಸ್ಥೆಗಳು ಜಾಳಿಗೆಯಂತೆ ಎಲ್ಲಕಡೆಯಲ್ಲಿಯೂ ಪಸರಿಸಬೇಕು. ನಮ್ಮ ತಾಯಂದಿರಲ್ಲಿಯೂ ಅಕ್ಕ-ತಂಗಿಯರಲ್ಲಿಯೂ ಒಡಮೂಡಿದ ರಾಷ್ಟ್ರೀಯ ತಿಳಿವಳಿಕೆಯು ನಮ್ಮ ಸ್ವರಾಜ್ಯದ ಚಳವಳಿಯಲ್ಲಿ ಪ್ರತ್ಯಕ್ಷವಾಗಿ ಸಹಾಯವಾಗುವದಷ್ಟೇ ಅಲ್ಲದೆ ನಮ್ಮ ಮಾರ್ಗದಲ್ಲಿ ಬರುವ ಅನೇಕ ವಿಘ್ನಗಳನ್ನು ಅಪ್ರತ್ಯಕ್ಷವಾಗಿ ಹೋಗಲಾಡಿಸುತ್ತದೆ.

## ನಾವು ಸ್ವರಾಜ್ಯಕ್ಕೆ ಅರ್ಹರೋ?

ನಾವು ಸ್ವರಾಜ್ಯವನ್ನು ಗಳಿಸಲು ಅನರ್ಹರೆಂದು ಸಿದ್ಧ ಮಾಡುವದಕ್ಕೆ, ಸ್ವಯಂನಿಯೋಜಿತ ಉಪದೇಶಕರೂ ಕುಲಗುರುಗಳೂ ಆದ ದಯಾಳುಗಳಾದ ಆಂಗ್ಲರು ದಿನದಿನವೂ ಹವಣಿಸುತ್ತಲಿದ್ದಾರೆ. ಸ್ವಾತಂತ್ರ್ಯಸ್ಮೃತದ ಸವಿಗಾಗಿ ಹಂಬಲಿಸುವ ಮೊದಲು ನಾವು ಸುರಕ್ಷಿತವಾಗಿರಬಹುದೆಂಬುವನ್ನು ನೋಡಿಕೊಳ್ಳಬೇಕಲ್ಲವೆ? ಎಂದು ಹಲವರು ಅನ್ನುತ್ತಾರೆ. ಮತ್ತೆ ಕೆಲವರು ರಾಜಕೀಯ ಸುಧಾರಣೆಗಿಂತ ಮೊದಲು ಸಾಮಾಜಿಕ ಸುಧಾರಣೆಯಾಗಬೇಕೆಂದು ಕೂಗುತ್ತಾರೆ. ಔದ್ಯೋಗಿಕ ಉನ್ನತಿಯಾಗುವ ಮೊದಲು ಹಿಂದುಸ್ತಾನವು ಸ್ವತಂತ್ರವಾಗಲಿಕ್ಕೆ ಯೋಗ್ಯವಾಗಲಾರದೆಂದು ಇನ್ನಿತರರು ಪ್ರತಿಪಾದಿಸುತ್ತಾರೆ. ಆದರೆ ಈ ಪ್ರಕಾರದ ಯಾವ ಮಾತೂ ನಿಜವಾಗಲಾರದು. ರಾಜಕೀಯ ಸ್ವಾತಂತ್ರ್ಯವಿಲ್ಲದೆ ನಮಗೆ ಉಚಿತ ಶಿಕ್ಷಣವಾಗಲಿ ಸಾಮಾಜಿಕ ಇಲ್ಲವೆ ಔದ್ಯೋಗಿಕ ಉನ್ನತಿಯಾಗಲಿ ದೊರೆಯುವದು ಎಂದೂ ಶಕ್ಯವಿಲ್ಲವೆಂಬುದೇ ನಿಜವು. ನಮ್ಮ ನಿಜವಾದ ಮಾರ್ಗವನ್ನು ನಿರ್ಧರಿಸಿಕೊಳ್ಳಲು ನಾವು ಸ್ವತಂತ್ರರಾಗದಹೊರತು ಶಕ್ಯವಿಲ್ಲ.

ಹಿಂದೆ ದೇಶಾಭಿಮಾನಿ ಗೋಖಲೆಯವರು ಸರಕಾರದ ಡುಬ್ಬಕೆರೆದಂತೆ ಈಗಲೂ ಶಿಕ್ಷಣಪ್ರಗತಿಗಾಗಿ ಸರಕಾರವನ್ನು ಒತ್ತಾಯಪಡಿಸಿದವರಿ

ಗೆಲ್ಲ ‘ ಹಣವಿಲ್ಲ ’ ವೆಂಬ ನೆವವು ಮುಂದೆ ಬಂದ ಅನುಭವವು ಸಾಕಷ್ಟಿದೆ. ಸಾಮಾಜಿಕ ಏಳ್ಗೆಗಾಗಿ ಕಟ್ಟಳೆಗಳನ್ನು ಮಾಡಲು ಹೆಣಗಿದರೆ ಮಿಸ್ ಮೇಯೋಳ ಚಿಕ್ಕಪ್ಪ ದೊಡ್ಡಪ್ಪಗಳನೇಕರು ನಮ್ಮನ್ನು ಅಡ್ಡಗಟ್ಟಲಿಕ್ಕೆ ಸಿದ್ಧರಿರುವರು. ಆರ್ಥಿಕ ಮತ್ತು ಔದ್ಯೋಗಿಕ ಉನ್ನತಿಗಾಗಿ ನಾವು ಸಾಯುವವರೆಗೆ ಕಷ್ಟಪಟ್ಟರೂ, ಇಂಪೀರಿಯಲ್ ಬ್ಯಾಂಕ ಮತ್ತು ರೇಲ್ವೆ ಸ್ಟೋರ್ಸ ಮೊದಲಾದ ಖಾತೆಗಳು ರಾಷ್ಟ್ರಕಾರ್ಯಕ್ಕೆ ಯಾವರೀತಿಯಿಂದಲೂ ಸಹಾಯಕವಾಗದೆ ನಮ್ಮ ಶಕ್ತಿಯನ್ನು ಮಾತ್ರ ಹಿಂಡಿಹಾಕುತ್ತವೆ. ನಮ್ಮ ನಗರಸಭೆ, ಕೌನ್ಸಿಲುಗಳು ಕುಡುಕತನವನ್ನು ನಿಲ್ಲಿಸಬೇಕೆಂಬ ಕಾನೂನು ಮಾಡಿಕೊಂಡರೂ ಸರಕಾರದ ವೈಷಮ್ಯ ಅಥವಾ ಉದಾಶೀನತೆಯ ಬಂಡೆಗಲ್ಲುಗಳು ಎದುರಿಗೆ ಬರಲು ಎಲ್ಲವೂ ಮುಸಿಸುಂಗಿ ಹೋಗುವವು. ಬರದಿಂದ ಬಳಲುವ ಜನಗಳಿಗೆ ನಮ್ಮ ಕರುಳಿನ ಕಸವಿಸಿಗಾಗಿ ಸಹಾಯ ಮಾಡಬೇಕೆನ್ನುವಾಗಲೂ, ನಾಡಿನ ಬಡವರು ಕೂಳಿಲ್ಲದೆ ಸಾಯುತ್ತಿರುವಾಗಲೂ ನಮ್ಮ ನಾಡಿನಿಂದ ರಪ್ತಾಗುತ್ತಿರುವ ಆಹಾರ ಪದಾರ್ಥಗಳನ್ನು ತಡೆಯಲು ಕೂಡ ನಮ್ಮಲ್ಲಿ ಶಕ್ತಿ ಇಲ್ಲದಾಗಿದೆ. ಇದಕ್ಕೆಲ್ಲ ಜುಲುಮೆಯ ಸರಕಾರವೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ.

## ಸ್ವರಾಜ್ಯವೇ ರಾಮಬಾಣವು

ನಮ್ಮ ಎಲ್ಲ ಬೇನೆಗಳಿಗೆ ಸ್ವರಾಜ್ಯವೇ ರಾಮಬಾಣವೆಂದು ನನಗೆ ಸಂಪೂರ್ಣ ನಂಬುಗೆಯಾಗಿದೆ. ನಮ್ಮ ಸ್ವರಾಜ್ಯದ ಅರ್ಹತೆಯ ಒಂದೇ ಒರೆಗಲ್ಲೆಂದರೆ ಸ್ವತಂತ್ರರಾಗಲೇಬೇಕೆಂಬ ನಮ್ಮ ಹಂಬಲವು. ಸ್ವರಾಜ್ಯವನ್ನು ಗಳಿಸಲಿಕ್ಕೂ, ಅದನ್ನು ಕಾಪಾಡಿಕೊಳ್ಳಲಿಕ್ಕೂ ನಾವೀಗ ತಕ್ಕವರಾಗಿದ್ದೇವೆಂದು ಬೇರೆ ಹೇಳಬೇಕಾಗಿ ಉಳಿದಿಲ್ಲ. ಆದರೆ ಸಂಕಲ್ಪವು ಇಲ್ಲಿಯವರೆಗೆ ಬಲವತ್ತರವಿಲ್ಲದ್ದರಿಂದಲೇ ನಾವಿನ್ನೂ ಪಾರತಂತ್ರ್ಯದಲ್ಲಿ ಕೊಳೆಯುತ್ತಿದ್ದೇವೆ.

ಚೀನ, ತುರ್ಕಸ್ತಾನ, ಇರಾಣ, ಬಲ್ಗೇರಿಯಾ, ರೋಮಾನಿಯಾ, ರಶಿಯಾ ಮುಂತಾದ ಯಾವದೇ ರಾಷ್ಟ್ರದೊಡನೆ ಹಿಂದುಸ್ತಾನದ ತುಲನೆ ಮಾಡಿದರೆ ಇದು ಯಾವ ಮಾತಿನಲ್ಲಿಯೂ ಅವಕ್ಕೆ ಕಡಿಮೆ ಇಲ್ಲವೆಂದು ತೋರುತ್ತದೆ. ಅನೇಕ ವಿಷಯಗಳಲ್ಲಿ ನಿಜವಾಗಿಯೂ ಅಲ್ಲಿಯವರೆಲ್ಲರಿಗಿಂತಲೂ ನಾವು ಹೆಚ್ಚಿನವರಾಗಿದ್ದೇವೆ. ಒಂದೇ ಒಂದು ಸ್ವಾತಂತ್ರ್ಯಲಾಲಸೆಯಲ್ಲಿ ಕಡಿಮೆ ಇದ್ದುದರಿಂದಲೇ ಭಾರತವು ಹಿಂದೆಬಿದ್ದಿದೆ. ಈ ಲಾಲಸೆಯು

ಜನರಲ್ಲಿ ಸಾಕಷ್ಟು ಮೂಡಿದೊಡನೆಯೇ ಬಂಧನದ ಬೇಡಿಗಳು ತಾವಾಗಿ ಮುರಿಯುವವು. ಬ್ರಿಟಿಶರಾಜ್ಯವು ಭಾರತೀಯರ ಸಹಾಯವಿಲ್ಲದೆ ಹಿಂ ಸ್ತಾನದಲ್ಲಿ ಅರಗಳಿಗೆ ಕೂಡ ನಡೆಯಲಾರದು. ಬ್ರಿಟಿಶರು ತಯಾ ಮಾಲನ್ನು ನಾವು ಕೊಳ್ಳುತ್ತೇವೆಂದೇ ಅವರಲ್ಲಿ ಅರಿವಾಸಿ ಜನರು ಪೋ ಹೊಂದುತ್ತಾರೆ. ಅವರ ಸಾಮಾನುಗಳನ್ನು ಕೊಳ್ಳುವದನ್ನು ಬಿಟ್ಟು ನ ಸಹಾಯವನ್ನು ಹಿಂದಕ್ಕೆ ತೆಗೆದುಕೊಂಡೊಡನೆಯೇ ಈ ಆಳರಸರ ಮು ಮಣಿಯು ನಮ್ಮ ಭಾರತಮಾತೆಯ ಪಾದಧೂಳಿಯಲ್ಲಿ ಹೊರಳಾಡಲು ಬರುವದು. ಅಸಹಕಾರ ಸರ್ಪಾಸ್ತ್ರವೂ, ಬಹಿಷ್ಕಾರ ಬ್ರಹ್ಮಾಸ್ತ್ರ ರಾಷ್ಟ್ರೀಯ ದೃಷ್ಟಿಯಿಂದ ಉಪಯೋಗವಾಗಬೇಕಾದರೆ ಜನತೆಯಲ್ಲಿ ರಾ ಯ ಇಚ್ಛೆಯು ಪ್ರಬಲವಾಗಲಿಕ್ಕೆ ಬೇಕು.

## ಮುಂದುವರಿಯುವ ಮಾರ್ಗ

ಜನಜಂಗುಳಿಯಲ್ಲಿ ರಾಷ್ಟ್ರಾಭಿಮಾನವನ್ನು ಹುಟ್ಟಿಸುವದೇ ಕಾರ್ಯಗಳ ಮೂಲವಾಗಿದೆ. ೧೯೨೧ರ ಕಾರ್ಯಕ್ರಮವು, ಒಂದು ಮ ದಿಂದ ಹಳೆಯ ವಿಧಾನಗಳ ನಾಶ, ಮತ್ತೊಂದು ಮುಖದಿಂದ ಹೊಸ ವಿಧ ಗಳನ್ನು ಸೃಷ್ಟಿಸುವದು ಆಗಿತ್ತು. ಈಗ ಜನಜೀವನದ ಜೀವಾಳವೆಲ್ಲ ಆಳ ಕೈಯಲ್ಲಿದೆ. ಈ ಜೀವಾಳವು ನಮ್ಮ ಕೈಸೇರಬೇಕಾದರೆ ಅವರ ಸರಿಸವ ವಾದ ಸಂಸ್ಥೆಗಳನ್ನು (Parallel institutions) ನಾವು ನಡೆಯಿಸ ಬೇಕು. ಅವರ ಎದುರಿಗೆ ಅವರಂತೆಯೇ ಶಾಲೆ, ಕಾಲೇಜ, ಕೋರ್ಟ ಕಚೇರಿ, ಕೌನ್ಸಿಲ್, ಅಸೆಂಬ್ಲಿ, ಪೋಲೀಸಖಾತೆ, ಪೋಸ್ಟಖಾತೆ ಮೊದ ದವುಗಳನ್ನು ನಡೆಯಿಸಬೇಕು. ಕಾಂಗ್ರೆಸದ ಪ್ರತಿಸರಕಾರವೇ ನಿರ್ಮಾಣ ಬೇಕು. ಸಣ್ಣ ಮೂರುಮನೆ ಹಳ್ಳಿಯಿಂದ ಲಕ್ಷಗಟ್ಲೆ ಜನಸಂಖ್ಯೆಯ ಪಟ್ಟಣಗಳಲ್ಲಿ ಕೂಡ ಆಳರಸರ ಸಂಸ್ಥೆಗಳಿಗೆ ಸರಿಯಾದ ಮತ್ತೊ ಕಾಂಗ್ರೆಸ ವಿಧಾನವು ಏರ್ಪಟ್ಟಿರಬೇಕು. ಆಮೇಲೆ ಮಾತ್ರ ಜನತೆ ಜೀವಾಳವು ಆಳರಸರ ಕೈಯಿಂದ ನಮ್ಮ ಕೈಯಲ್ಲಿ ತಾನಾಗಿಯೇ ಬರುವ ಎಲ್ಲಿ ಇಂಥ ಸಂಸ್ಥೆಗಳಿರುವವೋ ಅಲ್ಲಿ ಜನತೆಯು ಬೆಂಬಲವಿರುವದೆ ಮಾತು ಅನುಭವಸಿದ್ಧವಾದದ್ದು. ಕಾಂಗ್ರೆಸ ಕಚೇರಿಗಳು ನಮ್ಮನ್ನು ಸುವ ಬಲವಾದ ದುರ್ಗಗಳು; ಆಳರಸರ ಸೊತ್ತನ್ನು ಹರಣಮಾ ಸಾಮುಗ್ರಿಗಳನ್ನು ಸಿದ್ಧಗೊಳಿಸುವ ಕಾರಖಾನೆಗಳು. ಕಾಂಗ್ರೆಸ ಸ್ವಯಂ

ಕರೇ ನಮ್ಮ ಸೈನ್ಯವು. ಬಲವತ್ತರವಾದ ಮತ್ತು ಸುಶಿಕ್ಷಿತವಾದ ಹೆಚ್ಚಿನ ಯೋಗ್ಯತೆಯ ಸೈನ್ಯವು ನಮ್ಮ ಕೈಯಲ್ಲಿದ್ದ ಹೊರತು ಎಷ್ಟೇ ಚಾತುರ್ಯದ ಕಾರ್ಯ ಮಾಡಿದರೂ ಕೊನೆಗಾಣದು. ರಾಷ್ಟ್ರೀಯ ವಿಚಾರವನ್ನು ಜನ ಸಾಮಾನ್ಯರಲ್ಲಿ ಹರಡುವದಕ್ಕೂ, ಅಸ್ಪೃಶ್ಯತಾ ನಿವಾರಣೆಯ ಪ್ರಯತ್ನ ಮಾಡ ಲಿಕ್ಕೂ, ಖಾದಿಯ ಪ್ರಚಾರ ಕಾರ್ಯವನ್ನು ಮೊದಲು ಮಾಡಲಿಕ್ಕೂ ನಾವು ಪ್ರಾರಂಭಿಸಬೇಕು. ಪಂಚಾಯತಿ ಸಂಸ್ಥೆ, ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಲೋಕಲ್ ಬೋರ್ಡ ಮೊದಲಾದ ಸಾರ್ವಜನಿಕ ಸಂಸ್ಥೆಗಳನ್ನೂ, ಕೌನ್ಸಿಲ್ಲುಗಳನ್ನೂ ಕೈಯಲ್ಲಿ ತೆಗೆದುಕೊಂಡು ಸಾಧ್ಯವಿದ್ದಷ್ಟು ಜನಹಿತ ಕಾರ್ಯವನ್ನು ನಾವು ಆರಂಭಿಸಬೇಕು.

ಹಳ್ಳಿಗಳ ಸಂಘಟನೆ-ಪುನರ್ಘಟನೆಯ ಕಾರ್ಯಗಳನ್ನು ನಾವು ಮರೆ ಯಕೂಡದು. ಅಯೋಗ್ಯವಾದದ್ದನ್ನು ನಾಶ ಮಾಡಿವಲ್ಲದೆ ಯೋಗ್ಯವಾದ ದ್ದೊಂದನ್ನು ನಾವು ಸ್ಥಾಪಿಸಲಿಕ್ಕೆ ಬೇಕು. ನಮ್ಮ ದೇಶವು ಹಳ್ಳಿಗರ ತೌರು ಮನೆಯು. ಹಳ್ಳಿಗರ ಏಳ್ಗೆಯೇ ನಮ್ಮ ನಿಜವಾದ ಏಳ್ಗೆಯು. ಆದ್ದರಿಂದ ಹಳ್ಳಿಗರಲ್ಲಿ ಚೈತನ್ಯೋತ್ಪಾದನೆ ಮಾಡುವದು ನಮ್ಮ ಆದ್ಯ ಕರ್ತವ್ಯವು. ಪರ ಸ್ಪರ ಹಿತಬುದ್ಧಿಯಿಂದಲೂ ಸಹಕಾರದಿಂದಲೂ ಅವರ ಕೊರತೆಗಳನ್ನು ನೀಗಲು ಪ್ರಯತ್ನಿಸಬೇಕು. ಆದರೆ ಅನ್ಯರ ಸಹಾಯದಿಂದ ಕೊರತೆಗಳು ನಿರಂತರವಾಗಿ ದೂರವಾಗಲಾರವೆಂಬುದನ್ನು ಮರೆಯಲಾಗದು. ಸ್ವಾವಲಂಬ ನದಿಂದ ಮಾತ್ರ ನಮಗೆ ಶಾಶ್ವತವಾದ ಸುಖವು ದೊರೆಯುವದು. ನಮ್ಮ ಆರ್ಥಿಕ ಸ್ಥಿತಿಯನ್ನು ಸ್ವಾವಲಂಬನದಿಂದಲೂ ಪರಸ್ಪರ ಸಹಾನುಭೂತಿ ಯಿಂದಲೂ ತಿದ್ದಿಕೊಳ್ಳಬೇಕು. ನಿರಕ್ಷರತೆಯನ್ನು ತೆಗೆದುಹಾಕಬೇಕು. ಸಾಮಾಜಿಕ ಕುಂದುಕೊರತೆಗಳನ್ನು ಕಡಿಮೆಮಾಡಿ ಮನೆಗಳನ್ನು ಆರೋಗ್ಯ ವಾಗಿಯೂ, ಚೊಕ್ಕಟವಾಗಿಯೂ, ಸುಂದರವಾಗಿಯೂ ಮಾಡಬೇಕು.

ಈತರದ ಸತತ ಪ್ರಯತ್ನಗಳಿಲ್ಲದೆ ಒಮ್ಮೆಲೇ ಏನಾದರೊಂದು ಮಾಡ ಹೋದರೆ ಅದು ಅಶಕ್ಯವಾಗಿ ಕಾಂಗ್ರೆಸ ಕೆಲಸಕ್ಕೆ ಅಡ್ಡಿಬರುವದು. ಜನರಲ್ಲಿ ನಿಜವಾದ ತಿಳಿವಳಿಕೆಯನ್ನೂ, ಸತ್ಯಕ್ಕಾಗಿ ಅನ್ಯಾಯವನ್ನೆದುರಿಸುವ ಮನೋಧೈರ್ಯವನ್ನೂ ಒಡಮೂಡಿಸಬೇಕು. ಆತ್ಮನಿಗ್ರಹದಿಂದಲೇ ಕಾಂ ಗ್ರೆಸ್ಸಿನ ನೈತಿಕ ಪ್ರಭಾವವು ಬೆಳೆದು ಅದರಿಂದ ಸಾರ್ವಜನಿಕ ಸಂಸ್ಥೆಗಳಲ್ಲಿ ಯೂ,ಕಾಯದೆಮಂಡಲಗಳಲ್ಲಿಯೂ ಅದರ ಪರಿಣಾಮವು ವಿಶೇಷವಾಗುವದು.

## ತಾಳ್ಮೆಯ ಭಾವನೆ

೧೯೨೨ರ ಕಾಂಗ್ರೆಸ ಅಧಿವೇಶನದ (ಗಯಾ) ಅನಂತರ ಬಹಳ ಜನರು ವಿಧಾಯಕ ಕಾರ್ಯಗಳಲ್ಲಿ ಮನಸ್ಸು ಹಾಕಹತ್ತಿದ್ದಾರೆ. ವಿಧಾಯಕ ಕಾರ್ಯಕ್ರಮವನ್ನು ಮುಂದುವರಿಸುವಾಗ ಆಳರಸರ ಕಾಲುಗಳಿಗೆ ತೊಡಕು ಹಾಕುವದೂ ಅವಶ್ಯವೆಂದು ಸ್ವರಾಜ್ಯ ಪಕ್ಷದಿಂದ ಪ್ರಕಟಿತವಾಗಿದೆ. ಇದನ್ನು ನಾವು ಮರೆತಂತೆ ತೋರುತ್ತದೆ. "ಅಸಹಕಾರವು ಬಂಜೆಯಾಯಿತು" "ವಿರೋಧವು ಅಪಜಯ ಹೊಂದಿತು" ಮುಂತಾದ ವಾಕ್ಯಗಳು ಜನತೆಯನ್ನು ತಪ್ಪುದಾರಿಗೆ ಒಯ್ಯುತ್ತವೆ. ನಾವು ಧೂರ್ತತನದಿಂದ ವಿಚಾರಿಸದಿರುವದೇ ನಮ್ಮ ದುಃಖಕ್ಕೆ ಕಾರಣವು. ಅಪಜಯವೆಂದಾಕ್ಷಣವೇ ನೆಲ ಹಿಡಿದು ಕೂಡ್ರುವೆವು. ಆಂಗ್ಲರಲ್ಲಿರುವ ಗಟ್ಟಿಗತನವೂ, ನಂಬುಗೆಯೂ ನಮ್ಮಲ್ಲಿಲ್ಲ. ಸರಕಾರದ ದಬ್ಬಾಳಿಕೆಯು ನಿಷ್ಪ್ರಯೋಜನವಾಗುವದಿಲ್ಲ. ಅದು ನಮ್ಮನ್ನು ಗಟ್ಟಿಗರನ್ನಾಗಿ ಮಾಡುತ್ತದೆ. ಈ ಬಗೆಯ ಒತ್ತಾಯದಿಂದಲೇ ರಾಷ್ಟ್ರೀಯ ತತ್ವವು ಜಯಹೊಂದುತ್ತ ಬಂದದ್ದನ್ನು ಇತಿಹಾಸವು ಸಾರುತ್ತದೆ. ಏಕಮತದಿಂದಲೂ ನಿಕಟ ಸಂಬಂಧದಿಂದಲೂ ಎಡಬಿಡದೆ ಆಳರಸರ ಕುಹಕತನವನ್ನು ವಿರೋಧಿಸುವದರಿಂದಲೇ ಯೋಗ್ಯ ವಾತಾವರಣವನ್ನು ಕಾಯ್ದುಕೊಳ್ಳಲು ಸಾಧ್ಯವು. ಅದರಿಂದಲೇ ನಮ್ಮ ನೈತಿಕ ಬಲವೂ ಬೆಳೆಯುವದು. ಅಂಥ ನೈತಿಕ ಧೈರ್ಯವಿಲ್ಲದಿರುವದೇ ನಮ್ಮ ದಾಸ್ಯದ ಹಾಗೂ ಅವನತಿಯ ಆಂತರಿಕ ಕಾರಣವಾಗಿದೆ. ನೀಟಾಗಿ ನಿಲ್ಲಲು ಬೆನ್ನೆಲುವೇ ಇಲ್ಲದೆ ದಾಸ್ಯದ ಕೊಳಚೆಯಲ್ಲಿ ಬಿದ್ದು ಕೊಳೆಯುವ ನಮ್ಮ ಜನಾಂಗಕ್ಕೆ ಬಲಿಷ್ಠವಾದ ಬೆನ್ನೆಲುವಿನ ಆಧಾರ ಉಂಟಾಗಬೇಕಾದರೆ ಸದ್ಯದ ರಾಕ್ಷಸೀ ಸರಕಾರವನ್ನು ಯೋಗ್ಯರೀತಿಯಿಂದ ಎದುರಿಸುವ ನೈತಿಕ ಬಲವೂ ಆತ್ಮಪ್ರಭೆಯೂ ಬೇಕು.

ನಮ್ಮ ಚಳವಳಿಯ ಅಂತಿಮ ಪರಿಣಾಮವು ಹೇಗಾಗಬಹುದೆಂದು ಅನೇಕರು ಸಂಶಯಗೊಳ್ಳುತ್ತಾರೆ. ಆದರೆ ಮುಂದೆ ಬರಲಿರುವದರ ಚಿಹ್ನೆವನ್ನು ನಾನೀಗಲೇ ನೋಡುತ್ತಿದ್ದೇನೆ. ಹರತಾಳ, ಬಹಿಷ್ಕಾರಗಳು ಬೆಳೆದು ಕಾಯಿದೆಭಂಗದ ಉಗ್ರರೂಪವನ್ನು ಹೊಂದುವವು. ಅದರ ಜೊತೆಯಲ್ಲಿ ದಬ್ಬಾಳಿಕೆಯ ಭೂತವೂ ಭೀಕರ ಸ್ವರೂಪವನ್ನು ತಾಳುವದು. ಕರನಿರಾಕರಣೆಯು ಸುರುವಾದಾಗ ಆಂಗ್ಲರು ಕಣ್ಣು ತೆರೆಯುವರು. ಆ ಸ್ಥಿತಿಗೆ ಮುಟ್ಟಿದಾಗ ಮಾತ್ರ, ಹಿಂದುಸ್ತಾನವನ್ನು ಸಾಯಬಡಿಯುವದರಿಂದಾಗಬಹು

ದಾದ ತಮ್ಮ ಆರ್ಥಿಕ ಹಾನಿಯ ಬೇಗೆಯಿಂದ ಅವರಿಗೆ ಬಿಸಿತಗಲುವದು. ಸೆರೆಮನೆಗಳೆಲ್ಲ ತುಂಬುವವು. ಆಳರಸರಲ್ಲಿ ನೈತಿಕ ಅಧೋಗತಿಯಾಗಿ ಕೆಳಗಿನ ಅಧಿಕಾರಿಗಳ ನಂಬುಗೆ-ಭಕ್ತಿಗಳು ಕಡಿಮೆಯಾಗಲು ಆಡಳಿತವು ದುಸ್ತರವಾಗುವದು. ಪರನಾಡಿನ ವ್ಯವಹಾರಗಳು ಬಂದುಬೀಳುವವು. ಈ ಸ್ಥಿತಿಗೆ ಅನ್ಯಪಕ್ಷದವರು 'ಅರಾಜಕತೆ' ಎಂದು ಆರೋಪಿಸುವರು. ಆದರೆ ಜನಹಿತ ದೃಷ್ಟಿಯಿಂದ ಇದು ಸುವ್ಯವಸ್ಥಿತವೂ, ಸುಶಿಕ್ಷಿತವೂ, ನಿಶ್ಚಲವೂ ಆದ ಸ್ಥಿತಿಯಂತೆ ಕಾಣದಿರಲಾರದು. ಆಗಲಾದರೂ ಸರಕಾರದವರು ಜನತೆಯ ಪ್ರತಿನಿಧಿಗಳಿಗೆ ಶರಣು ಬರಲೇಬೇಕಾಗುವದು. ಹಾಗೆ ಮಾಡುವದರಿಂದ ಮಾತ್ರ ಅವರ ವ್ಯಾಪಾರದ ಪುನರುದ್ಧಾರವಾಗಿ, ಅನವಶ್ಯಕ ತೊಂದರೆಗಳೊಳಗಿಂದ ಅವರು ಸುರಕ್ಷಿತವಾಗಿ ಪಾರಾಗುವರು.

## ನನ್ನ ಉತ್ಕಟಾಭಿಲಾಷೆ

ನಾನೊಬ್ಬ ಆಶಾವಾದಿ. ಅತ್ಯಂತ ಹೀನಾವಸ್ಥೆಯನ್ನನುಭವಿಸಲು ಸಿದ್ಧರಿದ್ದಾಗ್ಯೂ ಅತ್ಯುತ್ಕರ್ಷದ ಆಶಾತಂತುವನ್ನು ಮಾತ್ರ ನಾವು ಬಿಟ್ಟಿಲ್ಲ. ಈ ಚಳವಳಿಯು ಇನ್ನೂ ಅಂತಿಮಾವಸ್ಥೆಯನ್ನು ಮುಟ್ಟಿಲ್ಲ. ಗಂಡಾಂತರವು ಇನ್ನೂ ಬರಲಿದೆ. ಗ್ರೇಟಬ್ರಿಟನ್‌ವಾದರೂ ಇತಿಹಾಸದಿಂದ ಒಳ್ಳೇ ಪಾಠಗಳನ್ನು ಕಲಿತಿದೆ. ಅಯರ್ಲಂಡದ ಗೊಂದಲದಿಂದ ರಾಜನೀತಿಧುರೀಣರ ತಲೆಯಲ್ಲಿ ಹುಟ್ಟಿದ ಕಾವು ಇನ್ನೂ ತಣ್ಣಗಾಗಿಲ್ಲ. "ಹಿಂದುಸ್ತಾನವು ಸ್ವತಂತ್ರವಾಗಲು ನಿಶ್ಚಯಿಸಿದೆ, ಸಾಧ್ಯವಿದ್ದರೆ ನಮ್ಮ ಸಹಾಯದಿಂದ, ಇಲ್ಲವಾದರೆ ನಮ್ಮ ಸಹಾಯವಿಲ್ಲದೆ ಅದು ಸ್ವತಂತ್ರವಾಗೇ ತೀರುವದು" ಎಂದು ಅವರಲ್ಲನೇಕರು ಬ್ರಿಟಿಶ ಮುತ್ಸದ್ದಿಗಳಿಗೆ ಎಚ್ಚರಿಕೆ ಕೊಟ್ಟಿದ್ದಾರೆ. ಈ ಮಾತು ಸಟೆಯಲ್ಲ. ಭಾರತದ ಏಕಮುಖದ ಬೇಡಿಕೆಯ ಅಲ್ಪಾಂಶವಾದರೂ ದೊರೆಯದಿರಲಾರದು. ಆದರೆ ಅಲ್ಪದರಿಂದ ಸಂತುಷ್ಟರಾಗುವದರಿಂದ ನಮ್ಮ ಮುತ್ಸದ್ದಿತನದ ಬೆಳಕು ಹೊರಬೀಳುವದು. ಬ್ರಿಟಿಶರು ಕೊಡುವ ಸ್ವಾತಂತ್ರ್ಯದ ಪದ್ಧತಿಯು ನಮಗೆ ಸರಿಬೀಳಲಾರದು. ಕೊನೆಗೆ ಸಂಪೂರ್ಣ ಸ್ವಾತಂತ್ರ್ಯ ದೊರೆತಾಗಲೇ ಎಲ್ಲ ಅಗ್ನಿಯೂ ಶಾಂತವಾಗುವದು.

ಜಗತ್ತಿನಲ್ಲಿ ಒಂದುವೇಳೆ ಮಹಾಯುದ್ಧವು ಸುರುವಾದರೆ ಹಿಂದುಸ್ತಾನವು ಅದರಿಂದ ದೂರಉಳಿಯಬೇಕು. ಭಾರತವು ಇಂಥ ವಿನಾಶಕ ಯುದ್ಧದಲ್ಲಿ ಧುಮುಕಿ ತನ್ನ ರಕ್ತವನ್ನು ಸೂರೆಮಾಡುವದು ಅನವಶ್ಯಕವು.

ಅದರಲ್ಲಿ ಯಾವ ರೀತಿಯಿಂದಲಾದರೂ ಭಾಗ ತೆಗೆದುಕೊಂಡು ತನ್ನ ಸತ್ವ ಹರಣಮಾಡಿಕೊಳ್ಳಲು ಭಾರತವೆಂದೂ ಮುಂದೆ ಬರಲಾಗದು.

ಇಂದು ನಾವು ಬಲು ಬಿಕ್ಕಟ್ಟಿನ ಸ್ಥಿತಿಯಲ್ಲಿದ್ದೇವೆ. ಆದರೇನು! ಷೇಕ್ಸ್‌ಪಿಯರ ಮಹಾಕವಿಯು ಹೇಳುವಂತೆ ಮಾನವ ಜೀವನದಲ್ಲಿ ಎಲ್ಲಿಯಾದರೂ ಒಂದು ಉನ್ನತಿಗೊಯ್ಯುವ ಪ್ರಸಂಗವಿದ್ದೇ ಇರುವದು. ಅದರ ಸೆಳೆತದಂತೆ ಹೋದರೆ ಅದು ನಮ್ಮನ್ನು ಊರ್ಜಿತಾವಸ್ಥೆಗೆ ಒಯ್ಯುವದು. ಈಗ ನಾವು ಅಂಥ ಏರಿಕೆಯ ಪ್ರಸಂಗದ ಮಧ್ಯದಲ್ಲಿದ್ದೇವೆ. ಕಾರಣ ನಮ್ಮೆದುರಿಗಿರುವ ಸುಪ್ರಸಂಗಗಳನ್ನು ನಾವು ಕಳೆದುಕೊಳ್ಳಬಾರದು. ಎಲ್ಲರೂ ಹೆಗಲಿಗೆ ಹೆಗಲು ಹಚ್ಚಿ 'ಏಕಹೃದಯದಿಂದ ಏಕಮುಖವಾಗಿ ಟೆನ್ನಿಸನ್ ಕವಿಯ ಸಂದೇಶವನ್ನು ನೆನೆಯುತ್ತ ಸ್ವಾತಂತ್ರ್ಯಸಂಗ್ರಾಮದಲ್ಲ ಮುಂದುವರಿಯೋಣ. **"ಗುರಿಯನ್ನು ದೊರಕಿಸಲು ಭಗೀರಥ ಪ್ರಯತ್ನಮಾಡು; ಅದನ್ನು ಕಂಡುಕೋ; ಆದರೆ ಎಂದೂ ಶರಣಾಗತನಾಗಬೇಡ"** ಎಂಬ ವಚನವೇ ನಮ್ಮ ಹೆಗ್ಗುರುತಾಗಲಿ. ಲೋಕಮಾನ್ಯ, ದೇಶಬಂಧುಗಳಂಥವರ ಕನಸುಗಳು ನಮಗೆ ವಂಶಪರಂಪರೆಯಾಗಿ ಬಂದಿವೆ. ಅವರ ಕಲ್ಪನೆಗಳನ್ನು ಕೃತಿಗಳಲ್ಲಿ ತರುವ ಹೊಣೆಯ ಭಾರವು ನಮ್ಮಮೇಲೆ ಬಿದ್ದಿದೆ. ಭಾರತವು ಬೇಗನೆ ಒಮ್ಮೆ ಸ್ವತಂತ್ರವಾಗುವದರಲ್ಲಿ ನನಗೆ ಸಂಶಯವಿಲ್ಲ. ರಾತ್ರಿಯಾದ ನಂತರ ಹಗಲು ಬರುವದೆಂಬುದರಲ್ಲಿರುವಷ್ಟೇ ನಂಬುಗೆಯು ಅದರಲ್ಲಿದೆ. ಆ ಕನಸುಗಳಿಗೆ ನಮ್ಮ ಜೀವನಕ್ರಮದಲ್ಲಿ ಮೂರ್ತಸ್ವರೂಪವನ್ನು ತಂದುಕೊಡಲು ನಮ್ಮ ಸರ್ವಾಂತಃಕರಣಗಳನ್ನೆಲ್ಲ ವಿನಿಯೋಗಿಸೋಣ. ಕನಸುಗಳನ್ನು ಇದ್ದಕ್ಕಿದ್ದಂತೆ ಹಾಗೇ ನಮ್ಮ ಭಾವೀ ಜನಾಂಗದವರೆಗೂ ಬಿಡುವದು ಲಜ್ಜಾಸ್ಪದವೆಂದು ನಾನು ತಿಳಿಯುತ್ತೇನೆ.



# ೯. ಹೋರಾಟದ ಮಧ್ಯದಲ್ಲಿ

## ೧೯೨೯–೩೧.

೧೯೩೦ ನೆಯ ಇಸ್ವಿಯು ಭಾರತೀಯರು ಸ್ವಾತಂತ್ರ್ಯಸಂಗ್ರಾಮದ ಇತಿಹಾಸದಲ್ಲಿ ನೆನಪಿಡತಕ್ಕದ್ದಾಗಿದೆ. ಆಗ ಮಹತ್ತರವಾದ ಸಂಗತಿಗಳು ಒಂದರಹಿಂದೊಂದು ಬಹು ವೇಗದಿಂದ ಜರುಗಿದವು. ತರುಣರ ಉತ್ಸಾಹ ಸ್ಫೂರ್ತಿಗಳು ಕಾರ್ಯರಂಗದಲ್ಲಿ ನಲಿದಾಡಲು ತವಕಿಸುತ್ತಿದ್ದವು. ಆ ಸ್ಫೂರ್ತಿಗಳನ್ನೆಲ್ಲ ಸಂಗ್ರಹಿಸಿ ಯೋಗ್ಯಕಾರ್ಯಕ್ರಮದಲ್ಲಿ ತೊಡಗಿಸಲು ಕಾಂಗ್ರೆಸ ಸಂಸ್ಥೆಯು ಕೂಡ ಸಾಕಷ್ಟು ಮುಂದುವರಿದು ಬರಲಿಲ್ಲ. ಕಾರಣ ದೇಶದ ತುಂಬೆಲ್ಲ ಅನೇಕ ಅಸಂಘಟಿತವಾದ ಸಣ್ಣ ಪುಟ್ಟ ರಾಜದ್ರೋಹದ ವೈಯಕ್ತಿಕ ಸ್ಫೋಟಗಳಾದವು. ಆಗ ತರುಣರ ಮೇಲೆ ಅಹಿಂಸಾತತ್ವದ ಪ್ರಭಾವವು ಅಷ್ಟೊಂದು ಬಿದ್ದಿರಲಿಲ್ಲ. ಅನೇಕ ಒಳಸಂಚುಗಳೂ ಹಿಂಸಾ

ಕೃತಿಗಳೂ ನಡೆದಿದ್ದವು. ಅವುಗಳಲ್ಲಿ ಮುಖ್ಯವಾಗಿ ಮೀರತ ಒಳಸಂಚು, ಲಾಹೋರ ಒಳಸಂಚು, ಅಸೆಂಬ್ಲಿ ಬಾಂಬ ಪ್ರಕರಣ, ಕಲ್ಕತ್ತಾ ಮೆರವಣಿಗೆಯ ಪ್ರಕರಣ ಇವೇ ಮುಖ್ಯವಾಗಿದ್ದವು. ಕಡೆಯದರಲ್ಲಿ (೧೧ ನೆಯ ಆಗಷ್ಟ ೧೯೨೯) ಬೋಸರೇ ಮುಖ್ಯ ಅಪರಾಧಿಗಳಾಗಿದ್ದರು.

ಅದೇಕಾಲಕ್ಕೆ ಪಬ್ಲಿಕ್ ಸೇಫ್ಟಿಬಿಲ್ಲು ಶಾಸನಮಂಡಲದಲ್ಲಿ ಸೋತು ಬಿದ್ದುಹೋಗಿದ್ದರೂ ವ್ಹಾಯಿಸರಾಯರ ಶಿಫಾರಸಿನಿಂದಲೇ ಅದು ಕಾಯಿದೆಯಾಯಿತು. (Legislature Violence!) ಮತ್ತು ಟ್ರೇಡ ಡಿಸ್ಪ್ಯೂಟ ಬಿಲ್ಲು ಎಪ್ರಿಲದಲ್ಲಿ ಕೌನ್ಸಿಲ್ ಆಫ್ ಸ್ಟೇಟದವರಿಂದ ಪಾಸಾಯಿತು.

ಬಾರಿಸಾಲ (ಬಂಗಾಲದಲ್ಲಿ) ದಲ್ಲಿ ಮಸೀದೆಯಮುಂದೆ ವಾದ್ಯಬಾರಿಸುವ ವಿಷಯದಲ್ಲಿ ಅಲ್ಲಿಯ ಕಾಂಗ್ರೆಸ ಪ್ರಮುಖ ನಾಯಕರಾದ ಸತೀಂದ್ರ ಸೇನರಿಂದ ಸತ್ಯಾಗ್ರಹವು ಆರಂಭಿಸಲ್ಪಟ್ಟಿತ್ತು. ಅನೇಕರು ಸೆರೆಮನೆವಾಸಿಗಳಾಗ ತೊಡಗಿದ್ದರು. ಜೆಸೋರಿಯ ವಂಡವಿಲ್ಲಾ (Bandabilla) ಎಂಬಲ್ಲಿ ಕರನಿರಾಕರಣೆಯ ಚಳವಳಿಯು ಜನ್ಮತಾಳಿ ದಿನದಿನವೂ ಬೆಳೆಯಹತ್ತಿತು. ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಅಧ್ಯಕ್ಷರಾದ ಬೋಸರು ಆ ವಿಷಯಕ್ಕೆ ಬೆಂಬಲವನ್ನಿತ್ತದ್ದಲ್ಲದೆ ಆ ಸ್ಥಳವನ್ನು ಸ್ವತಃ ಸಂದರ್ಶಿಸಿ ಜನರಿಗೆ ಪ್ರೋತ್ಸಾಹ ಮತ್ತು ಧೈರ್ಯಗಳನ್ನು ಕೊಟ್ಟು ಬಂದರು.

ಈ ಪ್ರಕಾರ ದೇಶವೆಲ್ಲ ಅಸಂತೋಷ ಅಸಮಾಧಾನಗಳಿಗೆ ಈಡಾದಾಗ ಎಲ್ಲಕ್ಕೂ ಹೆಚ್ಚು ಹೃದಯದ್ರಾವಕ ಸಂಗತಿಯೊಂದು ಜರುಗಿತು. ಜತಿನದಾಸರ ಆತ್ಮಾಹುತಿಯು ದೇಶದಲ್ಲೆಲ್ಲ ಹಾಹಾಕಾರವನ್ನೆಬ್ಬಿಸಿತು. ೨೬ ವರ್ಷದ ಈ ತರುಣನು ಲಾಹೋರ ಜೇಲಿನಲ್ಲಿ ಅನ್ನತ್ಯಾಗದ ಕಠಿಣ ವ್ರತಹಿಡಿದು ೬೩ ದಿವಸಗಳನಂತರ ವೀರಸ್ವರ್ಗವನ್ನೈದಿದನು. ಸರಕಾರದವರು ರಾಜಕೀಯ ಕೈದಿಗಳನ್ನು ನಡೆಯಿಸಿಕೊಳ್ಳುವ ಅಮಾನುಷ ರೀತಿಗಳನ್ನು ಎದುರಿಸಿ ಖಂಡಿಸುವದೇ ಅವರ ನಿರಶನ ಸತ್ಯಾಗ್ರಹದ ಕಾರಣವಾಗಿತ್ತು. ನರಗಳು ದಿನದಿನವೂ ಒಂದೊಂದಾಗಿ ಮರಣದ ದವಡೆಯಲ್ಲಿಳಿಯಹತ್ತಿದ್ದರೂ ಅವರು ಪ್ರತಿಕ್ಷಣವೂ ಶಾಂತಿಸಮಾಧಾನಗಳಿಂದ ಕೂಡಿರುತ್ತಿದ್ದರು. ತನ್ನ ಧ್ಯೇಯವನ್ನು ಸಾಧಿಸುವವರೆಗೆ ಇಲ್ಲವೆ ಪೂರಾ ಸಾಯುವವರೆಗೆ ತಾವು ತಮ್ಮ ನಿರ್ಣಯವನ್ನು ಬದಲಿಸಲಿಕ್ಕಿಲ್ಲವೆಂಬ ಪಣತೊಟ್ಟು, ಅದಕ್ಕಾಗಿ ತಮ್ಮ ಆತ್ಮವನ್ನು ಅರ್ಪಿಸಿ, ಜಗದ್ವಿಖ್ಯಾತ ಆದರ್ಶ ಸತ್ಯಾಗ್ರಹಿ

ಗಳಾಗಿ ಹೋದರು. ಇವರ ಆತ್ಮಾರ್ಪಣದಿಂದ ಸರಕಾರದವರ ಕ್ರೂರದೃಷ್ಟಿ ಕೋನವು ಬದಲಾಗದಿರಲಿಲ್ಲ. ಚೌಕಸಿ ಕಮಿಟಿಯೊಂದು ನೇಮಿಸಲ್ಪಟ್ಟು ಜೇಲ ನಿಯಮುಗಳಲ್ಲಿ ಅನೇಕ ತಿದ್ದುಪಡೆಗಳಾದವು. ಹುತಾತ್ಮ ತರುಣ ವೀರ ಜತೀಂದ್ರದಾಸರ ಮನ್ನಣೆಗಾಗಿ ವಿಶ್ವಭಾರತವೆಲ್ಲ ಏಕಮುಖದಿಂದ ಮುಂದೆಬಂದಿತು; ಸಂತಾಪದಿಂದ ಕಂಗೆಟ್ಟಿತು.

ಅಸೆಂಬ್ಲಿ ಬಾಂಬಪ್ರಕರಣದ ಮುಖ್ಯ ಆರೋಪಿಗಳಾದ ಭಗತಸಿಂಗರು ತಮ್ಮ ಹೇಳಿಕೆಯಲ್ಲಿ "ರಾಷ್ಟ್ರದ ಬೇಡಿಕೆಯನ್ನು ಅಲಕ್ಷಿಸುತ್ತಿರುವ ಸರಕಾರಕ್ಕೆ ಈ ಬಾಂಬು ಒಂದು ಸೌಮ್ಯವಾದ ಎಚ್ಚರಿಕೆಯಾಗಿದೆ (A mild warning); ಅದರಲ್ಲಿ ಯಾರನ್ನಾದರೂ ಕೊಲ್ಲುವ ಅಪೇಕ್ಷೆಯಾಗಲಿ, ಅಥವಾ ಯಾರಮೇಲಾದರೂ ವೈಯಕ್ತಿಕ ದ್ವೇಷವನ್ನು ವ್ಯಕ್ತ ಮಾಡುವದಾಗಲಿ ಇರುವದಿಲ್ಲ; ಮಾದರಿಗಾಗಿ ಇದೊಂದು ಎಚ್ಚರಿಕೆ ಮಾತ್ರ." ಎಂದು ಹೇಳಿ ಅಸಂಖ್ಯಾಕ ತರುಣರ ಹೃದಯವನ್ನೇ ಬಿಚ್ಚಿತೋರಿಸಿದರು.

ಜನತಾಭಿಪ್ರಾಯಕ್ಕೆ ವಿರೋಧವಾಗಿ ಭಾರತಕ್ಕೆ ಬರಲಿದ್ದ ಸಾಯಮನ್ ಕಮಿಶನ್‌ದವರನ್ನು ಸತ್ಕರಿಸುವ ಪೂರ್ವಸಿದ್ಧತೆಯನ್ನು ಸರಕಾರವು ಬಹಳ ಜಾಗರೂಕತೆಯಿಂದ ಮಾಡತೊಡಗಿತು. ಆ ಕಾಲಕ್ಕೆ ಬಂಗಾಲ ಕೌನ್ಸಿಲಿನಲ್ಲಿ ಸ್ವರಾಜ್ಯ ಪಂಗಡದವರ ಬಹುಮತವಿತ್ತು. ಆದ್ದರಿಂದ ಆ ಕೌನ್ಸಿಲನ್ನು ಮುಕ್ತಾಯಗೊಳಿಸಲು ಎಪ್ರೀಲ ೨೨ನೆಯ ತಾರೀಖಿನ ಎಕ್ಸ್ಟ್ರಾ ಗ್ಯಾಜಿಟನಲ್ಲಿ ಪ್ರಕಟಿಸಲಾಗಿತ್ತು. ಹೊಸ ಚುನಾವಣೆಯಲ್ಲಿ ಸರಕಾರದ ಬಾಲಬಡಿಯುವವರನ್ನೇ ಹೆಚ್ಚಾಗಿ ಆರಿಸಿತರಬೇಕೆಂದು ಬಂಗಾಲ ಸರಕಾರವು ಶತಪ್ರಯತ್ನ ಮಾಡಿತು. ಆದರೆ ಆ ಹೊಸ ಚುನಾವಣೆಯಲ್ಲಿ (ಜೂನ್) ಕಾಂಗ್ರೆಸ ದಳದವರೇ ವಿಜಯಹೊಂದಿದರು. ಅರ್ಧಕ್ಕಿಂತ ಹೆಚ್ಚು ಕಾಂಗ್ರೆಸ ಮೆಂಬರರು ಪ್ರತಿಪಕ್ಷಗಳಿಲ್ಲದೆ ಆರಿಸಿ ಬಂದರು. ಇದರಿಂದ ಕಾಂಗ್ರೆಸ ಬಲದ ಬಿಸಿಯು ಬಂಗಾಲ ಸರಕಾರಕ್ಕೆ ಹತ್ತಿತು. ಇದನ್ನು ನೋಡಿ ಬುದ್ಧಿಗಲಿತ ಉಳಿದ ಪ್ರಾಂತಗಳು ತಮ್ಮ ಕೌನ್ಸಿಲುಗಳ ಅವಧಿಯನ್ನು ಬೆಳೆಸಿದವು. ಹೊಸ ಚುನಾವಣೆಯ ಹವ್ಯಾಸಕ್ಕೆ ಬೀಳಲಿಲ್ಲ.

ಸ್ವರಾಜ್ಯ ಪಕ್ಷವನ್ನು ಹೇಗಾದರೂ ಕುಗ್ಗಿಸಬೇಕೆಂದು ಕಾಯುತ್ತಿದ್ದ ಸರಕಾರವು ಅದರ ಮುಖ್ಯ ಪ್ರಚಾರಕ ಅಂಗವಾದ 'ಫಾರ್ವರ್ಡ'(Forward) ಎಂಬ ಪತ್ರಿಕೆಯ ಮೇಲೆ ಗದೆಯನ್ನೆತ್ತಿತು. ದೇಶಬಂಧು ದಾಸರಿಂದ ಜನ್ಮ

ತಾಳಿದ ಈ ಪತ್ರಿಕೆಯು ಸರಕಾರದ ಕಣ್ಣಲ್ಲಿ ಬಹಳ ದಿವಸಗಳಿಂದ ಒತ್ತುತ್ತಲೇ ಇತ್ತು. ಅದು ನಿಂತಮೇಲೆ 'ನ್ಯೂ ಫಾರ್ವರ್ಡ' ಎಂಬ ಪತ್ರಿಕೆಯು ಜನ್ಮತಾಳಿ ಮುಂದುವರಿಯುವಷ್ಟರಲ್ಲಿಯೇ ಹಾಯ್‌ಕೋರ್ಟಿನ ಆರ್ಡರಿನಿಂದ ಅದು ಹಿಚುಕಲ್ಪಟ್ಟಿತು. ಆಮೇಲೆ ಬೋಸರು 'ಲಿಬರ್ಟಿ' ಎಂಬ ಪತ್ರಿಕೆಯನ್ನು ಹೊರಡಿಸಿ ಅವರ ಮುಖಾಂತರ ಜನಜಾಗ್ರತಿ ಮಾಡಹತ್ತಿದರು.

ನೆಹರು ಕಮಿಟಿಯು ಭಾರತದ ರಾಜ್ಯಘಟನೆಯನ್ನು ತಯಾರಿಸಲು ಮುಂದೆ ಬಂದು ಭಾರತದ ಮರ್ಯಾದೆಯನ್ನು ರಕ್ಷಿಸಿತೆನ್ನಬಹುದು. ಆ ಕಮಿಟಿಯವರ ಔತಣವನ್ನು ಸ್ವೀಕರಿಸಿ ಬೋಸರು ಅನೇಕ ಮಹತ್ವದ ಸಲಹೆಗಳನ್ನು ಕೊಟ್ಟದ್ದಲ್ಲದೆ "ಹಕ್ಕುಗಳ ಪ್ರಕಟನೆ" (Declaration of rights) ಗಾಗಿ ಒತ್ತಾಯ ಪಡಿಸಿದವರು ಇವರೇ.

ಈ ವರ್ಷದಲ್ಲಿ ಅಧ್ಯಕ್ಷಸ್ಥಾನದ ಅನೇಕ ಗೌರವಗಳು ಇವರ ಪಾಲಿಗೆ ಬಂದದ್ದನ್ನು ನೋಡಿದರೆ ಇವರ ಮೇಲೆ ಜನತೆಯ ಪ್ರೀತಿಯು ಎಷ್ಟಿತ್ತೆಂಬುದು ಗೊತ್ತಾಗುವದು. ಬಂಗಾಲ ಪ್ರಾಂತಿಕ ಕಾಂಗ್ರೆಸ ಪರಿಷತ್ತು ರಂಗಪೂರದಲ್ಲಿ ಕೂಡಿತ್ತು. ಅದಕ್ಕೆ ಇವರೇ ಅಧ್ಯಕ್ಷರು. ಪಾಟ್ನಾದ ಪೊಲಟಿಕಲ್ ಕಾನ್ಫರನ್ಸಕ್ಕೂ ಇವರೇ; ಖುಲ್ನಾ (ಬಂಗಾಲ) ದ ವಿದ್ಯಾರ್ಥಿಗಳ ಕಾನ್ಫರನ್ಸಕ್ಕೂ, ಪಂಜಾಬಪ್ರಾಂತದ ವಿದ್ಯಾರ್ಥಿಗಳ ಕಾನ್ಫರನ್ಸ, ಬಿಹಾರ ಮತ್ತು ಮಧ್ಯಪ್ರಾಂತಗಳ ತರುಣರ ಪರಿಷತ್ತುಗಳೆಲ್ಲವುಗಳಿಗೂ ಇವರೇ ಅಧ್ಯಕ್ಷರಾಗಿ ಹೋಗಿದ್ದರು. ಕೂಲಿಕಾರರ ಚಳವಳಿಯಲ್ಲಿಯೂ ಇವರು ಚಟುವಟಿಕೆಯಿಂದಲೂ ಆಸ್ಥೆಯಿಂದಲೂ ಭಾಗವಹಿಸುತ್ತಿದ್ದರು. ಅಖಿಲ ಭಾರತ ಟ್ರೇಡ ಯೂನಿಯನ್ ಕಾಂಗ್ರೆಸದ ಅಧ್ಯಕ್ಷಸ್ಥಾನವು ಪಂಡಿತ ಜವಾಹಿರಲಾಲರ ಅವಧಿ ಮುಗಿದ ಕೂಡಲೆ ೧೯೨೯ ರಲ್ಲಿ ನಾಗಪೂರದಲ್ಲಿ ಇವರ ಕೊರಳಿಗೆ ಬಿದ್ದಿತು.

ಅಕ್ಟೋಬರ ತಿಂಗಳಲ್ಲಿ ಇವರು ಅನೇಕಸಲ ಬಾರಿಸಾಲ ಜಿಲ್ಹೆಗೆ ಹೋಗಿ ಬರಬೇಕಾಯಿತು. ಅಲ್ಲಿ ಸೆರೆಮನೆಯಲ್ಲಿದ್ದ ಸತ್ಯಾಗ್ರಹದ ನಾಯಕರಾದ (ಹಿಂದೆಹೇಳಿದ) ಸತಿನ್‌ಸೇನರನ್ನು ಕಂಡರು. ಸತಿನಸೇನರು ೧೪೦ ದಿವಸಗಳಿಂದ ಅನ್ನತ್ಯಾಗಮಾಡಿದ್ದರು. ಸತ್ಯಾಗ್ರಹವು ನಿಲ್ಲಿಸಲ್ಪಟ್ಟು ಅವರಲ್ಲಿ ಸಂಭಂಧವಿದ್ದ ಎರಡೂ ಪಕ್ಷಗಳಲ್ಲಿ ಒಪ್ಪಂದವಾಗಿತ್ತು. ಎಲ್ಲ ಸತ್ಯಾಗ್ರಹ ಕೈದಿಗಳು ಬಂಧಮುಕ್ತರಾದಾಗ್ಯೂ ಸತಿನ್‌ಸೇನರು ಮಾತ್ರ ಇನ್ನೂ ಒಳಗೆ ಕೊಳೆಯುತ್ತಲೇ ಇದ್ದರು. ಇವರಿಗೆ ಕ್ರಿಮಿನಲ್ ಪ್ರೊಸೀಜರ

ಕೋಡಿನ ೧೧೦ ನೇ ಕಲಮನ್ನು ಲಾಗೂಮಾಡಿದ್ದರು. ಸ್ಥಾನಿಕ ಅಧಿಕಾರಿಗಳು ಇವರನ್ನು ಜಾಮೀನಿನ ಮೇಲೆ ಬಿಡಲೊಪ್ಪಲಿಲ್ಲ. ಮತ್ತು ಇವರ ಆಪ್ತೇಷ್ಟರಿಗೆ ಕೂಡ ಭೆಟ್ಟಿಯ ಅವಕಾಶವನ್ನು ಕೊಡಲಿಲ್ಲ. ಅಧಿಕಾರಿಗಳ ಈ ವಿಚಿತ್ರ ನಡತೆಯು ಸೇನರ ಮನಸ್ಸಿಗೆ ಬಲವಾಗಿ ಹತ್ತಿತು. ಅವರ ಈರೀತಿ ನೀತಿಗಳ ಖಂಡನೆಗಾಗಿ ಅನ್ನತ್ಯಾಗದ ಸತ್ಯಾಗ್ರಹವನ್ನು ಸೇನರು ಕೈಕೊಂಡರು. ಲಾಹೋರ ಜೇಲಿನಲ್ಲಿ ಜತಿನದಾಸರು ಮರಣಹೊಂದಿದಾಗ ಇವರು ಸಹ ಸಾವಕಾಶವಾಗಿ ಸಾವಿನ ದವಡೆಯಲ್ಲಿ ಕಾಲಿಡಹತ್ತಿದ್ದರು. ಬಾರಿಸಾಲ ಜಿಲ್ಹೆಯೆಲ್ಲ ದುಃಖಸಾಗರದಲ್ಲಿ ಮುಳುಗಿತು. ಎಲ್ಲರ ಪ್ರೇಮಕ್ಕೆ ಪಾತ್ರನಾದ ವೀರನನ್ನು ಕಳಕೊಳ್ಳುವ ಈ ಪ್ರಸಂಗಕ್ಕಾಗಿ ಜನತೆಯು ಮರಮರನೆ ಮರುಗಿತು. ೧೪೦ ದಿವಸಗಳ ಅನ್ನತ್ಯಾಗದಿಂದ ದೇಹಾಂಗಗಳೆಲ್ಲ ನಿಸ್ಸತ್ವವಾಗಿದ್ದವು. ಇವರು ಮರಣೋನ್ಮುಖರಾಗಿ ಸಾವುಜೀವಗಳ ನಡುವಿನ ಸ್ಥಿತಿಯಲ್ಲಿದ್ದರು. ಇಷ್ಟಾದರೂ ಅಧಿಕಾರಿಗಳ ಕಠೋರ ಕಲ್ಲೆದೆಯು ಕರಗಲಿಲ್ಲ. ಪ್ರಾಂತದ ಎಲ್ಲ ಮಹಿಳೆಯರ ಮತ್ತು ಪುರುಷರ ದೈನ್ಯದ ಬೇಡಿಕೆಗಳೂ ಬೋರ್ಗಲ್ಲ ಮೇಲೆ ಮಳೆಗರೆದಂತಾಗಿ ಹೋದವು.

ಆದರೆ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರು ಸೇನರ ಭೆಟ್ಟಿಯಾಗಲು ಸುಭಾಸಚಂದ್ರರಿಗೆ ಅವಕಾಶವನ್ನಿತ್ತದ್ದೊಂದು ಆನಂದದ ಸಂಗತಿಯು. ಸುಭಾಸರು ಅನೇಕ ವೇಳೆ ಸೇನರನ್ನು ಕಂಡು ಅನ್ನತ್ಯಾಗವ್ರತದಿಂದ ಅವರನ್ನು ಹಿಂತಿರುಗಿಸಲು ಅನೇಕರೀತಿಯಿಂದ ಬೋಧಿಸಿದರು. ಕೊನೆಗೆ ಅವರ ಮನವೊಲಿಸಿ ಅವರ ಪ್ರಾಣವನ್ನುಳಿಸಿದರು. ಇದಕ್ಕಾಗಿ ಇಡೀ ಜಿಲ್ಹೆಯು ಬೋಸರಿಗೆ ಅತ್ಯಂತ ಉಪಕಾರಬದ್ಧವಾಗಿ ಅವರನ್ನು ಕೊಂಡಾಡಿತು. "ಸತಿನಸೇನರ ಮರಣದಿಂದ ಸರಕಾರದ ಮಾರ್ಗದೊಳಗಿನ ಒಂದು ಮುಳ್ಳು ದೂರವಾಗುತ್ತಿತ್ತು. ಜೀವಂತವಿರುವವರೆಗೆ ಅವರು ಸರಕಾರದವರೊಡನೆ ಹೋರಾಡುವದನ್ನು ಬಿಡುವದಿಲ್ಲ. ಬ್ರಿಟಿಶ ಸಾರ್ವಭೌಮರ ಆಳಿಕೆಯ ಇತಿಹಾಸವು ವಚನಭ್ರಷ್ಟ ಸಂಗತಿಗಳ ಒಂದು ದೊಡ್ಡ ಸರಪಳಿಯಾಗಿದೆ. ಕಾರಣ ಅದಕ್ಕಾಗಿ ಹೆಚ್ಚಿಗೆ ಚಿಂತಿಸಿ ಫಲವೇನು? ಈಗಾಗಲೆ ಭಾರತವು ವೀರ ಜತಿನದಾಸರ ಆತ್ಮವನ್ನು ಆಹುತಿಯಾಗಿ ಕೊಟ್ಟಿದೆ. ಆದ್ದರಿಂದ ಸತಿನಸೇನರಂಥ ಅಲೌಕಿಕ ಕಾರ್ಯಕರ್ತರನ್ನು ಕಳೆದುಕೊಳ್ಳಲು ಅದು ಎಂದೂ ಸಿದ್ಧವಾಗಲಾರದು" ಎಂದು ಆ ಕಾಲಕ್ಕೆ ಬೋಸರು ಹೇಳುತ್ತಿದ್ದರು.

## ಲಾಹೋರ ಕಾಂಗ್ರೆಸ್ (೧೯೨೯ನೆಯ ಡಿಶಂಬರ)

ಈ ಪ್ರಕಾರ ದೇಶದ ತುಂಬ ಹಬ್ಬಿಕೊಂಡಿದ್ದ ಆಳವಾದ ಅಸಮಾಧಾನವು ಮಹಾತ್ಮಾ ಗಾಂಧಿಯವರ ಲಕ್ಷ್ಯಕ್ಕೆ ಬಾರದಿರಲಿಲ್ಲ. ತರುಣರ ಮುಂಗಾಲೋಟದ ಚಟುವಟಿಕೆಗಳು ಅವರ ಕಣ್ಣೆದುರಿಗೆ ಬಂದು ನಿಲ್ಲಹತ್ತಿದವು. ಕಾಂಗ್ರೆಸದ ೪೪ನೆಯ ಅಧಿವೇಶನದ ಅಧ್ಯಕ್ಷಪದವನ್ನು ಅವರು ಜಾಣತನದಿಂದ ನಿರಾಕರಿಸಿ ತರುಣಮುಖಂಡ ಜವಾಹಿರಲಾಲರಿಗೊಪ್ಪಿಸಿದರು. ಆ ಗೌರವದ ಮತ್ತು ಜವಾಬದಾರಿಯ ಸ್ಥಾನವನ್ನು ಜನತೆಯು ಇವರ ಮೇಲೆ ಹೇರಿದಾಗ್ಯೂ ಅದನ್ನು ಇವರು ಕಾಲಜ್ಞಾನಿಗಳಾಗಿ ಜವಾಹಿರಲಾಲರ ಕೊರಳಿಗೆ ಕಟ್ಟಿದರು. "ನನಗೂ ಮತ್ತು ಈಗ ತಲೆಎತ್ತುತ್ತಿರುವ ತರುಣರಿಗೂ ನಡುವೆ........ ಅದೆ" ಎಂದು ತಮ್ಮ ಎಂಗಇಂಡಿಯಾ ಪತ್ರಿಕೆಯಲ್ಲಿ ಬರೆದು ಆ ಕಾಲಕ್ಕೆ ಜವಾಹಿರಲಾಲರನ್ನುಳಿದು ಇನ್ನೊಬ್ಬರು ಯೋಗ್ಯರಾಗಲಾರರೆಂದು ಸಮರ್ಥಿಸಿದರು. ಈ ಅಧಿವೇಶನದಲ್ಲಿ ಕಾಂಗ್ರೆಸ ಧ್ಯೇಯವು ವಸಾಹತಿ ಸ್ವರಾಜ್ಯದಿಂದ ಸಂಪೂರ್ಣ ಸ್ವಾತಂತ್ರ್ಯಕ್ಕೆ ಬದಲಾಯಿತು. ಕಲ್ಕತ್ತಾ ಅಧಿವೇಶನದಲ್ಲಿ ಸುಭಾಸಚಂದ್ರರು ತಂದ ಈ ಠರಾವನ್ನು ವಿರೋಧಿಸಿದ ಮಹಾತ್ಮರೇ ಇಂದು ಆ ಠರಾವನ್ನು ಮಂಡಿಸಿದರು. ಆಗ ಅಧ್ಯಕ್ಷರಾದ ಪಂ. ಮೋತಿಲಾಲರೇ ಅದಕ್ಕೆ ಅನುಮೋದನವನ್ನಿತ್ತರು. ಇದೊಂದು ಮಹತ್ಕಾರ್ಯ ಸಾಧನೆಯೇ ಎಂದು ಹೇಳಬಹುದು. ಆದರೆ ಈ ಅಧಿವೇಶನದಲ್ಲಿ ಉಜ್ವಲ ಕಾರ್ಯಕ್ರಮಗಳೇನೂ ಮುಂದೆ ಬರಲಿಲ್ಲ. ಮಹಾತ್ಮಾ ಗಾಂಧಿಜಿಯವರು ಮಂಡಿಸಿದ ಸಂಪೂರ್ಣ ಸ್ವಾತಂತ್ರ್ಯದ ಠರಾವಿನ ಮೇಲೆ ಬೋಸರು ತಮ್ಮದೊಂದು ಉಪಸೂಚನೆಯನ್ನು ತಂದರು. ಬ್ರಿಟಿಶ ಸರಕಾರಕ್ಕೆ ಸರಿಸಮಾನವಾಗಿ ಕಾಂಗ್ರೆಸ ಸರಕಾರ ಸ್ಥಾಪನೆಯಾಗಬೇಕೆಂಬುದೇ ಅವರ ಉದ್ದೇಶವಾಗಿತ್ತು. ತಮ್ಮ ಉಪಸೂಚನೆಯನ್ನು ಸಮರ್ಥಿಸುತ್ತ ಬೋಸರು ಆಗ ಚಿಕ್ಕದೊಂದು ಉಗ್ರಭಾಷಣ ಮಾಡಿದರು.

"'ಸ್ವರಾಜ್ಯ'ವೆಂದರೆ ಬ್ರಿಟಿಶರ ಸಂಬಂಧವನ್ನು ಪೂರಾ ಕಡಿದು ಹಾಕಿದ ಸಂಪೂರ್ಣ ಸ್ವಾತಂತ್ರ್ಯವೆಂದು ಈ ಕಾಂಗ್ರೆಸ್ಸು ಸಾರುತ್ತದೆ. ಸಂಪೂರ್ಣ ಸ್ವಾತಂತ್ರ್ಯ ಗಳಿಸುವದಕ್ಕಾಗಿ ಒಂದು ಕಡೆಯಿಂದ ಬಹಿಷ್ಕಾರ, ಕರನಿರಾಕರಣೆ, ಕಾಯಿದೆಭಂಗ ಮುಂತಾದ ನಾಶಕಾರಕ ಕಾರ್ಯಕ್ರಮಗಳ ಜೊತೆಯಲ್ಲಿ ಮತ್ತೊಂದು ಕಡೆಯಿಂದ ವಿಧಾಯಕ ಕಾರ್ಯಕ್ರಮವನ್ನು ಕೈ

ಕೊಳ್ಳಲು ಬ್ರಿಟಿಶ ಸರಕಾರಕ್ಕೆ ಸರಿಬಾಜುವಿನಲ್ಲಿ ಕಾಂಗ್ರೆಸ ಸರಕಾರವನ್ನು ಸ್ಥಾಪಿಸತಕ್ಕದ್ದು. ಇದಕ್ಕಾಗಿ ನಮ್ಮಲ್ಲಿ ಹೆಚ್ಚು ಸಂಘಟನೆಗಳಾಗಬೇಕು. ವಿಶೇಷತಃ ತರುಣರೂ ರೈತರೂ ಕೂಲಿಕಾರರೂ ಏಕಮುಖದಿಂದ ಕಾರ್ಯ ಪ್ರವರ್ತರಾಗಬೇಕು. ಕಾಂಗ್ರೆಸ ಕಾರ್ಯಕ್ರಮಗಳನ್ನು ಹೆಚ್ಚು ಲಕ್ಷ್ಯ ಪೂರ್ವಕ ಸಾಗಿಸಬೇಕಾದರೆ ಲೆ. ಕೌನ್ಸಿಲ್, ಅಸೆಂಬ್ಲಿ, ಸರಕಾರದಿಂದ ನಿರ್ಮಿತವಾದ ಯಾವದೇ ಕಮಿಟಿ, ಪೋಸ್ಟ ಟ್ರಸ್ಟ, ಲಾ ಕೋರ್ಟ ಮೊದ ಲಾದವುಗಳನ್ನೆಲ್ಲ ತ್ಯಜಿಸಬೇಕು. ಬಹಿಷ್ಕಾರವನ್ನು ಬಲಪಡಿಸಬೇಕೆಂದರೆ ಬರೇ ಬ್ರಿಟಿಶ ಅರಿವೆ ಅಥವಾ ಮಾಲನ್ನಷ್ಟೇ ಬಿಡಬೇಕೆಂತಲ್ಲ. ಅರ್ಧ ಸರ ಕಾರೀ ಸಂಸ್ಥೆಗಳಾದ ಮುನಶಿಪಾಲಿಟಿ, ಲೋಕಲ್ ಬೋರ್ಡುಗಳನ್ನು ಕೂಡ ತ್ಯಜಿಸಬೇಕು. ನಾನು ಉಗ್ರಪಕ್ಷದವನು. "ಎಲ್ಲವೂ ಬೇಕು ಇಲ್ಲವೇ ಏನೂ ಬೇಡ" ವೆಂಬುದು ನನ್ನ ತತ್ವವು ( I am an Extremist. My principle is, All or None ). ಸಾರ್ವಜನಿಕ ಸಂಸ್ಥೆಗಳು ಬೇಕೆನ್ನು ವದಾದರೆ ಎಲ್ಲ ಸಂಸ್ಥೆಗಳನ್ನೂ ನಮ್ಮ ಸ್ವಾಧೀನಪಡಿಸಿಕೊಳ್ಳಬೇಕು. ಇಲ್ಲ ವಾದರೆ ಅವುಗಳ ಸಮೀಪಕ್ಕೆ ಸಹ ಹೋಗಕೂಡದು." ಎನ್ನುತ್ತ ಚಕ್ರ ಗೋಷ್ಠಿಯ ವಿಷಯಕ್ಕೆ ಮಾತೆತ್ತಿ ಅದನ್ನು ಬಲವಾಗಿ ಖಂಡಿಸಿದರು. ಭಾರತದ ನಿಜವಾದ ಹಿತಮಾಡಬೇಕನ್ನುವ ಉದ್ದೇಶವು ಬ್ರಿಟಿಶರಲ್ಲಿ ಕಂಡು ಬರುವದಿಲ್ಲ; ತೋರಿಕೆಗೆ ಸ್ವಾತಂತ್ರ್ಯದ ತಿರುಳನ್ನು ನಮಗೆ ಕೊಟ್ಟಂತೆ ಮಾಡಿ, ನಿಜವಾದ ರಾಜ್ಯಸೂತ್ರಾಧಿಕಾರವನ್ನು ಮತ್ತಿಷ್ಟು ಭದ್ರಪಡಿಸಿ ಕೊಳ್ಳುವ ಹಂಚಿಕೆಯ ಪರಿಣಾಮವೇ ಈ ಪರಿಷತ್ತಾಗಿದೆ, ಎಂದು ಸಾರಿದರು.

"ಕಲ್ಕತ್ತೆಯಲ್ಲಿ ಬಿದ್ದು ಹೋದ ಸಂಪೂರ್ಣ ಸ್ವಾತಂತ್ರ್ಯದ ಠರಾವು ಲಾಹೋರದಲ್ಲಿ ಮಹಾತ್ಮಾ ಗಾಂಧಿಯವರಿಂದಲೇ ಮಂಡಿಸಲ್ಪಟ್ಟಂತೆ ನನ್ನ ಉಪಸೂಚನೆಗಳಾದರೂ ಈ ವರ್ಷವಲ್ಲದಿದ್ದರೂ ಮುಂದಿನ ವರ್ಷವಾದರೂ ಬೆಂಬಲವನ್ನು ದೊರಕಿಸುವವೆಂದು ನನ್ನ ನಂಬುಗೆ ಇದೆ.

ದಿನದಿನವೂ ಬದಲಾಗುತ್ತಿರುವ ಪರಿಸ್ಥಿತಿಯನ್ನೂ ಜನತೆಯ ಹಂಬಲ ಗಳನ್ನೂ ನಿರೀಕ್ಷಿಸಿ ನನ್ನ ಸೂಚನೆಗಳನ್ನು ಎಲ್ಲರೂ ಮನ್ನಿಸುವಿರೆಂದು ಆಶೆ. ತರುಣ ಸಮಾಜವಂತೂ ನನ್ನ ಬೆಂಬಲಕ್ಕಾಗಿ ಎಂದಿನಿಂದಲೂ ಸಿದ್ಧವಿದೆ."

ಲಾಹೋರ ಕಾಂಗ್ರೆಸ ಅಧಿವೇಶನವು ಮುಗಿದನಂತರ ೧೯೩೦ನೆಯ ಇಸ್ವಿ ಜಾನೇವಾರೀ ೪ನೆಯ ತಾರೀಖಿನ ದಿನ "ನವಜವಾನ ಭಾರತ ಸಭೆಯ"

ವತಿಯಿಂದ ಅಲ್ಲಿಯ ನಾಗರಿಕರಿದುರಿಗೆ ಕಾಂಗ್ರೆಸಿನ ಹೊಸ ಧ್ಯೇಯ ಮತ್ತು ಕಾರ್ಯಕ್ರಮಗಳ ಗುಟ್ಟನ್ನೆಲ್ಲ ಸ್ಪಷ್ಟವಾಗಿ ಹೇಳಿದರು. ಜನತೆಯಲ್ಲಿ ಕಂಡು ಬರುವ ನವೀನದೃಷ್ಟಿ ಮತ್ತು ನವಸ್ವಾತಂತ್ರ್ಯದಾಹಗಳನ್ನು ಅರುಹಿ ಸ್ವರಾಜ್ಯದ ನಿಜವಾದ ಅರ್ಥವನ್ನು ಬೀರಿದರು. ಸಮಾಜದಲ್ಲೆಲ್ಲ ಬದಲಾವಣೆ ಹೊಂದುವ ಹಂಬಲವು ಬೆಳೆಯಹತ್ತಿದಾಗೆಲ್ಲ ಕ್ರಾಂತಿಗಳಾಗುವದು ಸ್ವಾಭಾವಿಕವು. ಕ್ರಾಂತಿಗಳಿಗೆ ಬೆದರುವ ಕಾರಣವಿಲ್ಲ. ಕ್ರಾಂತಿಯು ನೈಸರ್ಗಿಕ ನೇಮವು. ಅದರಿಂದಲೇ ನಮಗೆ ಸ್ವರಾಜ್ಯವು. ರಾಜಕೀಯ ದೃಷ್ಟಿಯೊಂದರಲ್ಲಿ ಮಾತ್ರ ನಮಗೆ ಸ್ವಾತಂತ್ರ್ಯವು ಬೇಕೆಂತಲ್ಲ. ಸಾಮಾಜಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯಗಳೂ ನಮಗೆ ಅವಶ್ಯವಾಗಿ ಬೇಕು ಎಂದರು.

ಕಾಂಗ್ರೆಸ ಸಂಸ್ಥೆಯವರು ಬ್ರಿಟಿಶ ಸರಕಾರದವರೊಡನೆ ವಸಾಹತು ಸ್ವರಾಜ್ಯ ( Dominion Status ) ದ ಸಲುವಾಗಿ ಒಪ್ಪಂದ ಮಾಡಿಕೊಳ್ಳಕೂಡದು; ಒಂದುವೇಳೆ ಹಾಗೆ ಮಾಡಿದರೆ ತರುಣ ಸಮಾಜವೆಲ್ಲ ವಿರೋಧಿಸದಿರಲಾರದು. ತರುಣರು ಕಾಂಗ್ರೆಸದಲ್ಲಿ ಉಗ್ರಪಂಗಡವಾದಿಗಳು; ಇಂಥ ಒಪ್ಪಂದದಿಂದ ಅವರೆಂದಿಗೂ ತೃಪ್ತಿಹೊಂದಲಾರರು. ಅವರು ತಮ್ಮ ವಿಚಾರಗಳನ್ನು ಜನತೆಯಲ್ಲಿ ಪ್ರಚಾರಮಾಡಿ ರೈತರನ್ನೂ ಕೂಲಿಕಾರರನ್ನೂ ಸಂಘಟನೆಮಾಡಿ ತಮ್ಮ ವಿಚಾರಗಳಿಗೆ ಬೆಂಬಲವನ್ನು ಪಡೆಯುವರು ಎಂದು ಹೇಳಿದರು. ಅಲ್ಲದೆ ಸ್ವತಂತ್ರರಾಗಿ ವಿಚಾರಿಸೋಣ. ಅವಶ್ಯಬಿದ್ದರೆ ಸಾಹಸಿಗರಾಗಿ ವಿಚಾರಿಸೋಣ. "Let us think freely and if necessary dangerously" ವಿಚಾರ ಸ್ವಾತಂತ್ರ್ಯದಿಂದಲೇ ಕಾಂಗ್ರೆಸಿಗೆ ಮಹತ್ವವು ಬಂದಿದೆ. ಭಾರತದ ಮುಂದಿನ ಬಾಳು ತರುಣರ ವಿಚಾರ ಮತ್ತು ಕಾರ್ಯಗಳ ಮೇಲೆಯೇ ಅವಲಂಬಿಸಿದೆ ಎಂದು ಹೇಳುತ್ತಾ ತರುಣರಲ್ಲಿ ಹೊಸ ಹುರುಪನ್ನು ತುಂಬಿದರು.

ಕಾಂಗ್ರೆಸದಲ್ಲಿ ತಮ್ಮದೊಂದು ಡೆಮೊಕ್ರ್ಯಾಟಿಕ್ ಪಕ್ಷವನ್ನು ಸ್ಥಾಪಿಸಿ ತಾವೇ ಅದರ ಸೆಕ್ರೆಟರಿಗಳಾಗಿ ಡಾಕ್ಟರ ಆಲಮ್ ಮೊದಲಾದವರೊಡನೆ ಕೂಡಿ ಕೆಲಸಮಾಡಿದರು. ಈ ಪಕ್ಷವು ಕಾಂಗ್ರೆಸಿನೊಳಗಿನದೇ ಇದ್ದು ಕಾಂಗ್ರೆಸು ಸಂಪೂರ್ಣ ಸ್ವಾತಂತ್ರ್ಯದ ಗುರಿಯಿಂದ ಹಿಂತೆಗೆಯದಂತೆ ನೋಡಿಕೊಳ್ಳುವದೂ ಮತ್ತು ಅವಶ್ಯವಿದ್ದ ಇನ್ನೂ ಅನೇಕ ಸುಧಾರಣೆಗಳನ್ನು ಏರ್ಪಡಿಸುವದೂ ಇದರ ಉದ್ದೇಶವಾಗಿತ್ತು.

ಲಾಹೋರದಿಂದ ಕಲ್ಕತ್ತೆಗೆ ಮರಳಿ ಬಂದಮೇಲೆ ಕಾಂಗ್ರೆಸಿನ ಅಧಿವೇಶನದ ಮಹತ್ವವನ್ನೂ ಅಲ್ಲಿ ನಿರ್ಣಯಿಸಲ್ಪಟ್ಟ ಗೊತ್ತುವಳಿಗಳ ಗುಟ್ಟನ್ನೂ ಪ್ರಾಂತದಲ್ಲೆಲ್ಲ ತಿಳಿಸಿಹೇಳಿದರು. ಸ್ಫೂರ್ತಿದಾಯಕವೂ ಉಜ್ವಲವೂ ಆದ ಕಾರ್ಯಕ್ರಮವನ್ನು ತಮ್ಮ ಪ್ರಾಂತದಲ್ಲಿ ಏರ್ಪಡಿಸಿದ್ದರು.

## ಸ್ವಾತಂತ್ರ್ಯ ದಿನಾಚರಣೆ; ಬೋಸರ ಕೈದು

"೧೯೩೦ ನೇ ಇಸ್ವಿ ಜಾನೇವಾರಿ ೨೬ ನೇ ತಾರೀಖು 'ಸ್ವಾತಂತ್ರ್ಯ ದಿನ' ವೆಂದು ಹಿಂದುಸ್ತಾನದ ತುಂಬೆಲ್ಲ ಆಚರಿಸಲ್ಪಡಬೇಕು. ಪ್ರತಿಯೊಬ್ಬ ಭಾರತೀಯನು ಪರಕೀಯರ ಆಳಿಕೆಯಿಂದ ಆಗುತ್ತಿರುವ ಸತ್ಯನಾಶವನ್ನು ನಿಷೇಧಿಸಿ, ಅಂದಿನಿಂದ ತಾನು ಸ್ವತಂತ್ರನೆಂದೂ ಅದನ್ನು ಪ್ರಕಟಿಸುವದು ತನ್ನ ಮತ್ತು ತನ್ನ ಜನಾಂಗದ ಹಕ್ಕೆಂದೂ ಅಂದು ಪ್ರತಿಜ್ಞೆಗೈಯಬೇಕು" ಎಂಬುದು ವಿಶ್ವಭಾರತ ಸ್ವಾತಂತ್ರ್ಯ ಪ್ರಚಾರದ ಕಾರ್ಯಕ್ರಮದಲ್ಲೊಂದಾಗಿತ್ತು. ಆದರೆ ಸರಕಾರದವರು ಬೋಸರಿಂದ ಈ ಕಾರ್ಯವನ್ನು ಸಾಧಿಸಗೊಡಲಿಲ್ಲ. ೨೩ ನೆಯ ತಾರೀಖಿನ ದಿನವೇ ಅವರನ್ನು ಅವರ ೧೧ ಜನ ಪ್ರಮುಖ ಸಂಗಡಿಗರೊಡನೆ ಬಂಧಿಸಿ ಸೆರೆಮನೆಗಟ್ಟಿದರು. ಸುಭಾಸಚಂದ್ರರಿಗೆ ೧ ವರ್ಷ ಕಠಿಣ ಶಿಕ್ಷೆಯನ್ನಿತ್ತು ಕೈಮುರಿದಂತೆ ಮಾಡಿ ಕೂಡ್ರಿಸಿದರು. ಆದರೇನು? ಆ ದಿನದ ಕಾರ್ಯಕ್ರಮವು ಹಿಂದುಸ್ತಾನದ ತುಂಬೆಲ್ಲ ಬಹಳ ವೈಭವದಿಂದ ನೆರವೇರಿತು. ಬಂಗಾಲದಲ್ಲಂತೂ ಅದರ ವಿಜೃಂಭಣೆಗೆ ಮೇರೆಯೇ ಇರಲಿಲ್ಲ. ಸೆರೆಮನೆ ಗೋಡೆಗಳೊಳಗಿಂದಲೇ ಹೊರಗಿನವರ ಹೃದಯದಲ್ಲಿ ನವಚೈತನ್ಯ ಸ್ಫೂರ್ತಿಗಳನ್ನು ತುಂಬಿ ಈ ನಾಯಕರು ಆ ದಿನದ ಕಾರ್ಯಕ್ರಮವನ್ನು ಯಶಸ್ವಿಯಾಗುವಂತೆ ಮಾಡಿದರು.

ಆಗ ಮಹಾತ್ಮಾ ಗಾಂಧಿಜಿಯವರು "ಸುಭಾಸಚಂದ್ರ ಮತ್ತು ಉಳಿದ ಗೆಳೆಯರಿಗೆ ನನ್ನ ಧನ್ಯವಾದಗಳು" ಎಂದು ತಂತಿ ಕಳುಹಿದರು. ಪಂಡಿತ ಜವಾಹಿರಲಾಲ, ಶ್ರೀನಿವಾಸ ಅಯ್ಯಂಗಾರ ಮೊದಲಾದವರು ಸ್ತುತಿಪರವಾದ ಸಂದೇಶಗಳನ್ನು ಕಳುಹಿಸಿದರು. ಅವರಿಗೆ ಸ್ವಾತಂತ್ರ್ಯದೇವಿಯ ವೇದಿಕೆಯಲ್ಲಿ ಮೊದಲನೆಯ ಆಹುತಿ, "The first offering at the altar of Independence" ಎಂದು ಕರೆದರು. ತಾಯ್ನಾಡಿನ ಸ್ವಾತಂತ್ರ್ಯಗಳಿಸುವದಕ್ಕಾಗಿ ಮುಡುಪಿಟ್ಟು ರಕ್ಷಿಸಿದ ಸುಭಾಸಚಂದ್ರರನ್ನು ಕೆಲಕಾಲದವರೆಗಾದರೂ ಕಳಕೊಂಡು ಬಂಗಾಲವು ಬಹಳ ಮರುಗಿತು.

## ಸವಿನಯ ಶಾಸನೋಲ್ಲಂಘನ ಚಳವಳಿ

ಮೊದಮೊದಲು ಸವಿನಯ ಕಾಯಿದೆಭಂಗ ಚಳವಳಿಯನ್ನು ಸುರು ಮಾಡುವ ವಿಷಯದಲ್ಲಿ ಮಹಾತ್ಮರು ಅನಿಶ್ಚಿತರಾಗಿದ್ದರು. ಸಹಕಾರದ ಎಲ್ಲ ಮಾರ್ಗಗಳನ್ನೂ ಅವರು ಪ್ರಯೋಗಿಸಿ ನೋಡಿದರು. ತಮ್ಮ ೧೧ ಸಹಕಾರದ ಕರಾರುಗಳನ್ನು ಸರಕಾರಕ್ಕೆ ಕಳುಹಿದ್ದು ಕೂಡ ವ್ಯರ್ಥವಾಯಿತು. ಆಮೇಲೆ ಮಿ. ರೆಜಿನೋಲ್ಡರೆಂಬ ಆಂಗ್ಲೇಯರೊಡನೆ ವ್ಹಾಯಿಸರಾಯರಿಗೊಂದು ಪತ್ರವನ್ನು ಕಳುಹಿಸಿದರು. ತಮ್ಮ ಬೇಡಿಕೆಗೆ ಸರಿಯಾದ ಉತ್ತರವು ದೊರೆಯದಿದ್ದರೆ ತಾವು ಸವಿನಯ ಕಾಯಿದೆಭಂಗವನ್ನು ಪ್ರಾರಂಭಿಸಬೇಕಾಗುವದೆಂದು ಅವರಲ್ಲಿ ಬರೆದಿದ್ದರು. ಜನತೆಯ ಪ್ರತಿನಿಧಿಯಾಗಿ ನಮ್ರತೆಯಿಂದ ಶಾಂತತೆಗಾಗಿ ಕೋರಿದ್ದರು. ತಾವು ಶಾಂತತಾದೇವಿಯ ಪರಮಭಕ್ತರೆಂದು ಸಾರಿದ್ದರು. ಆದರೇನು? ಆಳರಸರು ಆ ಪತ್ರವನ್ನು ಚಲ್ಲಿಕೊಟ್ಟರು. ವ್ಹಾಯಿಸರಾಯರ ಸೆಕ್ರೆಟರಿಯವರು ಮಹಾತ್ಮರಿಗೊಂದು ಒರಟು ಉತ್ತರವನ್ನು ಕೊಟ್ಟರು. “ಆಡಳಿತದ ಶಾಂತತೆ ಸುವ್ಯವಸ್ಥೆಗಳಿಗೆ ಬಾಧೆ ತರುವದರಲ್ಲಿ ಪರಿಣಮಿಸುವ ಕಾರ್ಯಕ್ರಮವನ್ನು ನೀವು ವಹಿಸಿದ್ದೀರಿ. ಅದಕ್ಕಾಗಿ ನಾವು ಯೋಗ್ಯ ತಡೆಯನ್ನು ಮಾಡಬೇಕಾದೀತು.” ಎಂದು ಬೆದರಿಕೆಯ ಕೈಯನ್ನು ಮುಂದೆ ಮಾಡಿದರು. ಇದರ ಮೇಲಿಂದ ಹೃದಯ ಪರಿವರ್ತನವು ಸರಕಾರಕ್ಕೆ ಬೇಡಾಗಿತ್ತೆಂದೆನ್ನಬಹುದು. ಆದ್ದರಿಂದ ‘ಕಾಯಿದೆಭಂಗ’ ಚಳವಳಿಯು ಸುರುವಾಗಲೇ ಬೇಕಾಯಿತು. ಗಾಂಧಿಜಿಯವರು ತಮ್ಮ ಆಶ್ರಮದ ೭೯ ಜನರೊಡನೆ ಸ್ವತಃ ಕಾಲ್ನಡಿಗೆಯಿಂದ ದಾಂಡೀ ಯಾತ್ರೆಯನ್ನು ಕೈಕೊಂಡು ಸ್ವಾತಂತ್ರ್ಯ ದಾಹದ ವಿದ್ಯುತ್ಪ್ರವಾಹವನ್ನು ಜನತೆಯ ಹೃದಯದಲ್ಲಿ ತುಂಬಿ ಇಡೀ ಭರತಖಂಡವನ್ನೆಲ್ಲ ನವ ಸ್ಫೂರ್ತಿಯಿಂದ ಕುಣಿಯ ಹಚ್ಚಿದರು.

## ಬಂಗಾಲದ ಕಾರ್ಯ

ಕಾಯಿದೆಭಂಗ ಚಳವಳಿಯು ಪ್ರಾರಂಭವಾಗುವ ಪೂರ್ವದಲ್ಲಿ ನಮ್ಮ ತರುಣ ವೀರನಾಯಕರು ತಮ್ಮ ಸೈನಿಕರೊಂದಿಗೆ ಸೆರೆಮನೆ ಸೇರಿದ್ದರಿಂದ ಬಂಗಾಲವು ಪರದೇಶಿಯಾಗಿತ್ತು. ಮುಂಬೈ ಪ್ರಾಂತವು ಈ ಚಳವಳಿಯ ಮಧ್ಯಬಿಂದುವಾಗಿತ್ತು. ಪಂ. ಮೋತಿಲಾಲ ನೆಹರು, ಮದನಮೋಹನ ಮಾಲವೀಯ, ಸರೋಜಿನಿದೇವಿಯರಂಥ ಮುಖಂಡರು ಅಲ್ಲಿ ಮಾರ್ಗದರ್ಶಕರಾಗಿದ್ದರು. ಆದರೆ ಬಂಗಾಲವು ಮಾರ್ಗದರ್ಶಕರಿಲ್ಲದಿದ್ದರೂ ಮುಂದೆ ನುಗ್ಗಿ ಮುಂಬೈ

ಪ್ರಾಂತವನ್ನು ಹಿಂದೆಹಾಕಿತು. ಪರದೇಶೀ ಮಾಲಿನ ಬಹಿಷ್ಕಾರದಲ್ಲಿ ಮುಂಬೈಗಿಂತಲೂ ಹೆಚ್ಚು ಯಶಸ್ವಿಯಾಯಿತು. ಆ ಕಾಲಕ್ಕೆ ಮುಂಬೈಯಿಂದ ೧೩,೦೦೦ ಜನರು ಸೆರೆಮನೆ ಕಂಡರೆ, ಬಂಗಾಲದಿಂದ ೧೫,೦೦೦ ಜನರು ಸೇರಿ ಬಂಗಾಲಕ್ಕೆ ಕೀರ್ತಿಯನ್ನು ಗಳಿಸಿದರು. ಬಂಗಾಲದಲ್ಲಿ ನಾಯಕರಿಲ್ಲದಿದ್ದರೂ ಕೂಡ ಚಳವಳಿಯು ವಿಸ್ತ್ರತವಾಗಿ ಹಬ್ಬುತ್ತ ಸ್ಥಿರವಾಗಿ ನೆಲೆಸತೊಡಗಿತು. ದೇಶದಲ್ಲಿ ಇಷ್ಟೆಲ್ಲ ಸ್ಫೂರ್ತಿದಾಯಕ ಕಾರ್ಯಗಳು ನಡೆದಾಗ ನಮ್ಮ ಚರಿತ್ರ ನಾಯಕರು ಸೆರೆಮನೆಯಲ್ಲಿಯೇ ಕೊಳೆಯುತ್ತಿದ್ದರು.

ಸೆರೆಮನೆಯಲ್ಲಿದ್ದಾಗಲೇ ಇವರು ಆಗಸ್ಟ ತಿಂಗಳಲ್ಲಿ ಕಲ್ಕತ್ತಾ ನಗರ ಸಭೆಯ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಈ ಸಂಗತಿಯಿಂದ ಅವರ ಮೇಲಿದ್ದ ಜನತಾ ಪ್ರೇಮವು ವ್ಯಕ್ತವಾಗುತ್ತದೆ. ಕಲ್ಕತ್ತಾ ಕಾರ್ಪೊರೇಶನ್ದ ಅಧ್ಯಕ್ಷ ಸ್ಥಾನದಂಥ ಅಧಿಕಾರವು ಇಷ್ಟು ಚಿಕ್ಕ ವಯಸ್ಸಿನವರಾದ ಸುಭಾಸಚಂದ್ರರ ಪಾಲಿಗೆ ಬಂದದ್ದು ಅವರಲ್ಲಿರುವ ಅದ್ವಿತೀಯ ಕಾರ್ಯನಿರ್ವಾಹಕಶಕ್ತಿಯನ್ನೂ ನಾಗರಿಕರು ಅವರಲ್ಲಿಟ್ಟಿದ್ದ ನಂಬುಗೆಯನ್ನೂ ತೋರಿಸುತ್ತದೆ. ಮುಂದೆ ಸಪ್ಟಂಬರ ತಿಂಗಳಲ್ಲಿ ಇವರು ಬಿಡುಗಡೆಹೊಂದಿ ಹೊರಗೆ ಬಂದರು. ಆಮೇಲೆ ತಮ್ಮ ಪಾಲಿಗೆ ಬಂದಿದ್ದ ನಗರ ಸಭಾಧ್ಯಕ್ಷಸ್ಥಾನವನ್ನು ವಹಿಸಿದರು. ಆಗ ಎರಡುನೂರಕ್ಕಿಂತ ಹೆಚ್ಚು ಸಂಸ್ಥೆಗಳು ಇವರನ್ನು ಗೌರವದಿಂದ ಮನ್ನಿಸಿ ಮಾನಪತ್ರಗಳನ್ನು ಕೊಟ್ಟವು. ಕಲ್ಕತ್ತಾ ನಗರದಲ್ಲಿ ಪರದೇಶಿ ಮಾಲಿನ ಬಹಿಷ್ಕಾರವನ್ನು ಬಲಪಡಿಸಿ, ಸ್ವದೇಶೀ ಪ್ರಚಾರವನ್ನು ಬಹಳವಾಗಿ ಹೆಚ್ಚಿಸಿದರು.

ಸೆರೆಮನೆಯಿಂದ ಹೊರಗೆ ಬಂದಮೇಲೆ ೧೯೩೧ನೆಯ ಜಾನೇವಾರಿ ತಿಂಗಳಲ್ಲಿ ಒಂದು ಪ್ರಚಂಡ ಕಾರ್ಯಕ್ರಮವನ್ನು ಹಾಕಿಕೊಂಡು ಉತ್ತರ ಬಂಗಾಲವನ್ನೆಲ್ಲ ಸುತ್ತುಹಾಕಿದರು. ಮುಖ್ಯ ಸ್ಥಳಗಳನ್ನೆಲ್ಲ ಸಂದರ್ಶಿಸಿ ಹೊಸ ಚೈತ್ರನ್ಯವನ್ನು ಜನತೆಯಲ್ಲಿ ಬೀರಿದರು. ಈ ಸಂಚಾರದ ಕಾಲಕ್ಕೆ ಅವರಮೇಲೆ ಕ್ರಿ. ಪ್ರೊ. ಕೋ. ೧೪೪ ನೆಯ ಕಲುಮಿನ ಬಾಣಪ್ರಯೋಗವಾಯಿತು. ಮಾಲ್ಡಾಕ್ಕೆ ಹೋಗಕೂಡದೆಂದು ಅವರ ಮೇಲೆ ಆಮ್ನೂರಾ ಸ್ಟೇಶನ್‌ದಲ್ಲಿ ನೋಟೀಸ ಜಾರಿಮಾಡಿದರು. ಅದನ್ನು ಪಾಲಿಸುವದರಲ್ಲಿ ಅರ್ಥವಿಲ್ಲೆಂದು ಬೋಸರು ಅದನ್ನು ನಿರಾಕರಿಸಿದರು. ಕೂಡಲೆ ಅವರು ಕೈದುಮಾಡಲ್ಪಟ್ಟು ರೇಲ್ವೆಸ್ಟೇಶನ್ ವೇಟಿಂಗರೂಮಿನಲ್ಲಿ ಅವರ ಚೌಕಸಿಯಾಯಿತು. ಅವರಿಗೆ ಒಂದುವಾರ ಸಾದಾಶಿಕ್ಷೆಯು ವಿಧಿಸಲ್ಪಟ್ಟಿತು. ಅಲ್ಲಿಂದ ಅವರು ರಾಜಶಾಹಿ

ಜೇಲಿಗೆ ಸಾಗಿಸಲ್ಪಟ್ಟರು. ದಾರಿಯಲ್ಲಿ ಹತ್ತಿದ ಸ್ಟೇಶನ್ನುಗಳಲ್ಲೆಲ್ಲ ಇವರನ್ನು ಕಾಣಲು ಜನಸಂದಣಿಯು ತೆರಪಿಲ್ಲದಷ್ಟು ನೆರೆಯುತ್ತಿತ್ತು. ರಾಜಶಾಹಿಯಲ್ಲಿ ಕೂಡಿದ ಜನಸಾಗರದಿಂದ ಸರಕಾರವು ಬೆದರಿ, ಅದಕ್ಕೆ ಏನೂ ತೋಚದಂತಾಯಿತು. ರೇಲ್ವೆಸ್ಟೇಶನ್ ಬರುವ ಮುಂಚಿತವಾಗಿಯೇ ದೂರದಲ್ಲಿ ಅವರನ್ನು ಇಳಿಸಿ ಗುಪ್ತವಾಗಿ ಅವರನ್ನು ಜೇಲಿಗೆ ಸಾಗಿಸಿದರು. ರಾಜಶಾಹಿ ಜೇಲಿನಲ್ಲಿ ಅವರನ್ನಿಡುವದು ಜಾಣತನದ್ದಲ್ಲವೆಂದು ಬಗೆದು ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರಾದ **ಜೆ. ಜೆ. ನೆನಲ್**ರು ಮಧ್ಯರಾತ್ರಿಯಲ್ಲಿ ಅವರನ್ನು ಎಬ್ಬಿಸಿ ಅಲ್ಲಿಂದ ಮೂವತ್ತು ಮೈಲುಗಳ ಮೇಲಿರುವ ರೇಲ್ವೆಸ್ಟೇಶನ್ನಿಗೆ ತಮ್ಮ ಸ್ವಂತ ಕಾರಿನಲ್ಲಿಯೇ ಸಾಗಿಸಿದರು. ಅಲ್ಲಿಂದ ಸಾಧ್ಯವಿದ್ದಷ್ಟು ವೇಗದಿಂದ ಕಲ್ಕತ್ತಾ ಅಲಿಪೂರ ಸೆಂಟ್ರಲ್ ಜೇಲಿಗೆ ಇವರನ್ನು ಮುಟ್ಟಿಸಿದರು. ಒಂದು ವಾರ ಅವಧಿಯು ಮುಗಿದ ಕೂಡಲೆ ಅವರನ್ನು ಬಂಧಮುಕ್ತಮಾಡಿ ಮನೆಗೆ ಕಳಿಸಿದರು.

## ೧೯೩೧ ರ ಸ್ವಾತಂತ್ರ್ಯ ದಿನಾಚರಣೆ (ಜಾನ್ಯುಅರಿ ೨೬)

೧೯೩೦ ನೆಯ ಸಾಲಿನ ಸ್ವಾತಂತ್ರ್ಯದಿನಾಚರಣೆಯ ಪೂರ್ವದಲ್ಲಿಯೇ ಬಂಧಿಸಲ್ಪಟ್ಟ ಸುಭಾಸರಿಗೆ ಈ ವರ್ಷ ಸ್ವಾತಂತ್ರ್ಯದಿನಾಚರಣೆಯ ಸುಯೋಗವು ದೊರೆಯಿತು. ಆದರೆ 'ಸ್ವಾತಂತ್ರ್ಯದಿನ'ವನ್ನಾಚರಿಸಲು ಇವರಿಗೆ ಸ್ವಾತಂತ್ರ್ಯವಿರಲಿಲ್ಲ. ಕಲ್ಕತ್ತಾ ಪೋಲೀಸ ಕಮಿಶನರಾದ ಸರ್ ಚಾರ್ಲ್ಸ ಟೆಗ್ಗರ್ಟರು ಆ ದಿನ ಮೆರವಣಿಗೆ, ಸಭೆ ಮುಂತಾದವುಗಳನ್ನು ನಡೆಯಗೊಡಲಿಕ್ಕಿಲ್ಲವೆಂದು ಸಂಕಲ್ಪವನ್ನು ಮಾಡಿಕೊಂಡಿದ್ದರು. ಕಾರಣ ಅವರು ಸ್ವಾತಂತ್ರ್ಯದಿನಾಚರಣೆ ಮಾಡಕೂಡದೆಂದು ಡಂಗುರ ಹಾಕಿಸಿದರು. ಆದರೆ ಇಂಥ ಪೊಳ್ಳುಬೆದರಿಕೆಯ ಹುಕುಮುಗಳ ಆಟವು ಸುಭಾಸಚಂದ್ರರೆದುರಿಗೆ ಹೇಗೆ ನಡೆದೀತು? ಇದಕ್ಕೆಲ್ಲ ಬೆದರಿ ಕೈಮುಚ್ಚಿಕೊಂಡು ಸುಮ್ಮನೆ ಕೂಡ್ರತಕ್ಕವರಲ್ಲ ನಮ್ಮ ಚರಿತ್ರನಾಯಕರು. 'ಸ್ವಾತಂತ್ರ್ಯದಿನ' ವನ್ನು ಜರುಗಿಸುವದೇ ನಿಶ್ಚಿತವೆಂದೂ ಅದು ಅತ್ಯುತ್ತಮವಾದ ಯೋಗ್ಯ ಸನ್ಮಾನ ಮರ್ಯಾದೆಗಳಿಂದ ಆಚರಿಸಲ್ಪಡುವದೆಂದೂ ಇವರು ಪ್ರತಿಯಾಗಿ ಸಾರಿದರು. ತಮ್ಮ ಕಾರ್ಯಗಳಿಗೆ ಅಡ್ಡಬರುವ ಸರಕಾರೀ ಅಪ್ಪಣೆಗಳನ್ನು ಅವಶ್ಯಬಿದ್ದರೆ ತಾವು ಮೀರುವರೆಂದು ಮೊದಲೇ ತಿಳಿಸಿದರು.

ಕಲ್ಕತ್ತಾ ನಗರಾಧಿಪತಿಗಳೂ ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಅಧ್ಯಕ್ಷರೂ ಆಗಿದ್ದ ಸುಭಾಸಚಂದ್ರರು ಅಂದು ಹೂಮಾಲೆಗಳಿಂದ

ತಮ್ಮ ನಗರಸಭೆಯ ಕಚೇರಿಯಲ್ಲಿಯೇ ಸತ್ಕರಿಸಲ್ಪಟ್ಟು, ಹೊರಗೆ ಕಾದಿದ್ದ ಮೆರವಣಿಗೆಯ ನಾಯಕತ್ವವನ್ನು ವಹಿಸಲು ಹೊರಬಿದ್ದರು. ನಖಶಿಖಾಂತರ ಶುಭ್ರವಾದ ಖಾದಿಯ ಉಡುಪಿನಲ್ಲಿ ಬೊಕ್ಕತಲೆ ಬರಿಗಾಲುಗಳಿಂದ ನೀಟಾಗಿ ನಡೆಯುತ್ತ ರಾಷ್ಟ್ರಧ್ವಜವನ್ನು ಹೊತ್ತು, ಜನಸಾಗರವೆಂಬ ನೌಕೆಯನ್ನು ಮುಂದಾಳಾಗಿ ನಡೆಯಿಸಿಕೊಂಡು ಹೋಗುತ್ತಿದ್ದ ಅಂದಿನ ಅವರ ದೃಶ್ಯವು ವರ್ಣನೀಯವಾಗಿತ್ತು. ಇದನ್ನು ನೋಡಿ ಸಹಿಸಲಾರದೆ ಪೋಲೀಸ ಮತ್ತು ಮಿಲಿಟರಿಯವರ ಗುಂಪುಗಳು ಜನರನ್ನು ಮುತ್ತಿ ಕೋಲು ಬಡಿಗೆ ಲಾಠಿಗಳಿಂದ ಜನರನ್ನು ಚದುರಿಸಹತ್ತಿದರು. ಬೋಸರ ತಲೆಯೊಡೆದು ರಕ್ತವು ಸೋರಹತ್ತಿತು. ಮೈಯಲ್ಲೆಲ್ಲ ಪೆಟ್ಟುಗಳು ತಗಲಿದವು. ಅವರ ಬಲಗೈಯ ಸಂದು ತಪ್ಪಿ ಬಹಳ ಬಾಧೆಯನ್ನುಂಟುಮಾಡಿತು. ಆದಾಗ್ಯೂ ಆ ಧೀರರು ಮುಂದಿಟ್ಟ ಹೆಜ್ಜೆಯನ್ನು ಹಿಂದಿಡಲಿಲ್ಲ. ಇನ್ನೂ ಅನೇಕ ಏಟುಗಳು ಬೀಳಲಿದ್ದವು; ಅಷ್ಟರಲ್ಲಿ ನಗರದ ಶಿಕ್ಷಣಾಧಿಕಾರಿಗಳೊಬ್ಬರು ಬಂದು ಅವುಗಳನ್ನು ತಾವು ಸ್ವೀಕರಿಸಿ ಬೋಸರನ್ನು ರಕ್ಷಿಸಿದರು. ಮತ್ತು ನರೇಂದ್ರ ಚಕ್ರವರ್ತಿ ಎಂಬ ಪ್ರಮುಖ ಕಾಂಗ್ರೆಸ ಕೆಲಸಗಾರರು ಇವರ ಅಂಗರಕ್ಷಣೆಗಾಗಿ ಕಾದಿ ಬೀಳತಕ್ಕ ಏಟುಗಳನ್ನು ತಡೆದು ನಿವಾರಿಸಿದರು. ಆಮೇಲೆ ಬೋಸರು ಕೈದು ಮಾಡಲ್ಪಟ್ಟು ಸುಲ್ ಬಜಾರ ಲಾಕುಪ್ಪಿನಲ್ಲಿ ೩೧ ತಾಸುಗಳವರೆಗೆ ಅನ್ನಾಹಾರಗಳಿಲ್ಲದೆ ಇಡಲ್ಪಟ್ಟರು. ಇವರ ಗಾಯಗಳ ವಿಷಯವನ್ನು ಕೂಡ ಯಾರೂವಿಚಾರಿಸಲಿಲ್ಲ. ಕಡೆಗೆ ೬ ತಿಂಗಳ ಕಠಿಣ ಶಿಕ್ಷೆಗೆ ಇವರು ಗುರಿಯಾದರು. ಈ ಪ್ರಕಾರವಾಗಿ ತಮ್ಮ ಸ್ವದೇಶಾಭಿಮಾನಕ್ಕಾಗಿ ಇವರು ಶಿಕ್ಷೆಯನ್ನನುಭವಿಸಬೇಕಾಗಿ ಬಂದಿತು.

ಸುಭಾಸಚಂದ್ರರ ಕೈಸೆರೆಯ ವಿಷಯದಲ್ಲಿ ಲಾಹೋರ ಟ್ರಿಬ್ಯೂನ ಪತ್ರಿಕೆಯು ಅಗ್ರಲೇಖದಲ್ಲಿ ಈ ಪ್ರಕಾರ ಬರೆದಿರುತ್ತದೆ:— “ ಕಲ್ಕತ್ತಾ ಪೋಲೀಸರ ಕೃತಿಗಳು ವ್ಹಾಯಿಸರಾಯರ ಮತ್ತು ಅವರ ಸರಕಾರವನ್ನಷ್ಟೇ ಅಲ್ಲದೆ ಸಾರ್ವಭೌಮ ಸರಕಾರವನ್ನೂ ಕೂಡ ತೊಂದರೆಯಲ್ಲಿ ಹಾಕಿದವು. ಇದೀಗ ಗಾಂಧಿ-ಅಯರ್ವಿನ್ನರ ಒಪ್ಪಂದದ ಕಾಲವು; ಶಾಂತತಾ ವಾತಾವರಣವು ಸ್ಥಾಪಿತವಾಗುವ ಸುಸಮಯ. ಮೊದಲನೆಯ ತರಗತಿಯ ಮತ್ತು ಎರಡನೆಯ ತರಗತಿಯ ರಾಜಕೀಯ ಕೈದಿಗಳು ಈಗಾಗಲೆ ಹೊರಗೆ ಬರಹತ್ತಿದ್ದಾರೆ. ಬೇಗನೆ ಎಲ್ಲ ರಾಜಕೀಯ ಕೈದಿಗಳು ಬಂಧಮುಕ್ತರಾಗಿ ಹೊರಗೆ

ಬರುವವರಿದ್ದಾರೆ. ಇಂಥ ಸಮಯದಲ್ಲಿ ಸುಭಾಸಚಂದ್ರರಂಥವರನ್ನು ಹೊಸದಾಗಿ ಕೈದುಮಾಡುವದರ ಅರ್ಥವೇನು? ಒಂದೆಡೆ ಒಪ್ಪಂದದ ಕರಾರಿನ ಪ್ರಕಾರ ಎಲ್ಲ ರಾಜಕೀಯ ಆರೋಪಿಗಳನ್ನು ಬಿಡುವದೂ ಮತ್ತೊಂದೆಡೆ ಭಾರತದ ಮೊದಲನೆಯ ವರ್ಗದ ನಗರಾಧಿಪತಿಗಳಂಥ ದೊಡ್ಡ ಮನುಷ್ಯರನ್ನು ಬಂಧಿಸುವದೂ ಏಕಕಾಲಕ್ಕೆ ನಡೆದಿವೆ. ಇದು ಯಾವರೀತಿಯೋ ತಿಳಿಯದು. ಬಂಗಾಲ ಪ್ರಾಂತದಲ್ಲಿ ಅದ್ವಿತೀಯ ಪ್ರಖ್ಯಾತಿ ಪಡೆದಂಥ ಮತ್ತು ಭಾರತದ ಮುಖಂಡರಲ್ಲೊಬ್ಬರಾದಂಥ ಸುಭಾಸಚಂದ್ರರನ್ನು ಪೋಲೀಸರು ಕೈದುಮಾಡಿದ್ದು ಅನಾವಶ್ಯಕವೂ ಅನ್ಯಾಯವೂ ಆಗಿದೆ. ಮುಂಬೈ ಮುಂತಾದ ನಗರಗಳಲ್ಲಿ ಆ ತರದ ತಡೆಯ ಅವಶ್ಯಕತೆ ತೋರದಿದ್ದುದೂ ತಡೆಹಾಕದ್ದರಿಂದ ಅನಿರೀಕ್ಷಿತ ಶಾಂತತಾಭಂಗವಾಗದಿದ್ದುದೂ ಕಲ್ಕತ್ತೆಯ ಪೋಲೀಸರ ಕಾರ್ಯಕಲಾಪಗಳನ್ನು ಖಂಡಿಸುತ್ತವೆ.

ಹಿಂದುಸ್ತಾನ ಸರಕಾರವು ಬೇಗನೆ ಸುಭಾಸಚಂದ್ರರನ್ನು ಬಂಧಮುಕ್ತ ಮಾಡಿ ತಾವು ಮಾಡಿದ ಅನ್ಯಾಯಗಳನ್ನು ತಿದ್ದಿಕೊಳ್ಳುವರೆಂದು ನಮ್ಮ ಆಶೆ."

ಬೋಸರು ಸೆರೆಮನೆಯಲ್ಲಿದ್ದಾಗ ಕಾಂಗ್ರೆಸ ಪ್ರಮುಖರಾದ ಸೇನಗುಪ್ತ ಮತ್ತು ಎನ್. ಸಿ. ಬ್ಯಾನರ್ಜಿಯವರು ಅವರನ್ನು ಕಂಡು ಗಾಂಧಿ-ಆಯರ್ವಿನ್ನರ ಒಪ್ಪಂದದ ವಿಷಯವಾಗಿ ಚರ್ಚಿಸಿದರು. ಆಗ ಬೋಸರು ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೀಗೆ ಹೇಳಿದರು:- " ಮೀರತ ಖಟ್ಲೆಯನ್ನು ಕಿತ್ತುಹಾಕಬೇಕು. ಬಂಗಾಲ ಡೆಟಿನ್ಯೂಗಳು ಬಂಧಮುಕ್ತರಾಗಬೇಕು. ಭಗತಸಿಂಗ ಮತ್ತು ಅವರ ಸಂಗಡಿಗರ ಜೀವರಕ್ಷಣೆಯಾಗಬೇಕು. .....ಉಜ್ವಲ ಸ್ವದೇಶಾಭಿಮಾನದ ತೇಜೋಮಯ ಮೂರ್ತಿಗಳನ್ನು ಬಂಧನದಲ್ಲಿರಿಸಿ ಒಪ್ಪಂದಮಾಡಿಕೊಳ್ಳುವದು ಹೇಗೆ? ಇವರೆಲ್ಲರುಗಳ ಬಿಡುಗಡೆಯು ಮೊದಲು ಆಗಬೇಕು. ಆಮೇಲೆ ಒಪ್ಪಂದದ ಮಾತುಕತೆಗಳು. ಅವರನ್ನು ಬಂಧಮುಕ್ತಮಾಡದೆ ಆದ ಒಪ್ಪಂದದ ಕರಾರುಗಳಿಗೆ ನಾನೆಂದೂ ಒಪ್ಪಲಾರೆ".

ಮುಂದೆ ಸ್ವಲ್ಪೇದಿವಸಗಳಲ್ಲಿ ಸುಭಾಸಚಂದ್ರರ ಬಿಡುಗಡೆಯಾಯಿತು. ಕಾಯಿದೆಭಂಗದ ಎಲ್ಲ ರಾಜಕೀಯ ಕೈದಿಗಳೂ ಬಂಧಮುಕ್ತರಾದರು. ಆದರೆ ಬಂಗಾಲದ ಡೆಟಿನ್ಯೂಗಳನ್ನು ಯಾರೂ ದಾದುಮಾಡಲಿಲ್ಲ. ಮೀರತ ಕೈದಿಗಳ ಗೋಳನ್ನು ಯಾರೂ ಕೇಳಲಿಲ್ಲ. ಭಗತಸಿಂಗ ಮತ್ತು ಅವರ ಸಂಗಡಿಗರ ಪ್ರಾಣರಕ್ಷಣೆಯ ವಿಷಯದಲ್ಲಿ ಮಹಾತ್ಮಾ ಗಾಂಧಿಯವರು ಒಪ್ಪಂದದ

ಕರಾರುಗಳಿಗೆ ಸಹಿಹಾಕುವ ಪೂರ್ವದಲ್ಲಿ ಪ್ರಯತ್ನಿಸಲಿಲ್ಲ. ಒಪ್ಪಂದದ ಕರಾರುಪತ್ರಗಳಾದಮೇಲೆ ವ್ಹಾಯಿಸರಾಯರ ಮನವೊಲಿಸಲು ಗಾಂಧಿಯವರು ವ್ಯರ್ಥವಾಗಿ ಪ್ರಯತ್ನಿಸಿದರು. ಸರಕಾರದ ಸದ್ಭಾವನೆಯನ್ನು ನಂಬಿ ಅವರ ಕರುಣಾಳುತನದ ಉಪಯೋಗಮಾಡಿಕೊಳ್ಳಲು ಪ್ರಯತ್ನಿಸಿದ ಗಾಂಧಿಯವರಿಗೆ ಸರಕಾರದ ಕ್ರೂರತನದ ಕೈಯು ತೋರದಿರಲಿಲ್ಲ. ಭಗತಸಿಂಗ ಮತ್ತು ಅವರ ಸಂಗಡಿಗರು ಗಲ್ಲಿಗೇರಿಸಲ್ಪಟ್ಟರು. ಅವರಿಂದ ತರುಣರ ಎದೆಗಳಲ್ಲಿ ಶಾಶ್ವತವಾದ ಬಾಣವು ನಟ್ಟಂತಾಗಿ ಎಲ್ಲೆಡೆಯಲ್ಲಿಯೂ ಹಾಹಾಕಾರದ ಚಿಹ್ನಗಳು ತೋರಹತ್ತಿದವು. ಮಹಾತ್ಮರು ಎಲ್ಲರನ್ನು ಸಂತೈಸಿ ಸಮಾಧಾನ ಪಡಿಸಲು ಮಾಡಿದ ಪ್ರಯತ್ನಗಳು ನಿಷ್ಫಲವಾಗಹತ್ತಿದವು.

## ಕರಾಚಿ ಕಾಂಗ್ರೆಸ್ (೧೯೩೧ನೆಯ ಮಾರ್ಚ)

೪೫ನೆಯ ಕಾಂಗ್ರೆಸ ಅಧಿವೇಶನವು ಕರಾಚಿಯಲ್ಲಿ ಕೂಡುವ ಪೂರ್ವದಲ್ಲಿ ಶಾಂತತೆಯ ವಾತಾವರಣಗಳು ಹುಟ್ಟಹತ್ತಿದ್ದೇನೋ ನಿಜ. ಆದರೆ ಭಗತಸಿಂಗರನ್ನು ಗಲ್ಲಿಗೇರಿಸಿದ ಸುದ್ದಿಯು ವಿದ್ಯುತ್ಪ್ರವಾಹದಂತೆ ಎಲ್ಲಕಡೆಗೂ ಪ್ರಸರಿಸಿ ತರುಣರ ಹೃದಯಗಳನ್ನು ಭೇದಿಸಿತು. ಸಿಟ್ಟು-ಸೇಡುಗಳ ತಾಪದಿಂದ ತರುಣರು ಕಂಗೆಟ್ಟರು. ಸರಕಾರವು ಅಪನಂಬಿಗೆಯ ಪರಮಾವಧಿಯ ಅಪವಾದವನ್ನು ಹೊರಬೇಕಾಯಿತು. ಬಿಸಿರಕ್ತದ ತರುಣರು ಕಾಂಗ್ರೆಸ್ಸದ ಸೌಮ್ಯವಾದ ಅಹಿಂಸೆ ಮತ್ತು ಶಾಂತತೆಗಳ ತತ್ವಗಳನ್ನು ಧಿಕ್ಕರಿಸಹತ್ತಿದರು. ನವಜವಾನರ 'ಕೆಂಪಂಗಿ' ಸ್ವಯಂಸೇವಕರು ಮಹಾತ್ಮರನ್ನು ಕರೇನಿಶಾನೆಯಿಂದ ಅಪಮಾನಮಾಡಿದರು. ಕರೇಹೂಮಾಲೆಗಳಿಂದ ಅವರನ್ನು ಸತ್ಕರಿಸಿದರು. 'ಭಗತಸಿಂಗರ ಕೊಲೆಗಾರ' ರೆಂದು ಹೊಟ್ಟೆಯುರುಕ ತರುಣರು ಗಾಂಧಿಯವರಿಗೆ ಅಪವಾದವನ್ನಿಡಹತ್ತಿದರು. ಹೃತ್ತಾಪದಿಂದ ನೊಂದ ತರುಣರನ್ನು ಸಂತೈಸುವದು ಮಹಾತ್ಮಾಜಿಯವರಿಂದಾಗಲಿಲ್ಲ. ಪರಿಸ್ಥಿತಿಯು ಮುಂದೆ ಎಲ್ಲಿಗೆ ಬಂದು ಮುಟ್ಟುವದೋ ಎಂದು ಎಲ್ಲರೂ ಹೌಹಾರಿ ಕುಳಿತರು. ಪಂಡಿತ ಜವಾಹಿರಲಾಲರೇ ಮೊದಲಾದವರು ನವಜವಾನರೊಡನೆ ಚರ್ಚಿಸಿ ಅವರನ್ನು ಸಮಾಧಾನಗೊಳಿಸಲೆತ್ನಿಸಿದರು. ಅಂತೂ ಕೊನೆಗೆ ಸುಭಾಸಚಂದ್ರರು ತರುಣರ ಹೃದಯಗಳನ್ನು ಸ್ವಲ್ಪ ಶಾಂತಮಾಡಿ ಆ ಬಿಕ್ಕಟ್ಟಿನ ಕಾಲದಲ್ಲಿ ಮುತ್ಸದ್ದಿತನದಿಂದ ವರ್ತಿಸುವಂತೆ ಅವರ ಮನವೊಲಿಸಿದರು. ಅವರ ಪಕ್ಷವಾಗಿ ತಾವು ಬಡಿದಾಡುವೆವೆಂದು ವಚನವನ್ನಿತ್ತರು.

ಕಾಂಗ್ರೆಸ ಉಗ್ರಪಕ್ಷದ ಪ್ರತಿನಿಧಿಗಳೂ ನವಜವಾನ ಸಭೆಯ ಅಧ್ಯಕ್ಷರೂ ಆದ ಸುಭಾಸಚಂದ್ರರು ಒಂದು ಹೇಳಿಕೆಯನ್ನು ಹೊರಡಿಸಿ ಕಾಂಗ್ರೆಸ ಅಧಿವೇಶನವು ಸುಸೂತ್ರವಾಗಿ ನಡೆಯುವಂತೆ ಮಾಡಿದರು.

"ಭಗತಸಿಂಗರ ಕೊಲೆಯ ಸಂಗತಿಯು ಅತ್ಯಂತ ನಿರಾಶಾಜನಕವೂ ಅಸಮಾಧಾನಕಾರಕವೂ ಆಗಿರುವದೇನೋ ನಿಜ; ಆದರೆ ಈಗ ರಾಷ್ಟ್ರವು ಅತ್ಯಂತ ಬಿಕ್ಕಟ್ಟಿನ ಸ್ಥಿತಿಯಲ್ಲಿದೆ. ಇಂಥ ಮಹತ್ವದ ಕಾಲದಲ್ಲಿ ಕಾಂಗ್ರೆಸವಲ್ಲಿ ಇಬ್ಬಣಗಳಾಗುವದು ನಮಗೆ ಬೇಡ; ಕಾಂಗ್ರೆಸನ್ನು ದ್ವಿಭಾಗಿಸುವ ಗುಪ್ತ ಹೇತುವಿನಿಂದಲೇ ಸರಕಾರವು ಈ ಕಾಲಕ್ಕೆ ಇಂಥ ಬಲಿಯನ್ನೊಡ್ಡಿದೆ. ಭಗತಸಿಂಗರನ್ನು ಗಲ್ಲಿಗೇರಿಸಿದ್ದರಿಂದ ತಲೆಕೆಡಿಸಿಕೊಂಡ ತರುಣರು ಕಾಂಗ್ರೆಸನ್ನು ಛೇದಿಸಿ ಹೊರಹೊರಡುವರೆಂದೂ ಅದರಿಂದ ಸರಕಾರದ ಪ್ರತಿಪಕ್ಷಿಯಾದ ಕಾಂಗ್ರೆಸದ ಬಲವು ಕುಗ್ಗಿ ಹೋಗುವದೆಂದೂ ತಿಳಿದು ಈ ಚಮತ್ಕಾರವನ್ನು ಅವರು ನಡೆಸಿರುವರು" ಎಂದು ಹೇಳಿ ಅದಕ್ಕೆ ತಕ್ಕ ರೀತಿಯಲ್ಲಿ ವರ್ತಿಸಿ ಭಾರತದ ಮತ್ತು ಕಾಂಗ್ರೆಸದ ಮಾನರಕ್ಷಣೆ ಮಾಡಬೇಕಾಗಿ ಎಲ್ಲರನ್ನು ಬೇಡಿಕೊಂಡರು. ಕಾಂಗ್ರೆಸ ಅಧಿವೇಶನವು ಸುಸೂತ್ರವಾಗಿ ನಡೆಯುವದೇ ಅಸಂಭವವಾಗಿದ್ದ ಪರಿಸ್ಥಿತಿಯಲ್ಲಿ ಸುಭಾಸಚಂದ್ರರು ಮುಂದೆ ಬಂದು ಜಾಣತನದಿಂದ ಎಲ್ಲ ಕಾರ್ಮೋಡಗಳನ್ನು ಬಯಲುಮಾಡಿ ತರುಣರ ಪರವಾಗಿ ಶಾಂತತೆಯ ವರ್ತನದ ಆಶ್ವಾಸನವನ್ನಿತ್ತರು. ಆಗ ಕಾಂಗ್ರೆಸ ಅಧಿವೇಶನವು ನಡೆಯಲು ಅನುಕೂಲವಾಯಿತು. ಎಲ್ಲರೂ ಬೋಸರನ್ನು ಕೊಂಡಾಡಿದರು.

ಕರಾಚಿಯಲ್ಲಿ ಬೋಸರು ಅಖಿಲ ಭಾರತ ನವಜವಾನರ ಸಭೆಯ ಅಧ್ಯಕ್ಷಸ್ಥಾನವನ್ನು ವಹಿಸಿದರು. ಅಖಿಲ ಭಾರತ ಹಿಂದುಸ್ತಾನೀ ಸೇವಾದಲದ ಅಧ್ಯಕ್ಷಸ್ಥಾನದ ಬಹುಮಾನವೂ ರಾಜಕಾರಣದಲ್ಲಿ ಹೊಕ್ಕು ತೊಂದರೆಗೀಡಾದವರ ( Political Sufferers ) ಪರಿಷತ್ತಿನ ಅಧ್ಯಕ್ಷಸ್ಥಾನವೂ ಇವರಪಾಲಿಗೆ ಬಂದವು. ನವಜವಾನ ಸಭೆಯ ಅಧ್ಯಕ್ಷರಾದಾಗ್ಗೆ ಅತ್ಯಂತ ಸ್ಫೂರ್ತಿದಾಯಕ ಭಾಷಣವನ್ನು ಮಾಡಿದರು. ಭಾವೀ ರಾಜ್ಯಪದ್ಧತಿಯ ರೂಪರೇಷೆಗಳನ್ನು ಸಮತಾವಾದದ ಪ್ರಜಾಸತ್ತಾತ್ಮಕ ತತ್ವದ ಮೇಲೆ ಅವಲಂಬಿಸಿ ಕಲ್ಪಿಸಿದರು. ನ್ಯಾಯವಾದ ಸಾಮಾಜಿಕ ಸುವ್ಯವಸ್ಥೆಯ ಮೇಲೆ ನಮ್ಮ ಭಾವೀ ರಾಜ್ಯಮಂದಿರವನ್ನು ಕಟ್ಟಬೇಕಾಗಿರುವದೆಂದು ಅವರು ಹೇಳಿದರು.

ಕರಾಚಿ ನಗರಸಭೆಯವರು ಬೋಸರಿಗೆ ಆ ಕಾಲಕ್ಕೆ ಗೌರವದ ಮಾನಪತ್ರವನ್ನು ಕೊಟ್ಟರು. ಆ ಮಾನಪತ್ರವು "Lord Mayor of Calcutta" ("ಕಲ್ಕತ್ತೆಯ ಲಾರ್ಡ ಮೆಯರರೇ") ಎಂಬ ಶಬ್ದಗಳಿಂದ ಸುರುವಾಗಿತ್ತು. ಅದಕ್ಕೆ ಯೋಗ್ಯ ಉತ್ತರವನ್ನೀಯುತ್ತ ಸುಭಾಸಚಂದ್ರರು "In the enslaved India there are no Lords but all Slaves" ("ದಾಸ್ಯವೃತ್ತಿಯಲ್ಲಿರುವ ಭಾರತದಲ್ಲಿ ಯಾರೂ ಒಡೆಯರಿರುವದಿಲ್ಲ; ಎಲ್ಲರೂ ಗುಲಾಮರೇ") ಎಂದು ಹೇಳಿದರು.





# ೧೦. ಒಪ್ಪಂದದ ಕಾಲ

ಕರಾಚಿ ಕಾಂಗ್ರೆಸಿನಿಂದ ತಿರುಗಿ ಬಂದಮೇಲೆ ಬಂಗಾಲ ಕಾಂಗ್ರೆಸ ಕಮಿಟಿಯನ್ನು ವ್ಯವಸ್ಥೆಗೊಳಿಸುವದರಲ್ಲಿ ಬೋಸರು ತಮ್ಮ ಎಲ್ಲ ಲಕ್ಷ್ಯವನ್ನು ಹಾಕಿದರು. ಬಂಗಾಲ ಕಾಂಗ್ರೆಸದಲ್ಲಿ ಅನೇಕ ಪಂಗಡಗಳಿದ್ದವು. ದೇಶಬಂಧು ದಾಸರು ಜೀವಂತರಿದ್ದಾಗಲೇ ಅವರ ಮಾರ್ಗ ಮತ್ತು ಕಾರ್ಯಕ್ರಮಗಳನ್ನು ವಿರೋಧಿಸುತ್ತಿದ್ದ ಪಂಗಡವೊಂದು ಇನ್ನೂ ಜೀವಂತವಿತ್ತು. ಆದರೆ ದೇಶಬಂಧುಗಳು ಜೀವಂತವಿರುವವರೆಗೆ ಅದನ್ನು ಅವರು ತಲೆ ಎತ್ತಗೊಟ್ಟಿದ್ದಿಲ್ಲ. ಈಗ ಆ ಪಕ್ಷವು ಬೋಸರಿಗೆ ಕಾಲ್ತೊಡಕಾಗಿ ಕಾಡಹತ್ತಿತು. ಅಲ್ಲದೆ ತರುಣರೆಂದರೆ ಮೂಗುಮುರಿಯುವ ಮುದಿಜನರ ಪಂಗಡವೂ ಅಲ್ಲಿ ಒಂದು ಇತ್ತು. ಅವರ ವಿಚಾರದಲ್ಲಿ "To be youth was a crime"

ತರುಣರಾಗಿರುವದೇ ಒಂದು ಅಪರಾಧವಾಗಿತ್ತು. ಅಂದಮೇಲೆ ತರುಣ ವೀರನಾಯಕರಾದ ಬೋಸರು ಅವರ ಬಾಣಗಳಿಗೆ ಗುರಿಯಾಗಿದ್ದು ಆಶ್ಚರ್ಯವಲ್ಲ. ಇದೂ ಅಲ್ಲದೆ ಸುಪ್ರಸಿದ್ಧ ಮುಂದಾಳುಗಳಾದಂಥ ಸೇನಗುಪ್ತರಿಗೂ ಇವರಿಗೂ ಮತಭೇದಗಳಾಗುತ್ತಿದ್ದವು. ಬಂಗಾಲ ರಾಜಕಾರಣವು ಹಲಕೆಲವು ಸ್ವಾರ್ಥಿ ಪತ್ರಿಕಾಕರ್ತರಿಂದ ಕಲುಷಿತವಾಗಿ ಹೋಗಿತ್ತು. ವೈಯಕ್ತಿಕ ಕಲಹಗಳ ಕ್ಷುಲ್ಲಕ ಕಾರಣಗಳಿಂದ ಪ್ರಾಂತವೆಲ್ಲ ಹಾಳಾಗ ಹತ್ತಿತು. ಸ್ವರಾಜ್ಯಪಕ್ಷದ ಮುಂದಾಳುಗಳೂ ಬೋಸರು ಸೆರೆಮನೆಯಲ್ಲಿದ್ದಾಗ ಬಂಗಾಲ ಪ್ರಾಂತಿಕ ಕಮಿಟಿಯ ಅಧ್ಯಕ್ಷರೂ ಆಗಿದ್ದ ಸೇನಗುಪ್ತರು ಸಹ ಈ ಕಲಹದಲ್ಲಿ ಎಳೆಯಲ್ಪಟ್ಟರು. ನಿರ್ವಾಹವಿಲ್ಲದೆ ಬೋಸರು ವಿರೋಧಪಕ್ಷದ ಮುಂದಾಳುಗಳಾಗಿ ಬಡಿದಾಡುವ ಪ್ರಸಂಗವು ಬಂದಿತು. ಒಂದುಪಕ್ಷದ ಮೇಲಿದ್ದ ಲಂಚ ಮೊದಲಾದ ಅನೇಕ ಆರೋಪಗಳೂ ಬೋಸರ ಪಕ್ಷದಮೇಲೆಯೂ ಹೇರಲ್ಪಟ್ಟವು. ಆದರೆ ತಾವು ಅಧ್ಯಕ್ಷರಾಗಿದ್ದಾಗ ತಮ್ಮ ಮೇಲೆ ಆರೋಪ ಹೊರಿಸಿದವರನ್ನೇ ಕೂಡಿಕೊಂಡು ಈಗ ಸೇನಗುಪ್ತರು ಬೋಸರಮೇಲೆ ಆರೋಪಹೊರಿಸಲೆತ್ನಿಸಿದ್ದು ದುರ್ದೈವದ ಸಂಗತಿಯು. ಆದರೆ ಬೋಸರು ಆರೋಪದ ಆಹ್ವಾನವನ್ನು ಧೀರತನದಿಂದ ಸ್ವೀಕರಿಸಿ ತಮ್ಮ ಸ್ಥಾನದ ಗೌರವಕ್ಕನುಗುಣವಾಗಿ ಕಾರ್ಯಪ್ರವರ್ತರಾಗಿಯೇ ಇದ್ದರು. ವಾರ್ಷಿಕ ಚುನಾವಣೆಯು ಸಮಾಪಿಸಿದಾಗ ಅನಿಯಮಿತತನ ಮೊದಲಾದ ಹೊಸ ಆರೋಪಗಳು ಇವರ ವಿಷಯವಾಗಿ ಕಲ್ಪಿಸಲ್ಪಟ್ಟವು. ಕಾಯಿದೆಗೆ ಅನುಸಾರವಾಗಿ ಇವರ ಪ್ರತಿಪಕ್ಷದವರ ತಕರಾರುಗಳು ಅಖಿಲ ಭಾರತ ಕಾಂಗ್ರೆಸ ಕಚೇರಿಯನ್ನು ಕಂಡವು. ಅಲ್ಲಿ ಈ ಚೌಕಸಿಗಾಗಿ ಶ್ರೀ. ಆಣೆಯವರು ನೇಮಿಸಲ್ಪಟ್ಟರು. ಜಾನೇವರಿ ತಿಂಗಳಲ್ಲಿ ಪಂಡಿತ ಮೋತಿಲಾಲರು ಒಮ್ಮೆ ಕಲ್ಕತ್ತೆಗೆ ಬಂದಾಗ ಈ ಎಲ್ಲ ಪ್ರಶ್ನೆಗಳನ್ನು ಸಮಂಜಸವಾಗಿ ಬಿಡಿಸಿ ಬೋಸರು ನಿರ್ದೋಷಿಗಳೂ ನಿರಪರಾಧಿಗಳೂ ಎಂದು ತಮ್ಮ ನಿರ್ಣಯವನ್ನು ಹೇಳಿದರು. ಆಗ ಬೋಸರ ಪಕ್ಷಕ್ಕೆ ಬೆಂಬಲವು ದೊರೆತಂತಾಯಿತು. ಆದರೆ ಪ್ರತಿಪಕ್ಷದವರೇನೂ ತಮ್ಮ ಹಟವನ್ನು ಬಿಡಲಿಲ್ಲ.

ಈ ವಿಷಯದಲ್ಲಿ ಹೆಚ್ಚು ಆಳವಾಗಿ ಪ್ರವೇಶಿಸುವದು ಇಲ್ಲಿ ಅನಾವಶ್ಯಕವು. ಆದರೆ ಇಷ್ಟುಮಾತ್ರ ಹೇಳದಿರಲಾರೆವು. ಆ ಕಾಲಕ್ಕೆ ಅತ್ಯಂತ

ಯೋಗ್ಯರೀತಿಯಿಂದಲೂ ಅಧಿಕಾರೀ ಸ್ಥಾನಕ್ಕೆ ತಕ್ಕ ಗೌರವದಿಂದಲೂ ವರ್ತಿಸಿ ಬೋಸರು ತಮ್ಮ ಹೆಚ್ಚಿನ ಯೋಗ್ಯತೆಯನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟರು.

## ಗಾಂಧಿ-ಆಯರ್ವಿನ್‌ರ ಒಪ್ಪಂದವೂ ಬಂಗಾಲವೂ

ಗಾಂಧಿ-ಆಯರ್ವಿನ್ನರ ಒಪ್ಪಂದವಾದಮೇಲೆ ಕೂಡ ಬಂಗಾಲದಲ್ಲಿ ಶಾಂತತೆಯು ನೆಲಿಗೊಳ್ಳಲಿಲ್ಲ. ಸವಿನಯ ಶಾಶನೋಲ್ಲಂಘನ ಚಳವಳಿಯಲ್ಲಿ ಭಾಗವಹಿಸಿದ ಕೈದಿಗಳೆಲ್ಲರೂ ಬಂಧಮುಕ್ತರಾದಾಗ್ಯೂ ಬಂಗಾಲದ ೬೦೦ ವೀರಪುತ್ರರಿನ್ನೂ (ಡೆಟಿನ್ಯೂಗಳಾಗಿ) ಸೆರೆಮನೆಯೊಳಗೆ ಕೊಳೆಯುತ್ತಲೇ ಇದ್ದರು. ೧೯೨೫ ನೆಯ ವರ್ಷದ ಕ್ರಿಮಿನಲ್ ಲಾ ಅಮೆಂಡಮೆಂಟ ಆ್ಯಕ್ಟಿಗೆ ತುತ್ತಾದ ವೀರರಿನ್ನೂ ಬಂಧಮುಕ್ತರಾಗಿರಲಿಲ್ಲ. ಈ ವಿಷಯವನ್ನು ಸೇರಿಸದೆ ವರ್ಕಿಂಗ ಕಮಿಟಿಯವರು ಬಂಗಾಲಕ್ಕೊಂದು ದೊಡ್ಡ ಅನ್ಯಾಯವನ್ನೇ ಮಾಡಿದರು. ಇದರ ಪರಿಣಾಮವಾಗಿ ಹಿಜಲಿಯ ದುಃಖಕರವಾದ ಪ್ರಸಂಗವನ್ನು ಬಂಗಾಲವು ಕಾಣಬೇಕಾಯಿತು. ಬಂಗಾಲದಲ್ಲಿ ದಿನದಿನವೂ ದಬ್ಬಾಳಿಕೆಯು ಹೆಚ್ಚುತ್ತ ನಡೆಯಿತು. ಕ್ರಾಂತಿಕಾರರ ಚಟುವಟಿಕೆಗಳಿಗೆ ಪ್ರತ್ಯುತ್ತರವಾಗಿ ಸರಕಾರವು ತನ್ನ ಎಲ್ಲ ಹಣವನ್ನೂ ಬಲವನ್ನೂ ವಿನಿಯೋಗಿಸಿ ದಬ್ಬಾಳಿಕೆಯನ್ನು ಕೈಕೊಂಡಿತು. ಆರ್ಡಿನನ್ಸುಗಳು ಸಾಮಾನ್ಯವಾದ ದೈನಿಕ ವ್ಯವಹಾರದಲ್ಲಿ ಬಂದುಬಿಟ್ಟವು. ಇಡೀ ಪ್ರಾಂತವು ಅರ್ಧ ಮಿಲಿಟರಿಯವರ ಆಡಳಿತದಲ್ಲಿರಬೇಕಾಯಿತು. ತರುಣರ ಗುಂಪುಗಳು ಚೌಕಸಿ ಇಲ್ಲದೆ ಸೆರೆಮನೆ ಕಾಣಬೇಕಾಯಿತು. ಚಿತಗಾಂಗದಲ್ಲಿ ದಬ್ಬಾಳಿಕೆಯ ಪರಮಾವಧಿಯಾಯಿತು. ಕಾಂಗ್ರೆಸ ಸಂಸ್ಥೆಗಳಷ್ಟೇ ಅಲ್ಲದೆ ವಾಚನಾಲಯ ವ್ಯಾಯಾಮಶಾಲೆಗಳಂಥ ಸಂಸ್ಥೆಗಳು ಕೂಡ ಅಕ್ರಮಕೂಟಗಳಾಗಿ ಪ್ರಕಟಿಸಲ್ಪಟ್ಟವು.

ಭಗತಸಿಂಗ ಮತ್ತು ಅವರ ಸಂಗಡಿಗರನ್ನು ಗಲ್ಲಿಗೇರಿಸಿ ಜನತೆಯ ಹೃದಯಕ್ಕೆ ವಜ್ರಾಘಾತ ಮಾಡಿದ್ದು ಸರಕಾರಕ್ಕೆ ಸಾಕಾಗಲಿಲ್ಲವೆಂಬಂತೆ ತೋರುತ್ತದೆ. ದುರ್ದೈವೀ ಭಾರತವು ಏಟಿನಮೇಲೆ ಏಟುಗಳನ್ನು ಅನುಭವಿಸಬೇಕಾಯಿತು. ಹಿಜಲಿಯಲ್ಲಿ ೧೬ ನೆಯ ಸಪ್ಟಂಬರದ ರಾತ್ರಿ ನಿಶ್ಶಸ್ತ್ರರಾದ ಡೆಟಿನ್ಯೂ ಕೈದಿಗಳಮೇಲೆ ಗುಂಡಿನ ಸುರಿಮಳೆಯಾಯಿತು. ಗುಂಡಿನೇಟುಗಳಿಗೆ ಎದೆಗೊಟ್ಟು ಇಬ್ಬರು ಮಡಿದರು. ಅನೇಕರು ಗಾಯಹೊಂದಿ

ದರು. 'ಕಲ್ಕತ್ತೆಯ ಕತ್ತಲೆಕೋಣೆ' ಎಂಬ ಸುಳ್ಳು ಇತಿಹಾಸವನ್ನು ಕಲ್ಪಿಸಿ ಭಾರತೀಯರ ಕ್ರೌರ್ಯಪ್ರದರ್ಶನವನ್ನು ಮಾಡಲೆಳಿಸುತ್ತಿದ್ದ ಆಳರಸರ ಕ್ರೌರ್ಯವು 'ಕತ್ತಲೆಕೋಣೆ' ಗಿಂತಲೂ ಕರಾಳ ಸ್ವರೂಪದ್ದಾಗಿದ್ದಿತು. ಈ ಪಾಶವೀಕಾರ್ಯವು ಅತ್ಯಂತ ಹೃದಯದ್ರಾವಕವಾಗಿತ್ತು. ೧೯೧೯ರ ಜಲಿಯಾನವಾಲಾ ಬಾಗದ ಹಿಂಸಾಕಾರ್ಯವನ್ನು ಇದರೊಡನೆ ಸರಿಹಚ್ಚಿ ನೋಡಿದರೆ ಅದು ಇದರ ಮುಂದೆ ಏನೂ ಅಲ್ಲವೆಂದು ಹೇಳಬಹುದು. ಚಿತಗಾಂಗದ ಸುದ್ದಿಯಿಂದ ತಪ್ತವಾದ ಜನತೆಯ ಹೃದಯವು ಈ ಸಂಗತಿಯನ್ನು ಕೇಳಿ ಕಂಗೆಟ್ಟಿತು.

## ಹಿಜಲಿ, ಚಿತಗಾಂಗ, ಡಾಕಾ ಪ್ರಸಂಗಗಳು

ಅಗಸ್ಟ, ಸಪ್ಟಂಬರ ತಿಂಗಳುಗಳಲ್ಲಿ ಚಿತಗಾಂಗದಲ್ಲಿ ಸರಕಾರದ ಅತ್ಯಾಚಾರವು ಮಿತಿಮೀರಿತ್ತು. ಪಟ್ಟಣದ ಮಧ್ಯದಲ್ಲಿ ನೂರಾರು ಮನೆಗಳನ್ನು ಸುಟ್ಟು ಬೂದಿಮಾಡಿದರು. ಅಸಂಖ್ಯಾಕ ಮನೆಗಳು ಲೂಟಿಯಾದವು. ಪೋಲೀಸರು ಮತ್ತು ಮಿಲಿಟರಿಯವರು ೬೦೦ ಯಾರ್ಡಿನಾಚೆನಿಂತು ಈ ಅನಾಹುತವನ್ನು ನೋಡಿ ನಲಿಯುತ್ತಿದ್ದರು. ಆಗ ಆದ ನಷ್ಟವು ಒಂದು ಕೋಟಿ ರೂಪಾಯಿಗಳಿಗಿಂತ ಹೆಚ್ಚಾಗಿರಬಹುದೆಂದು ಗಣನೆ. ಜಿಲ್ಹೆಯ ಒಳಭಾಗದ ಹಳ್ಳಿಗಳಲ್ಲಿ ಕೂಡ ಪೋಲೀಸ ಮತ್ತು ಮಿಲಿಟರಿಯವರು ಹೊಕ್ಕು ಜುಲುಮೆಯಿಂದ ಮನೆಮಾರುಗಳನ್ನು ಲೂಟಿಮಾಡುವದೂ ಬೆಂಕೀಹಚ್ಚುವದೂ ಮುಂತಾದ ಅತ್ಯಾಚಾರಗಳನ್ನು ನಡೆಯಿಸಿದರು. ರಾಜಕಾರಣದ ಗಂಧವೂ ಕೂಡ ತಗಲದ ಒಡಕ್ಕೈತರ ಮನೆಮಾರುಗಳು ನೆಲಸಮವಾದವು. ಗುರ್ಖಸಿಪಾಯಿಗಳು ವಿದ್ಯಾನಿಲಯಗಳನ್ನು ಹೊಕ್ಕು ಪಾತಕರೆದುರಿಗೇನೇ ವಿದ್ಯಾರ್ಥಿಗಳನ್ನು ಮನಬಲ್ಲಂತೆ ಬಡಿದರು. ಚಿತಗಾಂಗದಲ್ಲಿ ನೆಲಿಸಿರುವ ಅನಧಿಕಾರಿ ಯುರೋಪಿಯನ್ನರ ಅಂಗವು ಈ ಅತ್ಯಾಚಾರದಲ್ಲಿ ವಿಶೇಷವಾಗಿತ್ತು.

ಈ ಸಂಗತಿಯನ್ನು ಕೇಳಿದ ಕೂಡಲೆ ಹೃತ್ತಾಪದಿಂದ ಮೈ ಬೆವರುತ್ತಿದ್ದರೂ ಬೋಸರು ಮೊದಲು ಕಷ್ಟನಷ್ಟಗಳಿಗೀಡಾದವರಿಗೆ ಸಹಾಯವನ್ನು ಏರ್ಪಡಿಸಲು ಪ್ರಯತ್ನಿಸಿದರು.

೧೯೩೦ ನೆಯ ಇಸ್ವಿಯ ಎಪ್ರಿಲ್ ೧೮ ನೆಯ ತಾರೀಖಿನ ದಿವಸ ಆದ ದಂಗೆಯೇ ಈ ಅತ್ಯಾಚಾರಕ್ಕೆ ಕಾರಣವೆಂದು ಹೇಳುತ್ತಾರೆ. ಆ ದಿವಸ ರಾತ್ರಿ

ಯಲ್ಲಿ ಸುಮಾರು ೫೦ ಜನ ದಂಗೆಖೋರರು ಪೋಲೀಸ ಮತ್ತು ಮಿಲಿಟರಿ ಯವರನ್ನು ಮೋಸಗೊಳಿಸಿ, ಅಲ್ಲಿಯ ಯುದ್ಧಸಾಮಗ್ರಿಯ ಕೋಠಡಿಯನ್ನು ಮುತ್ತಿ, ಅನೇಕರನ್ನು ಗಾಯಪಡಿಸಿ, ಕೆಲವರನ್ನು ಕೊಂದು, ಅಲ್ಲಿಯ ಯುರೋಪಿಯನ್ನರಿಗೆ ಕೊಲೆಯ ಬೆದರಿಕೆ ಹಾಕಿ ಪಾರಾಗಿ ಹೋಗಿದ್ದರು. ತಪ್ಪಿಸಿಕೊಂಡು ಓಡಿಹೋಗಿದ್ದ ಬಂಗಾಲ ಕ್ರಾಂತಿಕಾರ ತರುಣರ ತಂಡವೇ ಆ ದರೋಡೆಖೋರರೆಂದು ಸರಕಾರದವರ ತಿಳಿವಳಿಕೆ. ಇವರನ್ನು ಹುಡು ಕುವದಕ್ಕಾಗಿ ಹೆಚ್ಚಿಗೆ ಪೋಲೀಸ ಮತ್ತು ಮಿಲಿಟರಿಯವರ ಸಹಾಯದಿಂದ ಬಂಗಾಲ ಸರಕಾರವು ೫೨ ಹಳ್ಳಿಗಳನ್ನು ಮುತ್ತಿಗೆ ಹಾಕಿದ್ದರು. ಆದರೆ ಚಿತ ಗಾಂಗ ಜಿಲ್ಹೆಯಲ್ಲಿ ಯಾರೂ ಸಿಗಲಿಲ್ಲ· ಚಿತಗಾಂಗದ ಹೊರಗೆ ಮಾತ್ರ ಒಬ್ಬನು ಕೈಮಮಾಡಲ್ಪಟ್ಟನು. ಆದಾಗ್ಯೂ ಸರಕಾರವು ವ್ಯರ್ಥವಾಗಿ ಜನತೆಯನ್ನು ಹಿಂಸಿಸುವದರಲ್ಲಿ ಕಡಿಮೆ ಮಾಡಲಿಲ್ಲ.

ದಿನದಿನವೂ ಪತ್ರಿಕೆಗಳಿಂದ ಚಿತಗಾಂಗದ ಸುದ್ದಿಯು ಹಬ್ಬಹತ್ತಿತು. ಮುಖಂಡರು ಸಾರ್ವಜನಿಕ ಅಭಿಪ್ರಾಯಗಳನ್ನು ಬೈಲಿಗಿಡುತ್ತ ಸರಕಾರ ದವರ ಕೃತ್ಯಗಳನ್ನು ನಿಷೇಧಿಸತೊಡಗಿದರು. ಆದರೆ ಸರಕಾರವು ಯಾರ ಚೀರಾಟಕ್ಕೂ ಲಕ್ಷಕೊಡದೆ ಮೌನವ್ರತವನ್ನು ಧಾರಣಮಾಡಿತು. ದೇಶದ ತುಂಬೆಲ್ಲ ಬೊಬ್ಬೆಕುಟ್ಟ ಹತ್ತಿದಮೇಲೆ ಚೌಕಸಿ ಕಮಿಟಿಯೊಂದನ್ನು ನೇಮಿ ಸಬೇಕಾದರೆ ಸಾಕುಬೇಕಾಗಿಹೋಯಿತು. ಆ ಕಮಿಟಿಯ ವರದಿಯು ಸಹ ನಿಷ್ಪಕ್ಷಪಾತದಿಂದ ಜನರೆಲ್ಲರಿಗೆ ನಿಜವಾದ ಸಂಗತಿಯು ತಿಳಿಯುವಂತೆ ಪ್ರಸಿದ್ಧವಾಗಲಿಲ್ಲ.

ಈ ಕಾಲಕ್ಕೆ ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿಯಲ್ಲಿಯ ಗೃಹಕಲಹವೂ ಮಿತಿಮೀರಿ ಬೆಳೆದಿತ್ತು. ಅದರ ವಿಚಾರಣೆಗಾಗಿ ಶ್ರೀ. ಅಣೆ ಯವರು ಕಲ್ಕತ್ತೆಗೆ ಬಂದಿದ್ದರು. ೧೬ ನೆಯ ಸಪ್ಟಂಬರ ರಾತ್ರಿ ೯ ಘಂಟೆಯ ಸುಮಾರಿಗೆ ಮಿದ್ನಾಪುರ ಜಿಲ್ಹೆಯ ಹಿಜಲಿಯಲ್ಲಿಯ ಅತ್ಯಾಚಾರದ ಹಾಹಾ ಕಾರದ ಸುದ್ದಿಯು ಕೇಳಬಂತು. ಇದರಿಂದ ಬೋಸರ ಕೋಮಲ ಹೃದ ಯಕ್ಕೆ ವಜ್ರಾಘಾತವಾದಂತಾಗಿ ಕೂಡಲೆ ಅವರು ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆಯನ್ನು ಬರೆದು ಕೊಟ್ಟರು. ಕಾಂಗ್ರೆಸದೊಳಗಿನ ಭಿನ್ನಪಂಗಡಗಳನ್ನು ಹೇಗೆ ಮುರಿಯ ಬೇಕೆಂದು ಅವರು ಹಗಲೆಲ್ಲ ಚಿಂತಿಸುತ್ತಿದ್ದರು. ತಮಗೆ ಶಕ್ಯವಿದ್ದ ಎರಡು

ಉಪಾಯಗಳನ್ನು ಇಷ್ಟರಲ್ಲಿ ಮಾಡಿನೋಡಿ ನಿರಾಶರಾಗಿದ್ದರು. ಕಡೆಯದೊಂದೇ ಉಪಾಯವೆಂದರೆ ಅದರಿಂದ ದೂರಸರಿದು ನಿಲ್ಲುವದಾಗಿತ್ತು. ಅದನ್ನು ಕೂಡ ಈಗ ನೆರವೇರಿಸುವ ಕಾಲವೆಂದು ತಿಳಿದು ಅತ್ಯಂತ ಆನಂದದಿಂದ ಹಾಗೆ ಮಾಡಿದರು. ಚಿತಗಾಂಗದ ಅನಾಹುತದ ಸುದ್ದಿಯಿಂದ ಮೊದಲೇ ತಪ್ತವಾದ ಹೃದಯವು ಹಿಜಲಿಯ ಪ್ರಸಂಗವನ್ನು ಕೇಳಿ ಕರಗಿ ನೀರಾಗಿ ಸ್ವಾರ್ಥತ್ಯಾಗದ ಪ್ರವಾಹವಾಗಿ ಕಾರ್ಯರೂಪದಲ್ಲಿ ಹರಿಯಿತು. "ನಾವು ಗೌರವದ ಸ್ಥಾನ ಮತ್ತು ಅಧಿಕಾರಗಳಿಗಾಗಿ ಬಡಿದಾಡುವಾಗ ನಮ್ಮ ಕೊರಳ ಸುತ್ತಲೂ ದಾಸ್ಯದ ಶೃಂಖಲೆಗಳು ಹೆಚ್ಚು ಬಲವಾಗಿ ಬಿಗಿಯಲ್ಪಡುತ್ತವೆ" ಎಂದು ಆಗ ಅವರಿಗೆ ಎನಿಸಿತು. 'ದಾಸ್ಯಶೃಂಖಲೆಯಿಂದ ಬದ್ಧವಾದ ತಾಯ್ನಾಡಿನ' ಚಿತ್ರವು ಅವರ ಹೃದಯಮಂದಿರದಲ್ಲಿ ಒಡಮೂಡಿತು. ಅದಕ್ಕಾಗಿ ಕೂಡಲೆ ನಿರ್ಣಯಿಸಿ ಕಲಹ ಮೂಲವಾದ ಅಧಿಕಾರಸ್ಥಾನವನ್ನು ಧಿಃಕರಿಸಿದರು.

ಸ್ವಾರ್ಥತ್ಯಾಗ, ಆತ್ಮಾರ್ಪಣಗಳ (Self-sacrifice, Self-effacement) ಮಹತ್ಕಾರ್ಯದಿಂದಲೇ ಅವರು ತಮ್ಮ ದೊಡ್ಡಿಸ್ತಿಕೆಯನ್ನು ಗಳಿಸಿಕೊಂಡಂತಾಯಿತು. ಅದರಿಂದ ನಿಜವಾದ ನಾಯಕತ್ವದ ತಮ್ಮ ಅರ್ಹತೆಯನ್ನು ತೋರಿಸಿಕೊಟ್ಟಂತಾಯಿತು. ಅಭಿನಂದನೆಗಳೂ ಸ್ತುತಿಪರ ಲೇಖನಗಳೂ ಸದಿಚ್ಛೆಗಳ ಹೂಮಳೆಗಳೂ ಹಿಂದುಸ್ತಾನದ ಎಲ್ಲ ಭಾಗಗಳಿಂದ ಬಂದು ತುಂಬಿದವು. "ನನ್ನ ಮುಕುಟವು ನನ್ನ ತಲೆಯ ಮೇಲಿಲ್ಲ; ಅದು ನನ್ನ ಅಂತಃಕರಣದಲ್ಲಿದೆ" "My Crown is in my heart and not on my head" ಎಂದು ಬೋಸರು ಹೇಳುತ್ತಿದ್ದುದು ಈಗ ಅವರ ಅಂತಃಕಳಕಳಿಯ ಈ ಕೃತಿಯಿಂದ ಸಿದ್ಧವಾಯಿತು. ಈ ಕಾಲಕ್ಕೆ ಅವರು ದೈವೀಪ್ರೇರಣೆಯಿಂದ ಎಚ್ಚರಿಸಲ್ಪಟ್ಟಂತೆ ಆಗಿ ದೇಶಹಿತಕ್ಕಾಗಿ ಸೆರೆಮನೆಯಲ್ಲಿ ಕೊಳೆಯುವವರ ಚಿತ್ರದಿಂದ ಅವರ ಹೃದಯವು ಕರಗಿ ನೀರಾಗಿ ಅಧಿಕಾರಸ್ಥಾನಕ್ಕೆ ತಿಲಾಂಜಲಿಯನ್ನಿತ್ತದ್ದು ಅವರ ಜೀವನದಲ್ಲಿ ಅತ್ಯಂತ ಮಹತ್ವದ ಸಂಗತಿಯು. ಅದೇ ಕಾಲಕ್ಕೆ ಅವರು ಕಲ್ಕತ್ತೆಯ ನಗರಸಭೆಯ ಉಪಾಧ್ಯಕ್ಷರ ಗೌರವದ ಸ್ಥಾನಕ್ಕೂ ಕೂಡ ರಾಜಿನಾಮೆಯನ್ನು ಕಳುಹಿಸಿದರು. ಹೀಗೆ ಮಾಡುವಾಗ ದೇಶಬಾಂಧವರ ಹೃದಯಗಳೊಳಗಿನ ಉದಾತ್ತಭಾವನೆಗಳನ್ನೆಲ್ಲ ಎಚ್ಚರಿಸಿ, ದೇಶದ ಇಂಥ ಬಿಕ್ಕಟ್ಟಿನ

ಪ್ರಸಂಗದಲ್ಲಾದರೂ ಗೃಹಕಲಹಗಳನ್ನು ಮರೆತು ಎಲ್ಲರ ಸಾಮಾನ್ಯ ವೈರಿಯೊಡನೆ ಬಡಿದಾಡಲು ಎಲ್ಲರೂ ಒಕ್ಕಟ್ಟಾಗಬೇಕೆಂದು ಬೇಡಿಕೊಂಡರು. "ನಾನು ಕಟ್ಟಾನಿಯುಮಿತ ಜೀವಿಯು; ಯಾರ ವಿಷಯದಲ್ಲೂ ನನಗೆ ದುರಿಚ್ಛೆ ಇರುವದಿಲ್ಲ. ನಾನು ವಿನಯಪೂರ್ವಕವಾದ ಕಾಂಗ್ರೆಸ್ ಸ್ವಯಂ ಸೇವಕನಂತೆ ಕಾಂಗ್ರೆಸ್ ಅಧಿಕಾರಿಗಳ ಅಪ್ಪಣೆ ಪಾಲಿಸಲು ಸಿದ್ಧನಿದ್ದೇನೆ. ಕಾಂಗ್ರೆಸ್ ಅಧ್ಯಕ್ಷರು ಯಾರೇ ಇರಲಿ ಅವರ ಅಪ್ಪಣೆಯು ನನಗೆ ಶಿರಸಾ ಮಾನ್ಯವು. ನಾನು ನನ್ನನ್ನು ಗೌರವಸ್ಥಾನದಿಂದ ತಳ್ಳಿಕೊಳ್ಳುವದರಿಂದ ಬಂಗಾಲವು ಉಳಿಯುತ್ತಿದ್ದರೆ ಆ ಪ್ರಸಂಗವನ್ನು ಸಾಧಿಸಿ ನಾನು ಬಂಗಾಲದ ರಕ್ಷಣೆಯ ಬಹುಮಾನವನ್ನು ಪಡೆದು ಧನ್ಯನಾಗುವೆನು. ದೇಶಬಾಂಧವರ ಅಂತರಂಗದ ಯಾವದೊಂದು ಮೂಲೆಯಲ್ಲಿ ನನಗೆ ಅನುವು ದೊರೆತರೆ ಸಾಕು. ಅಷ್ಟರಿಂದಲೇ ನಾನು ತೃಪ್ತಿಹೊಂದುವೆನು" ಎಂದು ಹೇಳುವಾಗ ಅವರ ಹೃದಯುವು ಗೃಹಕಲಕ್ಕಾಗಿ ಎಷ್ಟು ಬೆಂದು ನೊಂದಿರಬೇಕೆಂಬುದನ್ನು ವಾಚಕರೇ ಊಹಿಸಬಹುದಾಗಿದೆ.

ಮರುದಿವಸ ಮುಂಜಾನೆಯೇ ಬೋಸರು ಹಿಜಲಿಗೆ ಪ್ರಯಾಣ ಬೆಳಿಸಿ, ಸಿಪಾಯಿಗಳ ಗುಂಡಿನೇಟಿಗೆ ಆಹುತಿಯಾಗಿ ವೀರಸ್ವರ್ಗವನ್ನೈದಿದ ಶಾಂತೀಶ ಮಿತ್ರ ಮತ್ತು, ತಾರಕೇಶ್ವರ ಸೇನರ ಶವಗಳನ್ನು ಸ್ಪೇಶಲ್ ಟ್ರೇನಿನಿಂದ ಕಲ್ಕತ್ತೆಗೆ ಸಾಗಿಸುವ ವ್ಯವಸ್ಥೆ ಮಾಡಿದರು. ಹೌರಾ ಸ್ಟೇಶನ್ನಿನಿಂದ ಶವಗಳ ಮೆರವಣಿಗೆಯನ್ನು ಹೊರಡಿಸಿದರು. ದುಃಖಮಿಶ್ರಿತ ಘೋಷಗಳಿಂದಲೂ ಹೃದಯಾಕರ್ಷಿತವಾಗುವಂಥ ಶಾಂತತೆಯಿಂದಲೂ ಮೆರವಣಿಗೆಯು ಸಾಗಿತು. ಬೋಸರು ಬರಿಗಾಲಿನಿಂದಲೇ ಕಡೆತನಕ ಅದನ್ನು ಹಿಂಬಾಲಿಸಿ ಶವಗಳೆಲ್ಲ ಸುಡುವವರೆಗೆ ಕಾದಿದ್ದರು.

ದುಃಖದಿಂದ ಎಲ್ಲರೂ ಸಾವಕಾಶವಾಗಿ ತಮ್ಮ ತಮ್ಮ ಮನೆಗಳಿಗೆ ಹೋದರು. ಸುಭಾಸಚಂದ್ರರೂ ತಮ್ಮ ಮನೆಯನ್ನು ಸೇರಿದರು. ಆದರೆ ಅವರ ಚಿತ್ತಕ್ಕೆ ಸ್ವಾಸ್ಥ್ಯವಿರಲಿಲ್ಲ; ಮನಸಿಗೆ ವಿಶ್ರಾಂತಿ ಇರಲಿಲ್ಲ. ಪ್ರಾಂತವನ್ನೆಲ್ಲ ಮತ್ತೊಮ್ಮೆ ಸುತ್ತಿ ಹಾಕಿದರು. ಚೌಕಸಿಗಾಗಿ ಬಿನ್ ಸರಕಾರೀ ಕಮಿಟಿಯೊಂದನ್ನು ನೇಮಿಸಲು ಪ್ರಯತ್ನಿಸಿದರು. ಸರಕಾರೀ ಚೌಕಸಿ ಕಮಿಟಿಯವರೆದುರಿಗೆ ಸಾಕ್ಷಿಗಾಗಿ ಯೋಗ್ಯ ಪ್ರತಿನಿಧಿಗಳನ್ನು ಕಳುಹಲು ಡೆಟೆನ್ಯೂಗಳ ಮನವೊಲಿಸಿದರು. ತಾವೂ ಆ ಕಾಲಕ್ಕೆ ಅಲ್ಲಿ ಹಾಜರಿದ್ದರು.

ಸರಕಾರೀ ಚೌಕಸಿ ಕಮೀಟಿಯರ ನಿರ್ಣಯಗಳು ಕೈದಿಗಳ ಪಕ್ಷವನ್ನು ಪ್ರೋತ್ಸಾಹಿಸುವಂತೆ ಇರದಿದ್ದರೂ "ಸಿಪಾಯಿಗಳು ಗೋಳೀಬಾರು ಮಾಡಿದ್ದು ಅನ್ಯಾಯವೆಂದೂ, ನಿರ್ದಿಷ್ಟ ವ್ಯಕ್ತಿಗಳ ಮೇಲಲ್ಲದೆ ಎಲ್ಲ ಗುಂಪಿನ ಮೇಲೆ ಕೈಮಾಡತಕ್ಕದ್ದಲ್ಲ" ವೆಂದೂ ಅವು ಒಪ್ಪಿಕೊಳ್ಳುತ್ತವೆ. ಮೊದಲು ಅನ್ಯಾಯ ದಿಂದ ವರ್ತಿಸಿ ಅದನ್ನು ನ್ಯಾಯವೆಂದು ಸಿದ್ಧಮಾಡಿಕೊಳ್ಳುವದಕ್ಕಾಗಿ ಸರ ಕಾರದವರು ಈ ಕಮೀಟಿಯವರ ಮುಖಾಂತರ ಯತ್ನ ನಡೆಯಿಸಿದ್ದರು. ಇಂಥ ಕಮೀಟಿಯಲ್ಲಿ ಪ್ರಜೆಗಳಿಗೆ ನ್ಯಾಯ ಸಿಗುವದು ದುರ್ಲಭವೇ ಸರಿ. ಈ ಕಮೀಟಿಯ ವರದಿಯ ವಿಷಯಕ್ಕೆ ಸುಭಾಸಚಂದ್ರರು ಹೀಗೆನ್ನುತ್ತಾರೆ:-

" ಈ ವರದಿಯು ಏಕಪಕ್ಷೀಯವಾಗಿದೆ. ಹಿಜಲಿ ಡೆಟೆನ್ಯೂ ಕ್ಯಾಂಪದ ಅಧಿಕಾರಿಗಳ ಪತಿಯಿಂದ ಚೌಕಸಿ ಕಮೀಟಿಯ ಮುಂದೆ ನಿಂತ ರಾಯಬಹಾ ದ್ದೂರ ನಾಗೇಂದ್ರನಾಥ ಬ್ಯಾನರ್ಜಿಯವರ ಮತವನ್ನೇ ಅದು ವ್ಯಕ್ತ ಮಾಡಿದೆ. ಡೆಟೆನ್ಯೂಗಳಿಗೆ ಇದರಲ್ಲಿ ನ್ಯಾಯವೆಷ್ಟೂ ದೊರೆತಿಲ್ಲ. ಈ ಕಮೀಟಿಯವರೇ ಒಪ್ಪಿಕೊಂಡ ಮೂರು ಸಂಗತಿಗಳನ್ನು ನೋಡಿದರೆ ನಿಜ ಸ್ಥಿತಿಯ ಕಲ್ಪನೆಯಾಗದಿರಲಾರದು. (೧) ಯೋಗ್ಯ ವಿಚಾರವಿಲ್ಲದೆ ಕ್ಯಾಂಪಿನ ಮುಖ್ಯ ಮಂದಿರದ ಮೇಲೆ ಸಿಪಾಯರು ಗುಂಡಿನ ಮಳೆಗರೆದದ್ದು ನಿಜ. (೨) ಕ್ಯಾಂಪಿನಲ್ಲಿ ಆ ದಿವಸ ಜವಾಬದಾರೀ ಅಧಿಕಾರಿಗಳಿರಲಿಲ್ಲ. (೩) ಈ ಅನಾಹುತವು ಹಿಂದಿನ ದಿನವೇ (ತಾ. ೧೫ಕ್ಕೆ) ಜರಗುತ್ತಿತ್ತೆಂದೂ, ಕಮಾಂಡರ ಬೇಕರವರ ಹಾಜರಿಯು ಅದನ್ನು ತಡೆಯಿತೆಂದೂ ಒಪ್ಪಿಕೊಳ್ಳುವದು. ಗುಂಡಿನ ಏಟಿನಿಂದ ಅಟ್ಟದ ಮೇಲಿದ್ದ ಬಾಬು ತಾರಕೇಶ್ವರ ಸೇನಗುಪ್ತ ಮತ್ತು ಶಾಂತೀಶಕುಮಾರ ಮಿತ್ರರು ಮಡಿದರು. ಒಬ್ಬನ ಕೈಯು ಪೂರಾ ಹೋಯಿತು. ಅನೇಕರು ಗಾಯಹೊಂದಿದರು. ಅಲ್ಲದೆ ಸಿಪಾಯರು ಕ್ಯಾಂಪನ್ನು ಒಳನುಗ್ಗಿ ಲಾಠಿ, ಬೆಯೊನೆಟ್‌ಗಳಿಂದ ಡೆಟೆನ್ಯೂಗಳನ್ನು ಮನ ಬಲ್ಲಂತೆ ಹಿಂಸಿಸಿದರು. ಈ ಅನಾಹುತದ ನಿಜವಾದ ಪ್ರತ್ಯಕ್ಷ ಕಾರಣವನ್ನು ಕಮೊಟಿಯವರಿಂದ ಕಂಡುಕೊಳ್ಳುವದಾಗಿಲ್ಲ. ಆದರೆ ಅದರ ಅಪ್ರತ್ಯಕ್ಷ ಕಾರಣ ವೆಂದರೆ ಆ ದಿನ ಕ್ಯಾಂಪಿನ ಜವಾಬದಾರಿಯೆಲ್ಲ ಸಿಪಾಯರ ಮತ್ತು ಕೆಲವು ಹವಾಲದಾರರ ಕಡೆಗೆ ಇದ್ದದ್ದೇ ಎಂದು ರಿಪೋರ್ಟಿನ ಕೊನೆಗೆ ಕಾಣಿಸಿದ್ದು ಎಷ್ಟು ಅಸಮಂಜಸವೆಂಬುದನ್ನು ವಿಚಾರವಂತರು ತಿಳಿಯದಿರಲಾರರು. ಅಲ್ಲದೆ ಕಮಾಂಡರ ಬೇಕರರ ಜವಾಬಿನಂತೆ ಅವರು ಹಾಜರಿರದಿದ್ದರೆ ಈ

ಅನಾಹುತವು ೧೫ ನೆಯ ತಾರೀಖಿನ ದಿವಸವೇ ಜರುಗುವದಿತ್ತಂತೆ. ಇದು ತಿಳಿದಮೇಲೆಯೂ ಕಮಾಂಡರರು ಅಂಥ ದುರ್ಧರ ಪ್ರಸಂಗವು ಜರುಗದಂತೆ ಏನು ಏರ್ಪಾಡು ಮಾಡಿದರು? ಏನೂ ಮಾಡಲಿಲ್ಲವೆಂದಮೇಲೆ ಅದಕ್ಕೆ ಅವರ ಸಹಾನುಭೂತಿ ಇತ್ತೆಂದು ಅರ್ಥವಾಗುವದಿಲ್ಲವೋ? ಮತ್ತು ಮರುದಿವಸವೇ ಕ್ಯಾಂಪಿನ ಆಡಳಿತವನ್ನೆಲ್ಲ ಕೆಲವು ಬೇಜವಾಬದಾರೀ ಹವಾಲದಾರ ಮತ್ತು ಪೋಲೀಸರ ಮೇಲೆ ಬಿಡುವ ಸಾಹಸವನ್ನು ಹೇಗೆ ಮಾಡಿದರು? ಇದನ್ನೆಲ್ಲ ವಿಚಾರಿಸಿದರೆ ಕ್ಯಾಂಪಿನ ಆಡಳಿತವು ಹೇಗಿತ್ತು? ಮತ್ತು ಅಲ್ಲಿಯ ಜವಾಬದಾರೀ ಅಧಿಕಾರಿಗಳು ಹೇಗಿದ್ದರೆಂಬುದು ತಿಳಿಯದಿರಲಾರದು. ಕಮಾಂಡಂಟ, ಅಸಿಸ್ಟಂಟ ಕಮಾಂಡಂಟ ಮತ್ತು ಇನಸ್ಪೆಕ್ಟರ್ ಮಾರ್ಶಲ್ ಮೊದಲಾದವರ ಸವಲತ್ತಿಲ್ಲದೆ ಸಿಪಾಯಿಗಳು ಇಂಥ ಭಯಂಕರವಾದ ಅನಾಹುತವನ್ನು ಮಾಡುವದು ಅಶಕ್ಯವು. ಒಂದುವೇಳೆ ಇಂಥ ಸಂಗತಿಗಳು ಇವರಿಗೆ ತಿಳಿಯದಂತೆ ಜರುಗಿದವೆಂದು ತಿಳಿದರೆ ಇವರ ಆಡಳಿತದ ಯೋಗ್ಯತೆ ಮತ್ತು ಕಟ್ಟುಗಳ ರಕ್ಷಣೆಗಳನ್ನೂ ಪ್ರಶ್ನೆ ಮಾಡಬಹುದಲ್ಲವೆ? ಒಟ್ಟಿನ ಮೇಲೆ ಕ್ಯಾಂಪಿನ ಆಡಳಿತವು ತೀರಾ ಅಸಹ್ಯವಾಗಿತ್ತೆಂದೂ, ಅನಾಹುತದ ಎಲ್ಲ ತಪ್ಪಿಗೂ ಅದರ ಅಧಿಕಾರಿಗಳೇ ಜವಾಬದಾರರೆಂದೂ ಹೇಳಬಹುದು."

"ಕಮಿಟಿಯವರೆದುರಿಗೆ ಸಾಕ್ಷಿ ಹೇಳುವಾಗ ಒಬ್ಬ ಸಿಪಾಯಿಯು ಸರಕಾರಿ ಸೊತ್ತಾದ ತುಬಾಕಿಯು ಒಬ್ಬ ಕೈದಿಯ ಪ್ರಾಣಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದಾದ್ದರಿಂದ, ಕೈದಿಯ ಪ್ರಾಣ ಹರಣಮಾಡಿ ತುಬಾಕಿಯನ್ನು ಉಳಿಸಿಕೊಳ್ಳಬೇಕಾಯಿತೆಂದು ಜವಾಬು ಕೊಟ್ಟಿದ್ದಾನೆ. ಇಂಥ ಸಿಪಾಯಿಗೆ ಯೋಗ್ಯ ಶಿಕ್ಷೆಯು ವಿಧಿಸಲ್ಪಡಲಿಲ್ಲವೆಂಬುದರ ಮೇಲಿಂದ ಬ್ರಿಟಿಶ ಸರಕಾರದಲ್ಲಿ ಒಂದು ಮಾನವ ಪ್ರಾಣಕ್ಕಿಂತ ಒಂದು ನಿರ್ಜೀವ ತುಬಾಕಿಗೆ ಹೆಚ್ಚು ಮಹತ್ವವಿರುವದೆಂದಂತಾಗುವದಿಲ್ಲವೋ? ಬ್ರಿಟಿಶರ ಆಡಳಿತದಲ್ಲಿ ಮಾನವ ಪ್ರಾಣಿಯ ಮೂಲ ಹಕ್ಕುಗಳನ್ನು ಕೂಡ ನಾವು ಉಪಭೋಗಿಸಲಾರೆವೆಂದು ಇದರಿಂದ ಸಿದ್ಧವಾಗುತ್ತದೆ. ಜೀವಿಸುವ ನಮ್ಮ ಹಕ್ಕು ಮತ್ತು ಆಸ್ತಿಯ ಮೇಲಿನ ನಮ್ಮ ಬಾಧ್ಯತೆಗಳು ಇನ್ನುಮೇಲೆ ಹೇಗೆ ಸುರಕ್ಷಿತವಾಗಿ ಉಳಿಯಬೇಕು? ಇಂಥ ಮೂಲ ಬಾಧ್ಯತೆಗಳಿಗೂ ಕೂಡ ಅಡ್ಡಿತರುವ ರಾಜ್ಯಘಟನೆಗೆ ನಾವೆಷ್ಟು ದಿವಸ ಅಂಕಿತರಾಗಿರಬೇಕು?" ಎಂದು ಹೇಳುತ್ತ ಸುಭಾಸಚಂದ್ರರು ಪ್ರತಿತಿಂಗಳ ೧೬ನೆಯ ತಾರೀಖಿನ ದಿನವು ಹಿಜಲಿ ದಿನವೆಂದು ಆಚರಿ

ಸಲ್ಪಡಬೇಕೆಂದು, ಸಾರಿ ಈ ಪ್ರಶ್ನೆಯನ್ನು ಅಖಿಲ ಭಾರತ ಪ್ರಶ್ನೆಯನ್ನಾಗಿ ಮಾಡಲು ಪ್ರಯತ್ನಿಸಿದರು.

ಸಾರ್ವಜನಿಕ ಪ್ರತಿನಿಧಿಗಳೆಲ್ಲರೂ ಕೂಡಿ ತಮ್ಮ ಬೇಡಿಕೆಗಳನ್ನು ಸರಕಾರದೆದುರಿಗೆ ಇರಿಸಬೇಕೆಂದೂ ಅದರಲ್ಲಿ ಈ ನಾಲ್ಕು ಸೂಚನೆಗಳನ್ನು ಸೇರಿಸಬೇಕೆಂಮೂ ಹೇಳಿದರು. (೧) ಅನಾಹುತ ಮಾಡಿದವರನ್ನು ಶಿಕ್ಷಿಸಬೇಕು. (೨) ಆ ಕಾಲಕ್ಕೆ ಆದ ಹಾನಿಯನ್ನೆಲ್ಲ ತುಂಬಿಕೊಡಬೇಕು. (೩) ಯಾವ ಕರಾರೂ ಇಲ್ಲದೆ ಎಲ್ಲ ಡೆಟೆನ್ಯುಗಳನ್ನು ಬಂಧಮುಕ್ತಮಾಡಬೇಕು. (೪) ಮುಂದೆ ಇಂಥ ಅನಾಹುತಗಳಾಗದಂತೆ ಸರಕಾರವು ಎಚ್ಚರಪಡತಕ್ಕದ್ದು.

ನವ್ಹಂಬರ ೫ ನೆಯ ತಾರೀಖಿಗೆ ಕಲ್ಕತ್ತೆಯಲ್ಲಿ ಪ್ರಫುಲ್ಲಚಂದ್ರರಾಯರ ಅಧ್ಯಕ್ಷತೆಯಲ್ಲಿ ಸಭೆ ಕೂಡಿ ಈ ವಿಷಯದಲ್ಲಿ ಮಹತ್ತರವಾದ ಠರಾವುಗಳಾದದ್ದಲ್ಲದೆ, ಸರಕಾರೀ ಅಧಿಕಾರಿಗಳಲ್ಲದವರ ಒಂದು ಚೌಕಸಿ ಕಮೀಟಿಯನ್ನು ನೇಮಿಸಿದರು. ಅದರಲ್ಲಿ ಸುಭಾಸ ಬೋಸ, ಬಿ. ಸಿ. ಚಾತರ್ಜಿ, ಜೆ. ಸಿ. ಗುಪ್ತ, ಟಿ. ಸಿ. ಗೋಸ್ವಾಮಿ, ಅಕ್ರ್ಯಾಮಖಾನ ಮೊದಲಾದವರಿದ್ದರು. ಇವರು ಬೇಗನೆ ಡಾಕಾಕ್ಕೆ ತೆರಳಿ ಅಲ್ಲಿ ಡನೋರ್‌ ದಂಗೆಯಾದನಂತರ ಉಂಟಾದ ಪರಿಸ್ಥಿತಿಯನ್ನು ವಿಚಾರಿಸಬೇಕಾಗಿ ನಿರ್ಣಯಿಸಿದರು.

ಅ. ಭಾ. ಕಾಂಗ್ರೆಸ ವರ್ಕಿಂಗ ಕಮೀಟಿಯವರು ಈ ವಿಷಯಗಳಲ್ಲಿ ಸಾಕಷ್ಟು ಮನಸು ಹಾಕಲಿಲ್ಲವಾದ್ದರಿಂದ ಬೋಸರು ಕೋಪಿಷ್ಠರಾದರು. ಆ ಕಾಲಕ್ಕೆ ರಾಷ್ಟ್ರಪತಿಗಳಾದ ವಲ್ಲಭಭಾಯಿಯವರು ತಮಗೆ ಆಫೀಸಿನಿಂದ ಈ ವಿಷಯದಲ್ಲಿ ಏನೂ ತಿಳಿದಿಲ್ಲವೆಂದು ಪ್ರೆಸ್ ಸುದ್ದಿಗಾರರಿಗೆ ಹೇಳಿದ್ದನ್ನು ಕೇಳಿ ಬೋಸರ ಸಿಟ್ಟು ಹಿಡಿಸಲಾರದೆ ಹೊರಬಿದ್ದಿತು.

"........ಬಂಗಾಲವು ತನ್ನ ವಿಭಾಗ (ವಂಗಭಂಗ) ದ ೧೯೦೬ ರ ನಿರ್ಣಯಿಸಲ್ಪಟ್ಟ ನಿರ್ಣಯಗಳನ್ನು ಏಕಾಂಗಿಯೂ ಅಸಹಾಯಕವೂ ಆಗಿ ತಾನೇ ಬದಲುಮಾಡಿಕೊಂಡಿದೆ; ಎಂದಮೇಲೆ ಈಗ ೧೯೩೧ ರ ಅನ್ಯಾಯಗಳನ್ನು ಅದು ಏಕಾಂಗಿಯಾಗಿಯೇ ತಿದ್ದಿಕೊಳ್ಳಬಲ್ಲದು. ಅದಕ್ಕೆ ವರ್ಕಿಂಗ ಕಮೀಟಿಯವರ ಅಥವಾ ಹಿಂದುಸ್ಥಾನದ ಯಾವದೇ ಭಾಗದವರ ಸಹಾಯವೂ ಬೇಕಾಗಿಲ್ಲ" ಎಂದು ಹೇಳಿದರು. ("........If Bengal could unsettle the 'Settled' facts of Partition in 1906 alone and unaided, She could also undo her wrongs

in 1931 single handed- without the help of the Working Committee and the rest of India.") ಆದರೆ ಎರಡು ತಿಂಗಳುಗಳು ಕಳೆದುಹೋದ ಮೇಲೆ ವರ್ಕಿಂಗ ಕಮಿಟಿಯವರು ಕೆ. ಎಫ್. ನರಿಮನ್ ಮತ್ತು ಬಾಬುರಾಜೇಂದ್ರ ಪ್ರಸಾದರನ್ನು ಈ ವಿಷಯದ ವಿಚಾರಣೆಗಾಗಿ ನೇಮಿಸಿದರು. ಬಂಗಾಲಕ್ಕೆ ಸಹಾನುಭೂತಿ ಸಹಕಾರದ ಬೆಂಬಲಗಳನ್ನು ಕೊಡಲು ಆಶ್ವಾಸನವಿತ್ತರು.

ಗಾಂಧಿ ಅಯರ್ವಿನ್ನರ ಒಪ್ಪಂದದ ಕಾಲದಲ್ಲಿ ಕೂಡ ಸರಕಾರವು ನಡೆಯಿಸಿದ್ದ ದಬ್ಬಾಳಿಕೆಗೆ ಪ್ರತೀಕಾರವಾಗಿ ಬಂಗಾಲವು ಬ್ರಿಟಿಶಮಾಲಿನ ಬಹಿಷ್ಕಾರವನ್ನು ಬಲಪಡಿಸಿತು. ಇದಕ್ಕಾಗಿ ಬಂಗಾಲ ಪ್ರಾಂತಿಕ ಕಾಂಗ್ರೆಸ್ ಸ್ಪೆಶಲ್ ಅಧಿವೇಶನವು ಮುರ್ಶಿದಾಬಾದ ಜಿಲ್ಹೆಯ ಬಹ್ರ್ಯಾಂಪುರದಲ್ಲಿ ಕೂಡಿತು. ಈ ಪರಿಷತ್ತಿನಲ್ಲಿ ಸುಭಾಸಚಂದ್ರರೇ ಮುಖ್ಯ ನಾಯಕರಾಗಿದ್ದಾಗ್ಯೂ ಅದರ ಅಧ್ಯಕ್ಷಸ್ಥಾನವನ್ನು ನಿರಾಕರಿಸಿದರು. ಚಂದಾಪುರದ ನಾಯಕರು ಅಧ್ಯಕ್ಷಸ್ಥಾನವನ್ನು ವಹಿಸಿದರು. ಅಲ್ಲಿ ಆದ ಮುಖ್ಯ ಠರಾವುಗಳು:-

(೧) ಬಹಿಷ್ಕಾರ

(ಅ) ಬ್ರಿಟಿಶ ಮಾಲಿನ ವಿಶೇಷತಃ ಬ್ರಿಟಿಶ ಬಟ್ಟೆಯ ಬಹಿಷ್ಕಾರ

(ಬ) ಬ್ರಿಟಿಶ ಬ್ಯಾಂಕುಗಳ ಬಹಿಷ್ಕಾರ

(ಕ) ಬ್ರಿಟಿಶ ಇನ್‌ಶ್ಯೂಅರನ್ಸ ಕಂಪನಿಗಳ ಬಹಿಷ್ಕಾರ

(ಡ) ಆಂಗ್ಲೋ ಇಂಡಿಯನ್ ಪತ್ರಿಕೆಗಳ ಬಹಿಷ್ಕಾರ

(೨) ಎಲ್ಲ ಡೆಟಿನ್ಯೂಗಳನ್ನು ಬೇಗನೆ ಬಿಡಬೇಕು

ಈ ವರ್ಷದಲ್ಲಿ ಸುಭಾಸಚಂದ್ರರು ಪುನಃ ಎರಡುಸಾರೆ ಬಂಧಿಸಲ್ಪಟ್ಟರು. ೧೪೪ ನೆಯ ಕಲಮು ಅವರನ್ನು ಬಂಧಿಸುವದಕ್ಕಾಗಿಯೇ ಹೊರಟಂತೆ ಜನರಿಗೆ ಎನಿಸಹತ್ತಿತು. ಅಕ್ಟೋಬರ ತಿಂಗಳಲ್ಲಿ ಒಮ್ಮೆ ಅವರು ಬ್ಯಾರ್‍ಯಾಕಪೂರ ಸಬ್‌ಡಿವ್ಹಿಜನ್‌ದಲ್ಲಿರುವ ಜಯತ್‌ದಲ್ಲಿ ಕೂಡಲಿದ್ದ ಜೂಟ ಕೆಲಸಗಾರರ ಸಭೆಗೆ ಅಧ್ಯಕ್ಷರಾಗಿ ಹೊರಟಿದ್ದರು. ಆ ಕಾಲಕ್ಕೆ ನವೋಪರಾ ಸ್ಟೇಶನದಲ್ಲಿ ಯುರೋಪಿಯನ್ ಪೋಲೀಸ ಅಧಿಕಾರಿಗಳು ಇವರನ್ನು ತಡೆದು ಕಲ್ಕತ್ತೆಗೆ ತಿರುಗಿ ಹೋಗ ಹೇಳಿದರು. ಆದರೆ ಬೋಸರು ತಮ್ಮನ್ನು ತಡೆಯುವದು ಅನ್ಯಾಯವೆಂದು ಸಾಧಿಸಿದರು. ಎರಡು ದಿವಸಗಳ ವರೆಗೆ ಅವರನ್ನು ಅಲ್ಲಿಯೇ ತಡೆದುಹಾಕಿ ಮುಂದೆ ೧೪೪ ನೆಯ ಕಲಮನ್ನು ಹಿಂತಿ

ರುಗಿ ತಕ್ಕೊಂಡು ಅವರನ್ನು ಬಿಟ್ಟುಬಿಟ್ಟರು. ಬೋಸರು ಇನ್ನೂ ಪ್ರತಿಬಂಧಿಸಿದ ಸ್ಥಳದಲ್ಲಿ ಕಾಲಿಡುವ ಪೂರ್ವದಲ್ಲಿಯೇ ಬಂಧಿಸಲ್ಪಟ್ಟುದುದು ಅನ್ಯಾಯವಾಗಿತ್ತು. ಅದಕ್ಕಾಗಿ ಸರಕಾರದವರು "ಬೋಸರನ್ನು ತಡೆದುಹಾಕಿದ್ದರೂ ಅವರನ್ನು ಬಂಧಿಸಿ ಕೈಸೆರೆಮಾಡಲಿಲ್ಲ" ವೆಂದು ಪ್ರಸಿದ್ಧ ಮಾಡಿದರು.

ಎರಡನೆಯ ಸಾರೆ ಬೋಸರು ಬಿನ್ ಸರಕಾರೀ ಚೌಕಸಿ ಕಮಿಟಿಯ ಚೇಅರಮನ್‌ರಾಗಿ ಡಾಕಾದ ಪೋಲೀಸರ ಅತ್ಯಾಚಾರ ಮತ್ತು ಡನೋರ್ದ ದಂಗೆಯ ವಿಚಾರಣೆಗಾಗಿ ಜೆ. ಸಿ. ಗುಪ್ತ ಮೊದಲಾದವರೊಡನೆ ಹೊರಟಿದ್ದರು. ಆ ಕಾಲಕ್ಕೆ ೧೪೪ ನೆಯ ಕಲಮಿನ ಪ್ರಕಾರ ಅವರನ್ನು ನೈರಗಂಜ ಸ್ಟೇಶನದಲ್ಲಿ ನವ್ಹಂಬರ ೭ ನೆಯ ತಾರೀಖಿನ ದಿವಸ ತಡೆದು ಕಲ್ಕತ್ತೆಗೆ ಹಿಂತಿರುಗಿ ಹೋಗಲು ಆಜ್ಞಾಪಿಸಿದರು. ಆದರೆ ಇವರು ಆ ಮಾರ್ಗವನ್ನು ತ್ಯಜಿಸಿ ಕೋಮಿಲ್ಲಾದ ಮಾರ್ಗವಾಗಿ ಡಾಕಾಕ್ಕೆ ಹೊರಟರು. ಡಾಕಾದಿಂದ ನಾಲ್ಕು ಮೈಲು ದೂರವಿರುವ ತೇಜಪುರ ಸ್ಟೇಶನದಲ್ಲಿ ನವ್ಹಂಬರ ೧೧ ಕ್ಕೆ ಪುನಃ ಕೈದುಮಾಡಲ್ಪಟ್ಟು ಅಲ್ಲಿಂದ ಡಾಕಾ ಜೇಲಿಗೆ ರವಾನಿಸಲ್ಪಟ್ಟರು. ಕಡೆಗೆ ಸರಕಾರದವರು ಇವರ ಮೇಲಿನ ಮೊಕದ್ದಮೆಯನ್ನು ತೆಗೆದು ಹಾಕಿ ಇವರನ್ನು ಮುಕ್ತಮಾಡಿದರು.

ಈ ಪ್ರಕಾರ ಬೋಸರ ಈ ಎರಡು ವರ್ಷಗಳ ಜೀವನವು ಯೋಧನ ಜೀವನವಾಗಿದೆ. ವಿಪರೀತ ಪರಿಸ್ಥಿತಿಯೊಡನೆ ವೀರಯೋಧನಂತೆ ಕಾದಾಡಿದ್ದಲ್ಲದೆ, ತುಳಿಯಲ್ಪಟ್ಟಷ್ಟು ಸಲವೂ ಹೆಚ್ಚೆಚ್ಚು ಪ್ರತಾಪಶಾಲಿಯಾಗಿ ಇವರು ಹೊರಬೀಳುತ್ತಿದ್ದರು. ಇವರ ಉತ್ಸಾಹವು ಅನಂತವಾದದ್ದಿದೆ. ಕಳಕಳಿಯು ಕೆಚ್ಚು ಅಜಿಂಕ್ಯವಾಗಿದೆ. ದೇಶಸೇವಾ ಭಾವನೆಯು ಅಖಂಡವೂ ಅಸದೃಶವೂ ಆಗಿದೆ.

*

*

## ೧೧. ೧೯೩೧ರ ಕೊನೆಯ ವಾರ

ಡಿಶಂಬರ ತಿಂಗಳ ಕೊನೆಯಲ್ಲಿ ಬೋಸರು ಗುಜರಾಥ ತರುಣರ ಪರಿಷತ್ತಿನ ಅಧ್ಯಕ್ಷರಾಗಿ ಗುಜರಾಥವನ್ನು ಸಂದರ್ಶಿಸಿದರು. ಅದೇ ಕಾಲಕ್ಕೆ ಅಂದರೆ, ೧೯೩೧ ನೆಯ ಡಿಶಂಬರ ೨೨ ನೆಯ ತಾರೀಖಿನ ದಿವಸ ಪುಣೆ ಯಲ್ಲಿ ಜರುಗಿದ ಯುವಕ ಪರಿಷತ್ತಿನ ಅಧ್ಯಕ್ಷರಾಗಿ ಬಂದು ಮಹಾರಾಷ್ಟ್ರದ ಎಲ್ಲ ಭಾಗಗಳನ್ನೂ ಬೋಸರು ಸುತ್ತುಹಾಕಿದರು. ಎರಡನೆಯ ಚಕ್ರಗೋಷ್ಠಿಯಿಂದ ಮರುಳಿಬರಲಿದ್ದ ಮಹಾತ್ಮಾಜಿಯವರ ಸ್ವಾಗತದ ವರೆಗೆ (ತಾ. ೨೮ ರ ವರೆಗೆ) ಸುಭಾಸಚಂದ್ರರು ಒಳ್ಳೇ ಲಗುಬಗೆಯಿಂದ ಮಹಾ-ರಾಷ್ಟ್ರದ ಯುವಕರನ್ನೆಲ್ಲ ಎಚ್ಚರಿಸಿದರು. ಯುವಕ ಸಭೆಯಲ್ಲಿ ಮಾಡಿದ ಅವರ ಭಾಷಣದ ಸಾರಾಂಶವು ಪರಿಶೀಲನಾರ್ಹವಾಗಿದೆ.

“ ಗೆಳೆಯರೇ ನಮ್ಮ ಗತ ವೈಭವನ್ನು ಮರುಳಿನೋಡಿರಿ. ಗತ ಸಂಸ್ಕೃತಿಯ ಮೇಲೆ ನನ್ನ ಪ್ರೇಮವು ಅತುಲವಾಗಿದೆ. ಕಳೆದುಳಿದ ಸ್ಥಿತಿಯಲ್ಲಿಯೇ ಕಲ್ಪನೆಯ ಕಾಲ್ದುದಿಯಮೇಲೆ ನಿಂತು ಇನ್ನು ಮುಂದೆಬರಲಿರುವ ಭಾವೀ ಭಾರತ ರಾಷ್ಟ್ರವೈಭವವನ್ನು ಕಾಣಲು ನನಗೆ ಅತ್ಯಂತ ಅಭಿಮಾನವೆನಿಸುತ್ತದೆ. ಯುವಕ ಚಳವಳಿಯು ಈಗ ದುರ್ಲಕ್ಷಿಸಕೂಡದಷ್ಟು ಬಲಿಷ್ಠವೂ ಸ್ಪಷ್ಟವೂ ಆಗಿದೆ. ತಾರುಣ್ಯದ ಚಳವಳಿಯು ಜಗತ್ತಿನಲ್ಲಿಯ ಕಾಲಮಾನ ಪರಿಸ್ಥಿತಿಗಳನ್ನು ಬದಲುಮಾಡಲು ತವಕಿಸುತ್ತಿರುವದು. ಈಗ ಇರುವದಕ್ಕಿಂತ ಹೆಚ್ಚು ಒಳಿತಾದ ಪರಿಸ್ಥಿತಿಯನ್ನು ಕಲ್ಪಿಸುವ ಶಕ್ತಿಯೇ ತರುಣರ ಜೀವನದ ಕೆಚ್ಚಾಗಿದೆ. ಕನಸುಗಳು ಮತ್ತು ಆದರ್ಶಗಳ ಕಲ್ಪನೆಗಳು ತರುಣರಲ್ಲಿ ಮನೆಮಾಡಿಕೊಂಡಿರುವವು. ಇದರಿಂದಲೇ ತರುಣರು ಪ್ರೋತ್ಸಾಹಗೊಂಡು ತಮಗೂ ತಮ್ಮ ನಾಡಿಗೂ ನವೀನವಾದ ಸಾಮಾಜಿಕ, ನೈತಿಕ ಮತ್ತು ರಾಜಕೀಯ ಪರಿಸ್ಥಿತಿಗಳನ್ನು ಹುಟ್ಟಿಸುವದರಲ್ಲಿ ತೊಡಗಿರುವರು. ಮಾರ್ಗದಲ್ಲಿಯ ಎಡರು ತೊಡರುಗಳನ್ನು ಲೆಕ್ಕಿಸದೆ ತರುಣರಾದ ನಾವು ಈಗ ವಸ್ತುಸ್ಥಿತಿಯೊಡನೆ ಕಾದುತ್ತಿದ್ದೇವೆ.

ನಾವು ಸ್ವಾತಂತ್ರ್ಯದಾಹದಿಂದ ಈಗ ಕಂಗೆಟ್ಟಿದ್ದೇವೆ. ಎಲ್ಲ ಪರಿಯಿಂದಲೂ ಪರಿಪೂರ್ಣವಾಗಿ ಸ್ವತಂತ್ರರಾದರೆ ಮಾತ್ರ ನಮ್ಮ ಹಸಿವು ಹಿಂಗುವದು. ಇಂಥ ಸ್ವಾತಂತ್ರ್ಯವು ನಮ್ಮ ಗಂಟಲದಲ್ಲಿಳಿಯದಷ್ಟು ದೊಡ್ಡದಾದ ತುತ್ತೆಂದು ಕೆಲವರು ಅನ್ನುತ್ತಾರೆ. ಹಾಗೆನ್ನುವದು ಶುದ್ಧ ತಪ್ಪು. ನಿಜವಾದ ಶಾಶ್ವತ ಬಲವೂ ಅಜಿಂಕ್ಯವಾದ ಶಕ್ತಿಯೂ ಅಂಥ ಸ್ವಾತಂತ್ರ್ಯದಿಂದ ಮಾತ್ರ ಬರುವದು. ಅದು ತಾನಾಗಿಯೇ ನಮ್ಮ ಅಂತರಂಗದಲ್ಲಿ ಸೇರಿ ವಿಚಿತ್ರವಾದ ಪರಿಣಾಮವನ್ನುಂಟುಮಾಡುವದೆಂಬದರಲ್ಲಿ ಸಂದೇಹವಿಲ್ಲ.

ಕಾಂಗ್ರೆಸಿನವರು ಯುವಕರನ್ನು ಅಲಕ್ಷಿಸುತ್ತ ನಡೆದಿರುವದರಿಂದಲೇ ಅವರ ಪ್ರಗತಿಯು ಸಾಕಷ್ಟು ಆಗದೆ ಅನೇಕ ಯುವಕ ಸಂಘಟನೆಗಳು ಕಾಂಗ್ರೆಸ್ ತತ್ವಕ್ಕೆ ವಿರೋಧಿಗಳಾಗಿ ಪರಿಣಮಿಸಹತ್ತಿವೆ. ಯುವಕರ ಪ್ರಗತಿಪರ ಮತ್ತು ಉತ್ಕ್ರಾಂತಿಕಾರಕ ಉಗ್ರ ತತ್ವಗಳನ್ನು ಕಾಂಗ್ರೆಸಿನವರು ಸ್ವೀಕರಿಸುವದರಿಂದ ಹೆಚ್ಚು ಬೇಗನೇ ಕೆಲಸಗಳಾಗುವವು.

ತರುಣರ ಎಚ್ಚರಿಕೆಯ ಕೂಗನ್ನು ಕೇಳದಷ್ಟು ಕಿವುಡರಾಗಿದ್ದರಿಂದಲೇ ಕಾಂಗ್ರೆಸ ಪಕ್ಷದವರು ದುಂಡುಮೇಜಿನ ಪರಿಷತ್ತಿನ ಬಲೆಯಲ್ಲಿ ಬಿದ್ದರು.

ತಾಳಮೇಳವಿಲ್ಲದ ಸಂಕೀರ್ಣಸಮುದಾಯದ ಪ್ರತಿನಿಧಿಗಳ ಆ ಪರಿಷತ್ತು ಯಶಸ್ವಿಯಾಗದಿದ್ದುದು ಆಶ್ಚರ್ಯವಲ್ಲ. ಅಯರ್ಲಂಡದ ಸಿನ್‌ಫೀನರ್ಸರ ಮುಂದೆ ಒಡ್ಡಿದ ಬಲಿಯಂತೆಯೇ ಇದು ಇದೆ. ಆದರೆ ಗಾಂಧಿ-ಅಯರ್ವಿನ್ ರ ಒಡಂಬಡಿಕೆಯ ಪೂರ್ವದಲ್ಲಿಯೇ ಎಲ್ಲ ಕರಾರುಗಳನ್ನು ಸ್ಪಷ್ಟೋಕ್ತಿಯಲ್ಲಿ ಕಾಣಿಸಿದ್ದರೆ ನಮ್ಮ ಮುಂದಿನ ಮಾರ್ಗವಾದರೂ ಸುಲಭವಾಗುತ್ತಿತ್ತು.

ಇದರಲ್ಲಿ ಕಾಂಗ್ರೆಸ ಪಕ್ಷವಷ್ಟೇ ತಪ್ಪುಮಾಡಿದೆ ಎಂದಲ್ಲ. ಸರಕಾರವು ಸಹ ಗುಡ್ಡದಂಥ ತಪ್ಪು ಮಾಡಿದೆ. ಈ ಪ್ರಸಂಗದಲ್ಲಿ ಮೀರತ ಒಳಸಂಚಿನ ಖಟ್ಲೆ ಮತ್ತು ರಾಜಕೀಯ ಕ್ರಾಂತಿಕಾರಕ ಸೆರೆಯಾಳುಗಳ ವಿಷಯಕ್ಕೆ ಸರ ಕಾರವು ತೋರಿಸಿದ ದುರ್ಲಕ್ಷ್ಯವು ಮರೆಯಕೂಡದಷ್ಟು ಹೇಯವಾಗಿದೆ. ಈ ಎರಡೂ ಬಲವಾದ ಪಕ್ಷಗಳ ಅಸ್ತಿತ್ವವನ್ನೇ ಮರೆತು ಇಲ್ಲವೆ ದುರ್ಲಕ್ಷಿಸಿ ದೇಶದಲ್ಲಿ ಶಾಂತಿಸ್ಥಾಪನೆ ಮಾಡುವದು ಹೇಗೆ ತಾನೇ ಶಕ್ಯವಿದೆ ? ಸರಕಾರದ ಅತಿ ದೊಡ್ಡ ತಪ್ಪೆಂದರೆ ವಿಚಾರಣೆಯನ್ನು ಕೂಡ ಮಾಡದೆ ಬಂಧನದಲ್ಲಿಟ್ಟ ಜನರನ್ನು ಬಿಡದೇ ಇದ್ದುದೆಂದು ಹೇಳಬಹುದು. ಒಪ್ಪಂದವು ಹೆಸರಿಗೆ ಮಾತ್ರ ನಡೆದು ದಬ್ಬಾಳಿಕೆಯ ಚಲ್ಲಾಟವು ದೇಶದಲ್ಲೆಲ್ಲ ಹಾಗೇ ನಡೆದದ್ದು ಎಷ್ಟು ಆಶ್ಚರ್ಯಕರವಾಗಿದೆ ನೋಡಿರಿ ! ರಾಜಕೀಯ ಕೈದಿಗಳ ಸಂಖ್ಯೆಯು ದಿನದಿನಕ್ಕೆ ಬೆಳೆಯುತ್ತ ನಡೆದಿದೆ. ಇದನ್ನು ಸಹಿಸಲಾರದ ಬಿಸಿನೆತ್ತರದ ತರುಣರಿಂದ ಹಿಂಸಾತ್ಮಕ ಕಾರ್ಯಗಳು ನಮ್ಮ ದುರ್ದೈವದಿಂದ ಜರುಗಿದ್ದು ಸ್ವಾಭಾವಿಕವು. ಇದಕ್ಕೆ ಕಾಂಗ್ರೆಸಿನವರನ್ನೇ ಹೊಣೆಗಾರರನ್ನಾಗಿ ಮಾಡಿ ಸರಕಾರೀ ಅಧಿಕಾರಿಗಳು ದೋಷಹೊರಿಸಲು ಯತ್ನಿಸಿದರು. ದೇಶದ ಕಲ ಭಾಗಗಳಲ್ಲಿ ವಿಶೇಷವಾಗಿ ಬಂಗಾಲದಲ್ಲಿ ತರುಣರ ಮೇಲೆ ಕಾಂಗ್ರೆಸಿನವರ ವರ್ಚಸ್ಸು ಅಷ್ಟೊಂದು ಇಲ್ಲದ್ದರಿಂದಲೇ ಸರಕಾರದ ದಬ್ಬಾಳಿಕೆಯನ್ನು ಕಾಂಗ್ರೆಸಿನವರು ತಡೆಯುವದು ಸಾಧ್ಯವಾಗಲಿಲ್ಲ. ಸರಕಾರದ ದಬ್ಬಾಳಿಕೆ ಯನ್ನು ಕಾಂಗ್ರೆಸಿನವರು ತಡೆದಿದ್ದರೆ ನಮ್ಮ ಅಹಿಂಸೆಯ ಬೋಧಿಕೆಯ ಪರಿಣಾ ಮಗಳು ನಿಸ್ಸಂಶಯವಾಗಿ ತರುಣರ ಮೇಲೆ ಆಗುತ್ತಿದ್ದವೆಂದು ಹೇಳಬಹುದು. ಆದರೆ ಸರಕಾರದ ದಬ್ಬಾಳಿಕೆಯನ್ನು ನಿಲ್ಲಿಸದೆ ಅಹಿಂಸೆಯನ್ನಾಚರಿಸಲು ತರುಣರಿಗೆ ಬೋಧಿಸಿದ ಶ್ರಮವು ವ್ಯರ್ಥವಾದುದರಲ್ಲಿ ಆಶ್ಚರ್ಯವೇನು ?

ಹಿಜಲಿ, ಚಿತಗಾಂಗ ಮತ್ತು ಡಾಕಾಗಳಲ್ಲಿ ಜರುಗಿದ ಅನಾಹುತಗ ಳನ್ನು ನೋಡಿರಿ! ಚಿತಗಾಂಗ ಮತ್ತು ಡಾಕಾಗಳಲ್ಲಿ ಆಸ್ತಿಯು ಜೇಕಾ

ದಾಗ ಲೂಟಿಮಾಡಲ್ಪಡಬಹುದು; ಇಲ್ಲವೆ ಅಪಾಯಮಾಡಲ್ಪಡುವದು. ಸರಕಾರದ ವಿರೋಧವಾಗಿ ತಪ್ಪುಗಾರರೆಂದೆನಿಸಿಕೊಳ್ಳುವವರು ಯಾರೇ ಇರಲಿ ಅವರ ಆಸ್ತಿಯು ಸಹ ಸುರಕ್ಷಿತವಾಗಿರಲಾರದು. ಸರಕಾರೀ ಪಕ್ಷದ ತಪ್ಪುಗಾರರಿಗೆ ಶಿಕ್ಷೆವಿಧಿಸಲು ಜನತೆಯು ಬೇಡಿಕೊಂಡರೆ ಇಲ್ಲವೆ ಸರಕಾರೀ ದಬ್ಬಾಳಿಕೆಯಿಂದ ತಮಗೆ ಆದ ಹಾನಿಯನ್ನು ತುಂಬಿಕೊಡಲು ಬೇಡಿ ಕೊಂಡರೆ ಸರಕಾರವು ತಿರಸ್ಕಾರದಿಂದ ಆ ಬೇಡಿಕೆಯನ್ನು ಚಲ್ಲಿಕೊಟ್ಟಿತು. ಹಿಜಲಿಯಲ್ಲಿಂತೂ ಮಾನವಜನ್ಮದ ಪವಿತ್ರತೆಯೇ ಸಂಪೂರ್ಣ ನಾಶವಾಗಿದೆ ಎಂದು ಸಿದ್ಧವಾಯಿತು. ಪ್ರಜೆಗಳ ಜೀವವೆಂದರೆ ಅದೊಂದು ಆಟಿಕೆಯ ವಸ್ತುವೆಂದು ತಿಳಿದು ಸರಕಾರವು ವರ್ತಿಸಿತು. ೧೯೩೧ ನೆಯ ಸಪ್ಟೆಂಬರ ೧೯ ನೆಯ ತಾರೀಖಿನ ದಿವಸದ ಗೋಳೀಬಾರಿನಿಂದ ಆದ ಹಾನಿಯನ್ನು ಹೇಳ ಲಾಸಲ್ಲ. ಈ ವಿಷಯದಲ್ಲಿ ತಪ್ಪುಗಾರರನ್ನು ದಂಡಿಸಲೂ ಆದ ಹಾನಿಯನ್ನು ತುಂಬಿಕೊಡಲೂ ಗುಂಡಿನೇಟಿಗೆ ತುತ್ತಾದವರ ಕುಟುಂಬಗಳಿಗೆ ಸಹಾಯ ವನ್ನು ಕೇಳಿದರೆ ಸರಕಾರವು ತಿರಸ್ಕಾರದಿಂದ ಮೂಗು ಮುರಿಯಿತು. ಸರಕಾರೀ ವರದಿಯಂತೆ ತಪ್ಪನ್ನೆಲ್ಲ ರಾಜಕೀಯ ಕೈದಿಗಳ ಮೇಲೆ ಹೊರಿಸಿಯೂ ಸಿಪಾಯಿಗಳಿಗೆ ತೋರಿಕೆಯ ದಂಡವನ್ನು ವಿಧಿಸಿರುವವರ ಅರ್ಥವೇನು?

ಈ ಅಮಾನುಷ ಕೃತಿಗಳು ಇಡೀ ಹಿಂದುಸ್ತಾನದಲ್ಲಿ ಮಾದರಿಯ ಅನಾಹುತಗಳೆನ್ನಬಹುದು. ಸಂಯುಕ್ತಪ್ರಾಂತದ ಸದ್ಯದ ಪರಿಸ್ಥಿತಿಯನ್ನು ಪರಿಶೀಲಿಸಿರಿ ! ಸಂಧಿಕಾಲದಲ್ಲಿ ಕೂಡ ಸರಕಾರೀ ಧೋರಣವು ಪ್ರಜೆಗಳನ್ನು ಜುಲುಮೆಯಿಂದ 'ಕರ ನಿರಾಕರಣೆ' ಯನ್ನು ಕೈಕೊಳ್ಳಲು ಹಚ್ಚಿತು. 'ನವಜವಾನ ಭಾರತ' ಸಭೆಯ ಸಂಘಟನೆಗಳನ್ನೆಲ್ಲ ನಾಶಗೊಳಿಸಲು ಹಲವು ವಿಧದಿಂದ ಸರಕಾರವು ಯತ್ನಿಸಿತು. ಇಂಥ ಸಂಗತಿಗಳೆಲ್ಲ ಒಪ್ಪಂದವು ಮನ್ನಿಸಲ್ಪಟ್ಟ ಅವಧಿಯಲ್ಲಿ ಜರುಗಿರುವದೇ ಅವುಗಳ ವೈಶಿಷ್ಟ್ಯವಾಗಿದೆ ಎಂದು ಹೇಳಬಹುದು.

ಮಹಾತ್ಮಾ ಗಾಂಧಿಜಿಯವರು ಭಾರತಕ್ಕೆ ಕಾಲಿಟ್ಟ ಕೂಡಲೆ ಸರಕಾರ ಕ್ಕೊಂದು ಕೊನೆಯ ಎಚ್ಚರಿಕೆಯನ್ನು ಕೊಡತಕ್ಕದ್ದೆಂದು ನನ್ನ ಬಲ ವಾದ ಅಭಿಪ್ರಾಯವು. ಸರಕಾರದ ಎಲ್ಲ ದಬ್ಬಾಳಿಕೆಗಳನ್ನು ಒಮ್ಮೆಲೆ ಹಿಂತೆಗೆದುಕೊಳ್ಳದಿದ್ದರೆ ಚಕ್ರಗೋಷ್ಠಿಯಲ್ಲಿ ಸಹಕರಿಸುವದು ತಮಗೆ ಶಕ್ಯವಾ ಗದೆಂದು ಸ್ಪಷ್ಟವಾಗಿ ಒರೆದು ಸರಕಾರಕ್ಕೆ ತಿಳಿಸಬೇಕು. ಸರಕಾರದವರು

ಒಪ್ಪಂದವನ್ನು ಮುರಿದದ್ದು ಸಿದ್ಧವಾದರೂ ಕೂಡ ಕಾಂಗ್ರೆಸದವರು ಯಾಕೆ ಅದನ್ನು ಪಾಲಿಸುವರೋ ನನಗೆ ಹೊಳೆಯಲೊಲ್ಲದು. ಒಪ್ಪಂದದೊಳಗಿನ ಗಂಧವೆಲ್ಲ ಹೋಗಿದ್ದು ಎಲ್ಲರಿಗೂ ತಿಳಿದ ಮಾತಾಗಿದೆ.

ಕಾಂಗ್ರೆಸ್ ವರ್ಕಿಂಗ ಕಮಿಟಿಯಲ್ಲಿ ಧೀರ ಕಾರ್ಯಕ್ರಮವನ್ನೇರ್ಪಡಿಸಲು ನಾನು ಒತ್ತಾಯಪಡಿಸುವೆನು. ಸಂಯುಕ್ತ ಪ್ರಾಂತದ 'ಕರಬಂದಿ' ಮತ್ತು ಬಂಗಾಲದ 'ಬಹಿಷ್ಕಾರಗಳು' ದಾರಿನೋಡುತ್ತವೆ. ಎಲ್ಲ ಪ್ರಾಂತಗಳಲ್ಲಿ ಉಗ್ರ ಕಾರ್ಯಕ್ರಮವನ್ನೇ ಜನರು ಎದುರುನೋಡುತ್ತಿರುವರು.

ಚಕ್ರಗೋಷ್ಠಿಯಲ್ಲಿ ವ್ಯರ್ಥ ಶಕ್ತಿಹರಣವಾಯಿತೆಂದು ನಾನು ತಿಳಿಯುತ್ತೇನೆ. ಇದಲ್ಲದೆ ಕಾಂಗ್ರೆಸದ ವೀರಪಕ್ಷವನ್ನು ಮತ್ತು ಇನ್ನುಳಿದ ಬಲವತ್ತರವಾದ ಗುಂಪುಗಳನ್ನು ಸರಕಾರವಷ್ಟೇ ಅಲ್ಲದೆ ಕಾಂಗ್ರೆಸ್ಸೂ ಕೂಡ ದುರ್ಲಕ್ಷಿಸಿದೆ. ಈ ಪ್ರಕಾರದ ಅಲಕ್ಷ್ಯವು ಮುಂದೆಸಾಗಿದರೆ ದೇಶದಲ್ಲಿ ಶಾಂತತೆಯು ನೆಲೆಗೊಳ್ಳುವದೆಂದು ನಂಬುವದಾದರೂ ಹೇಗೆ? ಭಾರತವು ಆಯರ್ಲಂಡದ ಹೆಜ್ಜೆಗಳನ್ನನುಸರಿಸುವದಿಲ್ಲವೆಂಬ ಭರವಸೆಯನ್ನಾದರೂ ಯಾರು ಕೊಡುವರು ?

ಚಕ್ರಗೋಷ್ಠಿಯ ಸಂಬಂಧದಲ್ಲಿ 'ಸಂಯುಕ್ತ ಭಾರತ ರಾಜ್ಯಸಂಘಟನೆ'ಯ ಪ್ರಶ್ನೆಯೊಂದಿದೆ. ಅದರ ತತ್ವವು ನನಗೆ ಮಾನ್ಯವಿದೆ. ಆದರೆ ಹಿಂದುಳಿದ ಪ್ರಾಂತಗಳು ಮುಂದುವರಿಯುವ ಪ್ರಾಂತಗಳನ್ನು ಹಿಂದೆ ಜಗ್ಗಿ ತಡೆಯುವ ಪರಿಣಾಮುಗಳು ಇದರಿಂದ ಆಗುವವೆಂದು ಅಂಜಬೇಕಾಗಿದೆ. ಆದ್ದರಿಂದ ನಾನು ಅದನ್ನು ವಿರೋಧಿಸುವೆನು. ಹಿಂದುಸ್ತಾನವು ಕೂಡ ಯುರೋಪದಂತೆ ಬೇರೆ ಬೇರೆ ಪ್ರಾಂತಗಳಾಗಿದ್ದರೂ ತಳದಲ್ಲಿ ಐಕ್ಯತೆಯನ್ನು ಕಾಯ್ದು ಕೊಳ್ಳಬಲ್ಲದು. ಯುರೋಪದ ಸಂಸ್ಕೃತಿಯು ತಳದಲ್ಲಿ ಒಂದೆಯಾದಾಗ್ಯೂ ಅನೇಕ ಭಿನ್ನವಾದ ಸಣ್ಣ ದೊಡ್ಡ ಸ್ವತಂತ್ರ ಪ್ರಾಂತಗಳಿಂದ ಅದು ಕೂಡಿದೆ. ಹಿಂದೀಸುಧಾರಣೆಯೂ ಭಾರತ ಸಂಸ್ಕೃತಿಯೂ ತಳದಲ್ಲಿ ಸ್ಥಿರವಾದ ಐಕ್ಯತೆಯನ್ನು ಕಾಯ್ದುಕೊಂಡಿವೆ. ಬೇಕಾದರೆ ಹಿಂದುಸ್ತಾನವು ಫೆಡರೇಶನ್ನಿನ ಗುಂಟ ಹೋಗದೆ ಸ್ವತಂತ್ರವಾದ ಬೇರೆ ಬೇರೆ ದಾರಿಗಳಿಂದ ಹೋಗಿ ಮೈತ್ರೀಯ ಭಾವವನ್ನು ಕಾಯ್ದುಕೊಂಡು ಏಳ್ಗೆ ಹೊಂದಬಲ್ಲದು.

ಸ್ವತಂತ್ರತೆ ಮತ್ತು ಸಾಮಾಜಿಕ ಸಮತ್ವವು ನಮ್ಮ ದೇಶಕ್ಕೆ ಬೇಕೆಂದು ನಾನು ಸಾರುತ್ತೇನೆ. ಜನತೆಯ ಸರ್ವತೋಮುಖ ಸಂಪೂರ್ಣ

ಸ್ವಾತಂತ್ರ್ಯವು ನಮ್ಮ ಜನರಿಗೆ ಬೇಕು. ಅಂಥ ಸ್ವಾತಂತ್ರ್ಯದಿಂದ ದೇಶದ ಕೆಲವೊಂದು ಹಿತಕ್ಕೆ ನೀರು ಬಿಟ್ಟರೂ ಚಿಂತೆಯಿಲ್ಲ. ಅದು ಮಾತ್ರ ನಮಗೆ ಅವಶ್ಯಬೇಕಾಗಿದೆ. ಉತ್ತಮ ಜನಾಂಗವನ್ನೂ ಉತ್ತಮ ತರದ ಜನರನ್ನೂ ತಯಾರಮಾಡುವ ಸ್ವತಂತ್ರ ಭಾರತವು ನನಗೆ ಬೇಕು. **ನಾನು ಇರುವದು ಮಾನವ ಪೌರುಷಕ್ಕಾಗಿ.** ನಮ್ಮ ಎಲ್ಲ ಸಂಸ್ಥೆ ಸಂಘಟನೆಗಳೂ ಪರಿಸ್ಥಿತಿಗಳೂ ಅಂಥ ಪೌರುಷವನ್ನು ಹುಟ್ಟಿಸುವದಕ್ಕೂ ನಿಜವಾದ ಪೌರುಷವನ್ನು ಬೆಳೆಸುವದಕ್ಕೂ ಪ್ರಯತ್ನಿಸತಕ್ಕದ್ದು.

ಈ ಅಂತರ-ರಾಷ್ಟ್ರೀಯ ಯುಗದಲ್ಲಿ ರಾಷ್ಟ್ರೀಯತ್ವವಿಲ್ಲದೆ ಅಂತರ ರಾಷ್ಟ್ರೀಯತ್ವವಿರಲಾರದೆಂಬುವನ್ನು ನಾವು ಎಂದೂ ಮರೆಯಲಾಗದು. ಎಲ್ಲ ಮಾಂಡಲಿಕ ಜನಾಂಗಗಳು ಸ್ವತಂತ್ರವಾಗುವವರೆಗೆ ಮಾನವಕುಲದ ಬಂಧು ಭಾವದ ನಡವಳಿಕೆಯ ಮಾತುಗಳು ಒಣಮಾತುಗಳೇ ಸರಿ. ನಾನು ಜಗಳ ಗಂಟಿ ದೇಶಾಭಿಮಾನಿ ಎಂದು ನನಗೆ ಹೆಸರಿಟ್ಟರೂ ಚಿಂತೆಯಿಲ್ಲ. ಭಾರತವು ವಿಶ್ವರಂಗದಲ್ಲಿ ವಿಶೇಷ ಕಾರ್ಯಕ್ಕಾಗಿ ಇರುವದೆಂದು ಒತ್ತಿ ಹೇಳದಿರಲಾರೆನು. ಜಗತ್ತಿನ ಸುಧಾರಣೆ ಸಂಸ್ಕೃತಿಗಳಿಗೆ ಬೆಂಬಲಕೊಡಲು ನಮ್ಮಲ್ಲಿ ಹೊಸ ಬಗೆಯ ಇಡುಗಂಟು ಬೇಕಾದಷ್ಟಿದೆ. ಜಗತ್ತಿನಲ್ಲಿಯ ಎಲ್ಲ ಮಾನವ ಕುಟುಂಬಗಳು ಸುಖಿಯಾಗಿ ಜೀವಿಸುವಂತೆ ವರ್ತಿಸಲೂ ತನ್ನ ಜೀವಿತವನ್ನು ಸಾಗಿಸಲೂ ಭಾರತಕ್ಕೆ ಶಕ್ಯವಿದೆ ಎಂದು ನಾನು ನಂಬುವೆ. **ಆದ್ದರಿಂದ ಮಾನವ ಪೌರುಷದ ಶಿಖರವನ್ನೇರೋಣ. ನಮ್ಮ ನಾಡಿಗೆ ಮುಕ್ತಿಯನ್ನು ದೊರಕಿಸೋಣ. ಸ್ವತಂತ್ರ ಭಾರತವೆಂದರೆ "ಮಾನವಕೋಟಿಯ ಸಂರಕ್ಷಣೆ" ಎಂದು ನನ್ನಂತೆ ಎಲ್ಲರೂ ನಂಬಿರಿ.** ಎಂದು ಘೋಷಿಸಿದರು.

ಯುವಕ ಪರಿಷತ್ತನ್ನು ತೀರಿಸಿಕೊಂಡು ಮಹಾರಾಷ್ಟ್ರದಲ್ಲೆಲ್ಲ ಸಂಚರಿಸಿ ೨೭ ನೆಯ ಡಿಶಂಬರಕ್ಕೆ ಸುಭಾಸಚಂದ್ರರು ಮುಂಬೈಗೆ ಬಂದು ತಲುಪಿದರು. ಮಹಾತ್ಮಾಜಿಯವರ ಸ್ವಾಗತದ ಕಾರ್ಯಕ್ರಮಗಳು ವಿಜೃಂಭಣೆಯಿಂದ ಮುಗಿದೊಡನೆಯೇ "ಮಣಿಭುವನ" ದಲ್ಲಿ ಕಾಂಗ್ರೆಸ ವರ್ಕಿಂಗ ಕಮಿಟಿಯು ಡಿಶಂಬರದ ೨೯-೩೦-೩೧ ನೆಯ ದಿವಸಗಳಲ್ಲಿ ಕೂಡಿ ಭಾರತದ ಹಣೇಬರಹವನ್ನು ನಿಶ್ಚಯಿಸಿತು. ಪ್ರತ್ಯೇಕವಾಗಿ ಬಂಧಿದ್ದ ಔತಣವನ್ನು ಮನ್ನಿಸಿ ಬೋಸರು ವರ್ಕಿಂಗ ಕಮಿಟಿಯ ಚರ್ಚೆಗಳಲ್ಲಿ ಭಾಗವಹಿಸಿದರು.

ಆಗ ಸುಭಾಸಚಂದ್ರರು ತಮ್ಮ ಅಭಿಪ್ರಾಯಗಳನ್ನೆಲ್ಲ ಸ್ಪಷ್ಟೋಕ್ತಿಯಲ್ಲಿ ಖಂಡತುಂಡವಾಗಿ ಹೇಳಿದರು. ಸರಕಾರದ ದಬ್ಬಾಳಿಕೆಗೆ ಪ್ರತಿಯಾಗಿ ಕಾಂಗ್ರೆಸವು ಯೋಗ್ಯ ಪ್ರತೀಕಾರವನ್ನು ಕೈಕೊಳ್ಳದಿದ್ದರೆ ಬಂಗಾಲದಲ್ಲಿ ತಾವು ಸ್ವತಂತ್ರವಾದ ರಾಜ್ಯಘಟನೆಯನ್ನು ಮಾಡಿಕೊಂಡು ಆಂದೋಲನವನ್ನೆಬ್ಬಿಸಲೇಬೇಕಾಗುವದೆಂದು ಧೀರವಾಣಿಯಿಂದ ಎಚ್ಚರಿಕೆ ಕೊಟ್ಟರು.

ಕಾಂಗ್ರೆಸ ವರ್ಕಿಂಗ ಕಮಿಟಿಯಲ್ಲಿ ಇವರ ವಿಚಾರಗಳಿಗೆ ಬಹಳ ಮಹತ್ವವು ಕೊಡಲ್ಪಟ್ಟಿತು. ಮುಂಬೈಯಲ್ಲಿ ಬೇರೆ ಬೇರೆ ಮೈದಾನಗಳಲ್ಲಿ ಇವರ ಭಾಷಣಕ್ಕೆ ಜನರು ಕಿಕ್ಕಿರಿದು ಸೇರುತ್ತಿದ್ದರು. ಕೊನೆಗೆ ಸ್ವಲ್ಪಾವಧಿಯಲ್ಲಿಯೇ ಬಂಧಿಸಲ್ಪಡುವರೆಂದು ಅವರಿಗೆ ತಿಳಿದಿತ್ತು. ಡಿಶಂಬರ ೩೦ ನೆಯ ದಿನ ಮುಂಜಾನೆ ಅವರ ಭೆಟ್ಟಿಗೆಂದು ಈ ಗ್ರಂಥಕರ್ತರು ಹೋದಾಗ್ಗೆ ತಾವು ಇನ್ನೆರಡು ದಿನಗಳಲ್ಲಿ ಬಂಧಿಸಲ್ಪಡುವದು ನಿಶ್ಚಯವೆಂದು ಶಬ್ದಶಃ ಸತ್ಯವಾದ ಭವಿಷ್ಯವನ್ನು ಹೇಳಿದರು. ಕರ್ನಾಟಕಕ್ಕೆ ಒಮ್ಮೆಯಾದರೂ ಬರಬೇಕೆಂದು ಬಿನ್ನಯಿಸಿಕೊಳ್ಳಲು “ ಇನ್ನುಮೇಲೆ ಯಾರೂ ಹೊರಗಿರುವದು ಶಕ್ಯವಿಲ್ಲ. ಸೆರೆಮನೆಗಳೇ ನಮ್ಮ ವಾಸಸ್ಥಾನಗಳು. ಅವೇ ನಮ್ಮ ಪವಿತ್ರ ಪೂಜಾಮಂದಿರಗಳು. ನಮ್ಮ ಕಾಲಮೇಲೆ ನಾವು ನಿಲ್ಲುವ ಕಾಲವು ಈಗ ಬಂದಿದೆ. ಸ್ವಾತಂತ್ರ್ಯಕ್ಕಾಗಿ ಆತ್ಮಹುತಿಯನ್ನು ಕೊಡುವ ಕಾಲವು ಈಗ ಬಂದಿದೆ. ನಾವೇ ಧನ್ಯರು. ನಮ್ಮ ನಾಡು ರೈತರ ನಾಡು. ಕೂಲಿಕಾರರ ನಾಡು. ಗುಜರಾಥವನ್ನು ನೋಡಿರಿ; ಬಂಗಾಲವನ್ನು ನೋಡಿರಿ; ಸಂಯುಕ್ತ ಪ್ರಾಂತವನ್ನು ನೋಡಿರಿ. ಅವರದೇ ದುಃಖ. ಅವರದೇ ಸಾಹಸ. ಕಳೆದ ಶಾಂತಿಸಂಗ್ರಾಮದಲ್ಲಿ ಪೂರ್ಣ ಜವಾಬದಾರಿಯನ್ನು ಹೊತ್ತು ರಥವನ್ನು ನಡೆಯಿಸಿದವರು ಅವರೇ. ಈಗಲೂ ಭಾರತಮಾತೆಯ ಬಂಧವಿಮೋಚನೆಗಾಗಿ ಮುಂದುವರಿಯುವವರು ಅವರೇ. ಕರ್ನಾಟಕವೂ ಅವರನ್ನು ಅನುಕರಣಮಾಡಲಿ ” ಎಂಬುದಾಗಿ ಹೇಳಿದರು.

ಅಲ್ಲಿರುವಾಗಲೇ ವಿಠ್ಠಲಭಾಯಿ ಪಟೇಲ್, ಜಮ್ನಾದಾಸ ಮೆಹಥಾರವರೊಂದಿಗೆ ಸೇರಿ “ಸಂಪೂರ್ಣ ಸ್ವಾತಂತ್ರ್ಯ ಪಕ್ಷ” ವೊಂದನ್ನು ಸ್ಥಾಪಿಸಿದರು. ಅದರ ಮುಖ್ಯ ಭಾರವನ್ನು ತಾವೇ ಹೊತ್ತು ಕಾಂಗ್ರೆಸಿನ ಬಲವತ್ತರವಾದ ಪಕ್ಷಗಳನ್ನು ತಮ್ಮ ತೀವ್ರ ತತ್ವಗಳಿಗೆ ಎಳೆಯಲು ನಿಶ್ಚಯಿಸಿದರು. ೧೯೩೨ ರ ಜಾನೇವಾರಿ ೧ ನೆಯ ತಾರೀಖಿನಲ್ಲಿ ಮುಂಬೈಯಿಂದ ಕಲ್ಕತ್ತಾ

ಮೇಲಿನಲ್ಲಿ ಹೊರಟು ಕಲ್ಯಾಣ ಸ್ಟೇಶನಕ್ಕೆ ಬರುವಷ್ಟರಲ್ಲಿ ಕಲ್ಕತ್ತೆಯ ಪೋಲೀಸ ಅಧಿಕಾರಿಗಳು ಅವರ ಗಾಡಿಯನ್ನು ಹೊಕ್ಕು ೧೮೧೮ ನೆಯ ವರ್ಷದ ೩ ನೆಯ ಕಲುಮಿನ ಬಾಣ ಪ್ರಯೋಗವನ್ನು ಮಾಡಿ ಮುಂಬೈ ಪೋಲೀಸರ ಸಹಾಯದಿಂದ ಅವರನ್ನು ಕೈಸೆರೆ ಮಾಡಿದರು. ಮುಂಬೈ ಸರಕಾರದವರು ಅವರನ್ನು ಮುಂಬೈಯಲ್ಲಿ ಬಂಧಿಸಲು ನಿರಾಕರಿಸಿದ್ದರೆಂದು ತಿಳಿಯುತ್ತದೆ. ಕಲ್ಕತ್ತೆಯ ಗವ್ಹರ್ನರರಾದ ಜಾಕ್ಸನ್ನರ ಹೊಸ ವರ್ಷದ ಬಾಣ ಪ್ರಯೋಗಕ್ಕೆ ಸುಭಾಸರು ಮೊದಲನೆಯ ಆಹುತಿಯಾದರು. ಕೂಡಲೆ ಮುಂಬೈಯಲ್ಲೆಲ್ಲ ಹರತಾಳವು ಆಚರಿಸಲ್ಪಟ್ಟು ಸಭೆಗಳಲ್ಲಿ ಸರಕಾರದ ಈ ಕೃತಿಯು ಬಲವಾಗಿ ನಿಷೇಧಿಸಲ್ಪಟ್ಟಿತು.

ಮುಂಬೈಯಿಂದ ಹೊರಡುವಾಗ್ಗೆ ಅವರು ತಮ್ಮ ಸಂದೇಶವನ್ನು ಹೇಳುವಾಗ ತಮಗೆ (ಬಂಗಾಲಕ್ಕೆ) ಬೇಕಾದದ್ದು ಯುದ್ಧವೆಂತಲೂ ಕಾಂಗ್ರೆಸದವರು ಸಹಕಾರಕ್ಕಾಗಿ ಮುಂದೆ ಚಾಚಿದ ಕೈಯನ್ನು ಕಡಿದು ವಿಲಿಂಗಡನ್ ಸಾಹೇಬರು ತಮಗೆ ಬೇಕಾದದ್ದನ್ನೇ ಕೊಟ್ಟರೆಂದೂ ಹೇಳಿದರು. ಇನ್ನು ಮೇಲೆ ಗಾಂಧಿ ಅಯರ್ವಿನ್‌ರ ಒಪ್ಪಂದದಂಥ ಮೂರ್ಖತನಕ್ಕೆ ತಾವೆಂದೂ ಬಲಿ ಬೀಳಲಾರರೆಂದು ಘೋಷಿಸಿ ಬಹಿಷ್ಕಾರವನ್ನು ಬಲವತ್ತರವಾಗಿ ನಡಿಸಿ ದಬ್ಬಾಳಿಕೆಯ ಪರಮಾವಧಿಯನ್ನು ಕೂಡ ಆನಂದದಿಂದ ಸಹಿಸಲು ನಾವು ಸಿದ್ಧರಿರುವೆವೆಂದು ಹೇಳಿದರು.

# ೧೨. ಪುನಃ ಸೆರೆಮನೆ - ಯುರೋಪ ಪ್ರಯಾಣ

## ೧೯೩೨-೩೩.

ಮುಂಬೈಯಲ್ಲಿ ವರ್ಕಿಂಗ ಕಮಿಟಿಯ ಕೆಲಸ ಮುಗಿಸಿಕೊಂಡು ಕಲ್ಕತ್ತೆಗೆ ಹೊರಟ ಸುಭಾಸಚಂದ್ರರು ಕಲ್ಯಾಣ ಸ್ಟೇಶನದಲ್ಲಿ ಕೈದುಮಾಡಲ್ಪಟ್ಟು ನಾಗಪುರದ ಸಿವ್ನಿ ಸೆಂಟ್ರಲ್ ಜೇಲಿಗೆ ಸಾಗಿಸಲ್ಪಟ್ಟರು. ಅಲ್ಲಿ ಕೆಲವು ದಿವಸಗಳಿರುವಷ್ಟಗಲ್ಲಿಯೇ ಇವರ ಆರೋಗ್ಯವು ಕೆಡುತ್ತ ನಡೆಯಿತು. ಅಲ್ಲಿ ಅವಶ್ಯವಿದ್ದ ಎಲ್ಲ ಅನುಕೂಲತೆಗಳನ್ನು ಮಾಡಿಕೊಟ್ಟಾಗ್ಯೂ ಇವರ ಅನಾರೋಗ್ಯವು ಹೆಚ್ಚುತ್ತಲೇ ಹೋಯಿತು. ಇವರ ಸಹೋದರರಾದ ಬ್ಯಾರಿಸ್ಟರ ಶರತ್‌ಚಂದ್ರರನ್ನು ಇವರ ಜೊತೆಯಲ್ಲಿಯೇ ತಂದಿರಿಸುವ ವ್ಯವಸ್ಥೆಯನ್ನು ಮಾಡಿದರು. ಇವರೂ ೧೮೧೮ರ ೩ನೆಯ ರೆಗ್ಯುಲೇಶನ್ ಪ್ರಕಾರ ಫೆಬ್ರುವರಿಯಲ್ಲಿ ಕೈದು ಮಾಡಲ್ಪಟ್ಟಿದ್ದರು. ಮೇ ತಿಂಗಳ ೩೦ಕ್ಕೆ ಸುಭಾಸಚಂದ್ರರನ್ನು ಜಬಲಪೂರದ ಸೆಂಟ್ರಲ್ ಜೇಲಿಗೆ ಒಯ್ದರು. ಎಪ್ರಿಲ ೧೩ರಿಂದ ಸುಭಾಸರು ಷೇಯು

ಆಹಾರದ ಮೇಲೆ ಮಾತ್ರ ಇರಹತ್ತಿದರು. ಅಲ್ಲಿ ಸಿವ್ಹಿಲ್ ಸರ್ಜನರಿಂದ ಪರೀಕ್ಷಿಸಲ್ಪಟ್ಟು ಇವರನ್ನು ಮದ್ರಾಸಿಗೆ ಎಕ್ಸರೇ ಪರೀಕ್ಷೆಗಾಗಿ ಕಳುಹಬೇಕೆಂಬ ನಿಶ್ಚಯವಾಯಿತು. ಆ ಪ್ರಕಾರ ಮದ್ರಾಸದಲ್ಲಿ ಜೂನ ತಿಂಗಳಲ್ಲಿ ಎಕ್ಸರೇ ಪರೀಕ್ಷೆಯಾಯಿತು. ಇದಲ್ಲದೆ ಅನೇಕ ಸುಪ್ರಸಿದ್ಧ ಡಾಕ್ಟರರು ಇವರ ದೇಹ ಪರೀಕ್ಷೆ ಮಾಡಿದರು. ಕೊನೆಗೆ ಸರಕಾರದವರು ಡಾಕ್ಟರ ಅಭಿಪ್ರಾಯದ ಮೇರೆಗೆ ಇವರನ್ನು ಭವಾಲಿ ಸ್ವಾಸ್ಥ್ಯನಿಲಯಕ್ಕೆ ಕಳಿಸಿದರು. ಅಕ್ಟೋಬರ ೧ನೆಯ ತಾರೀಖಿನ ದಿವಸ ನಾಗಪೂರದ ಮೇಲಿಂದಹಾಯ್ದು ಭವಾಲಿಗೆ ಹೋದರು. ಆ ಕಾಲಕ್ಕೆ ಅವರು ಬಹಳೇ ಅಶಕ್ತರಾಗಿದ್ದರೂ ಹಸನ್ಮುಖಿಗಳಾಗಿದ್ದರು.

ಮದ್ರಾಸ ಮೆಡಿಕಲ್ ಬೋರ್ಡಿನವರು ಮತ್ತು ಅಲ್ಲಿಯ ಜನರಲ್ ಹಾಸ್ಪಿಟಲ್ ಸುಪರಿಂಟೆಂಡೆಂಟರಾದ ಕರ್ನಲ್ ಸ್ಕಿನ್ನರವರು ಸುಭಾಸರಿಗೆ ಕರುಳು ರೋಗವಿದೆ ಎಂದೂ ಕ್ಷಯರೋಗದ ಚಿಹ್ನಗಳು ಕಂಡು ಬರುತ್ತವೆಂದೂ ಅಭಿಪ್ರಾಯಪಟ್ಟದ್ದಲ್ಲದೆ ನವೀನ ತರಗತಿಯ ಎಲ್ಲ ಸಾಹಿತ್ಯಗಳಿಂದ ಕ್ಷಯರೋಗ ನಿವಾರಣೆಯಾಗಬೇಕಾದರೆ ಅವರನ್ನು ಸ್ವಿತ್ಸರ್ಲಂಡಕ್ಕೆ ಕಳಿಸುವದು ಒಳ್ಳೆಯದೆಂದು ಅಭಿಪ್ರಾಯಪಟ್ಟಿದ್ದರು. ಭವಾಲಿಯ ಡಾಕ್ಟರರು ಬೇನೆಯ ವಿಷಯದಲ್ಲಿ ಸ್ವಲ್ಪ ಭಿನ್ನಾಭಿಪ್ರಾಯಪಟ್ಟಾಗ್ಯೂ ತಮ್ಮಲ್ಲಿ ಗುಣವಾದೀತೆಂದು ಬಗೆಯಲಿಲ್ಲ. ಅವರೂಕೂಡ ಸ್ವಿತ್ಸರ್ಲಂಡದ ಚಿಕಿತ್ಸೆಯನ್ನೇ ಶಿಫಾರಸು ಮಾಡಿದರು. ಭವಾಲಿಯ ಹವೆ, ನೀರು, ವಾತಾವರಣಗಳು ಅತ್ಯುತ್ತಮವಾಗಿದ್ದರೂ ಸುಭಾಸರಿಗೆ ಅಲ್ಲಿರುವದರಿಂದ ಗುಣವೇನೂ ಕಂಡು ಬರಲಿಲ್ಲ. ಡಿಶಂಬರ ೧೫ರ ವರೆಗೆ ಅವರನ್ನು ಅಲ್ಲಿಡಲು ಸರಕಾರವು ನಿಶ್ಚಯಿಸಿತ್ತು. ನವ್ಹಂಬರ ೨ರ ಸುಮಾರಿಗೆ ಸರಕಾರದವರು ಸುಭಾಸಚಂದ್ರರ ಸಹೋದರರಾದ ಬ್ಯಾರಿಸ್ಟರ ಸತೀಶಚಂದ್ರರಿಗೆ ತಂತಿಯ ಮುಖಾಂತರವಾಗಿ ಸುಭಾಸಚಂದ್ರರನ್ನು ಮೆಡಿಕಲ್ ಬೋರ್ಡಿನವರು ಪರೀಕ್ಷಿಸಲು ಸರಕಾರದವರ ಅನುಮತಿ ದೊರೆತಿರುವದೆಂದು ತಿಳಿಸಿದರು. ನೈನಿತಾಲದ ಸಿವ್ಹಿಲ್ ಸರ್ಜನರೂ ಭವಾಲಿ ಸ್ಯಾನಿಟೋರಿಯಮ್ದ ಸುಪರಿಂಟೆಂಡೆಂಟರೂ ಸರ್ ನೀಲರತ್ನ ಸರಕಾರರವರೂ ಮತ್ತು ಬೋಸರ ಬಂಧು ಡಾ. ಸುನೀಲಚಂದ್ರರೂ ಆ ಬೋರ್ಡಿನಲ್ಲಿ ಮೆಂಬರರಾಗಿದ್ದರು.

ನವ್ಹಂಬರ ೨೨ನೆಯ ತಾರೀಖಿನ ದಿವಸ ಬಂಗಾಲ ಲೆಜಿಸ್ಲೇಟಿವ್ಹ ಕೌನ್ಸಿಲ್‌ದಲ್ಲಿ ಸುಭಾಸಚಂದ್ರ ಬೋಸ ಮತ್ತು ಸೇನಗುಪ್ತರ ಭಯಂಕರವಾದ

ಕ್ಷೀಣದೆಶೆಗಾಗಿ ನಿಲುವಳಿ ಸೂಚನೆ ತಂದರು. ಈ ಚರ್ಚೆಯಲ್ಲಿ ಸರಕಾರದ ಪತಿಯಿಂದ ಉತ್ತರವೀಯುತ್ತ ಮಿ. ಜಿ. ಪಿ. ಹಾಗ್‌ರವರು ಅವರಿಬ್ಬರ ವಿಷಯಕ್ಕೆ ಅವರ ಗೆಳೆಯರಿಗೆಷ್ಟು ಚಿಂತೆ ಇದೆಯೋ ಅಷ್ಟೇ ಚಿಂತೆಯು ಸರಕಾರಕ್ಕೂ ಕೂಡಾ ಇದೆ ಎಂದು ಹೇಳಿದರು. ಮೆಡಿಕಲ್ ಬೋರ್ಡಿನವರನ್ನು ನೇಮಿಸಿದ್ದು ಅವರ ರಿಪೋರ್ಟನ್ನು ನೋಡಿಕೊಂಡು ಮುಂದಿನ ಯೋಗ್ಯ ವ್ಯವಸ್ಥೆಯು ಏರ್ಪಾಡು ಮಾಡಲ್ಪಡುವದೆಂದು ಉತ್ತರವಿತ್ತರು.

ಅದೇ ಪ್ರಕಾರ ಡಿಶಂಬರ ೧೨ರಲ್ಲಿ ದಿಲ್ಲಿಯ ಲೆಜಿಸ್ಲೇಟಿವ್ಹ ಅಸೆಂಬ್ಲಿಯಲ್ಲೂ ಈ ಪ್ರಶ್ನೆಯು ಹೊರಟಿತು. ಆಗ್ಗೆ ಮಿ. ಮಿತ್ರರವರ ಪ್ರಶ್ನೆಗೆ ಉತ್ತರ ಕೊಡುತ್ತ ಹೋಂ ಮೆಂಬರರಾದ ಮಿ. ಹೇಗರು ಹೇಳಿದ್ದೇನಂದರೆ:- "ಮೆಡಿಕಲ್ ಬೋರ್ಡಿನವರು ಬೋಸರನ್ನು ಪರೀಕ್ಷಿಸುವವರಿದ್ದಾರೆ. ಅದಕ್ಕಾಗಿ ಬೋಸರು ಲಖನೌಕ್ಕೆ ಸಾಗಿಸಲ್ಪಡತಕ್ಕವರು. ಬೋರ್ಡಿನವರ ಶಿಪಾರಸುಗಳು ಬಂದ ಮೇಲೆ, ಚಿಕಿತ್ಸೆಗಾಗಿ ಬೋಸರನ್ನು ಯುರೋಪಿಗೆ ಕಳಿಸುವ ಅಂಶವನ್ನು ಸರಕಾರದವರು ಪರ್ಯಾಲೋಚಿಸುವರು."

ಅದೇ ಡಿಶೆಂಬರ ೫ನೆಯ ತಾರೀಖಿನಲ್ಲಿ ಮೆಡಿಕಲ್ ಬೋರ್ಡಿನವರು ಬೋಸರನ್ನು ಪರೀಕ್ಷಿಸಿ ತಮ್ಮ ಶಿಪಾರಸುಗಳನ್ನು ಕಳಿಸಿದರು. (೧) ಭವಾಲಿಗೆ ಬಂದಮೇಲೆ ಬೋಸರ ಆರೋಗ್ಯವು ಹೆಚ್ಚು ಕೆಟ್ಟಿತು. (೨) ಸರ್ ನೀಲರತ್ನ ಸರಕಾರರವರು ಮದ್ರಾಸಿನಲ್ಲಿ ಇವರನ್ನು ಪರೀಕ್ಷಿಸಿದಾಗ ಇಲ್ಲದ ಮತ್ತೊಂದು ವ್ಯಾಧಿಯು (ಕಿಬ್ಬೊಟ್ಟೆಯಲ್ಲಿ ಸ್ವಲ್ಪ ದುರ್ಮಾಂಸವು) ಬೆಳೆದಿದೆ. (೩) ಕಿಬ್ಬೊಟ್ಟೆಯಲ್ಲಿ ಕ್ಷಯರೋಗದ ಚಿನ್ಹಗಳು ಕಂಡುಬರುತ್ತವೆ. (೪) ಕ್ಷಯರೋಗದ ಅಂಜಿಕೆಯು ದೂರವಾಗಿಲ್ಲ. (೫) ಶಸ್ತ್ರ ಚಿಕಿತ್ಸೆಯು ಅವಶ್ಯ; ಮೇಲಿನ ಬರೇ ಔಷಧದ ಉಪಚಾರಗಳು ಉಪಯೋಗ ಬೀಳಲಾರವು. (೬) ಶಸ್ತ್ರ ಚಿಕಿತ್ಸೆಗಾಗಿ ಉತ್ತಮ ಹವೆಯ ಪ್ರದೇಶವು ಹಿಂದುಸ್ತಾನದಲ್ಲಿ ಎಲ್ಲಿಯೂ ಇಲ್ಲ. (೭) ಕಲಕತ್ತಾ ಮೆಡಿಕಲ್ ಕಾಲೇಜದ ಆಸ್ಪತ್ರೆಗೆ ಚಿಕಿತ್ಸೆಗಾಗಿ ಕಳಿಸಿ ಅಲ್ಲಿಂದ ಬೋಸರನ್ನು ಯುರೋಪಕ್ಕೆ ಕಳಿಸಲಿಕ್ಕೆಬೇಕು ಎಂಬ ಶಿಪಾರಸುಗಳು ಸರ್ವರ ಸಮ್ಮತಿಯಿಂದ ಸರಕಾರಕ್ಕೆ ಕಳಿಸಲ್ಪಟ್ಟವು.

ಲಖನೌದಲ್ಲಿ ಕಿಬ್ಬೊಟ್ಟೆಯ ನೋವಲ್ಲದೆ ದಿನಾಲು ಸಾಯಂಕಾಲಕ್ಕೆ ಭಯಂಕರವಾದ ತಲೆನೋವು ಬರಹತ್ತಿತು. ತೂಕವು ಕಡಿಮೆಯಾಗುತ್ತಲೇ ನಡೆದಿತ್ತು; ಜ್ವರವು ಯಾವಾಗಲೂ ೧೦೦ ಡಿಗ್ರಿಗಿಂತ ಕಡಿಮೆ ಇರಲಿಲ್ಲ. ಅಲ್ಲಿ

ಇವರನ್ನು ಎಕ್ಸರೇ ಪರೀಕ್ಷೆ ಮಾಡಿದರು. ಮುದ್ರಾಸಿನ ಎಕ್ಸರೇ ಪರೀಕ್ಷೆಯಿಂದ ಕಂಡು ಬಂದ ವ್ಯಾಧಿಗಳನ್ನೇ ಈ ಪರೀಕ್ಷೆಯು ಸ್ಥಿರಪಡಿಸುತ್ತದೆಂದೂ ಕರುಳಿನಲ್ಲಿ ಮಾತ್ರ ಈಗ ಫಾಯಬ್ರಾಸಿಸ್ ಅದೆ ಎಂದೂ ಅಲ್ಲಿಯ ಸಿವ್ಹಿಲ್ ಸರ್ಜನ್ ಕರ್ನಲ್ ಬಕ್ಲೆಯವರು ಅಭಿಪ್ರಾಯಪಟ್ಟರು. ಇಷ್ಟರಲ್ಲಿ ಅವರ ತೂಕವು ೫೪ತ್ತಿ ಪೌಂಡು ಕಡಿಮೆಯಾಗಿತ್ತು. ಲಖನೌ ಚಿಕಿತ್ಸೆಯಿಂದ ಬೋಸರಿಗೆ ಗುಣವಾಗುವ ಲಕ್ಷಣವಿಲ್ಲವೆಂದೂ ಅವರನ್ನು ಯುರೋಪಕ್ಕೆ ಕಳಿಸುವದರಲ್ಲಿ ತಡವಾದರೆ ಅವರು ಗುಣಹೊಂದುವ ಅವಕಾಶವೇ ಉಳಿಯುಲಾರದೆಂದೂ ಅವರು ಹೇಳಿದರು.

೧೯೩೩ನೆಯ ಜಾನೇವರಿ ಮಧ್ಯದ ಸುಮಾರಿಗೆ ಯುರೋಪದ ಪ್ರಯಾಣ ಬೆಳೆಯಿಸಲು ಬೋಸರಿಗೆ ಸರಕಾರದ ಅನುಮತಿ ದೊರೆಯಿತು. ಅವರ ವೆಚ್ಚವನ್ನು ಸರಕಾರವು ವಹಿಸಲಾರದೆಂದೂ ತಮ್ಮ ಸ್ವಂತ ಖರ್ಚಿನಿಂದ ಹೋಗುವ ವ್ಯವಸ್ಥೆಯಾಗಬೇಕೆಂದೂ ತಿಳಿಸಿದರು. ಜಾನೇವರಿ ೧೨ನೆಯ ದಿವಸ ಹಿಂದುಸ್ತಾನ ಸರಕಾರದ ಹೋಂ ಡಿಪಾರ್ಟಮೆಂಟ ಸೆಕ್ರೆಟರಿಗಳಾದ ಮಿ. ಹ್ಯಾಲೆಟ್‌ರು ಬ್ಯಾರಿಸ್ಟರ ಸತೀಶಚಂದ್ರರಿಗೆ ಸರಕಾರದ ಆರ್ಡರನ್ನು ಕಳಿಸಿದರು.

" ೧೮೧೮ರ ರೆಗ್ಯೂಲೇಶನ್ ೩ರ ಪ್ರಕಾರ ಬಂಧಿಸಲ್ಪಟ್ಟು ಸದ್ಯಕ್ಕೆ ಲಖನೌದ ಬಲರಾಮಪೂರ ಹಾಸ್ಪಿಟಲಿನಲ್ಲಿರುವ ಸುಭಾಸಚಂದ್ರ ಬೋಸರು ಆರೋಗ್ಯ ವಿಷಯದ ರಿಪೋರ್ಟುಗಳನ್ನೆಲ್ಲ ಹಿಂದುಸ್ತಾನ ಸರಕಾರದವರು ಚೆನ್ನಾಗಿ ಪರಿಶೀಲಿಸಿದ್ದಾರೆ. ಭವಾಲಿಯಲ್ಲಿ ಅವರನ್ನು ಪರೀಕ್ಷಿಸಿದ ಮೆಡಿಕಲ್ ಬೋರ್ಡಿನವರ ಶಿಪಾರಸು ಮತ್ತು ಲಖನೌ ಸಿವ್ಹಿಲ್ ಸರ್ಜನರ ಶಿಪಾರಸು ಏಕಾಭಿಪ್ರಾಯವುಳ್ಳವುಗಳಾಗಿವೆ. ಈಗ ಅನುಭವಿಸುತ್ತಿರುವ ಕ್ಷಯರೋಗದ ಚಿಕಿತ್ಸೆಗೂ ಬೋಸರು ಯುರೋಪಕ್ಕೆ ಹೋಗಬೇಕೆಂಬುದರಲ್ಲಿ ಭಿನ್ನಾಭಿಪ್ರಾಯುಗಳಿರುವದಿಲ್ಲ.

ಈ ಅಭಿಪ್ರಾಯುಗಳ ಮೇರೆಗೆ ಸುಭಾಸ ಬೋಸರು ಚಿಕಿತ್ಸೆಗಾಗಿ ಯುರೋಪಕ್ಕೆ ಹೋಗಲಿಚ್ಛಿಸಿದರೆ ೧೮೧೮ ವರ್ಷದ ೩ನೆಯ ರೆಗ್ಯೂಲೇಶನ್ನದ ಬಂಧನವನ್ನು ತೆಗೆದು ಅವರನ್ನು ಹೋಗಗೊಡಲು ಹಿಂದುಸ್ತಾನ ಸರಕಾರವು ಸಿದ್ಧವದೆ. ಕಾರಣ ಅವರು ಹೋಗುವದಾದರೆ ಅವರ ಬಂಧುಗಳಿಂದ ಪ್ರಯಾಣದ ಯೋಗ್ಯ ವ್ಯವಸ್ಥೆಯು ಮಾಡಲ್ಪಡಬೇಕು. ಮುಂಬೈಯಿಂದ ಹಡಗಹತ್ತಿ ಫ್ರಾನ್ಸ ಅಥವಾ ಸ್ವಿತ್ಸರ್ಲಂಡಕ್ಕೆ ಹೋಗಲು ಅವರಿಗೆ ಪ್ಯಾಸ್

ಪೋರ್ಟು ಕೊಡಲ್ಪಡುವದು. ಆಮೇಲೆ ರೆಗ್ಯುಲೇಶನ್ ೩ರ ಬಂಧನದ ಆರ್ಡರು ಹಿಂದಕ್ಕೆ ತೆಗೆದುಕೊಳ್ಳಲ್ಪಡುವದು.''

ಅದೇ ಸಮಯಕ್ಕೆ ಸುಭಾಸಚಂದ್ರರ ತಂದೆಯವರಾದ ಜಾನಕೀನಾಥ ಬೋಸರು ಮುಪ್ಪಿನಿಂದ ಹಣ್ಣಾಗಿ ಪುರಿಯಲ್ಲಿ ಹಾಸಿಗೆಯನ್ನೇ ಹಿಡಿದಿದ್ದರು. ಸಾಯುವ ಪೂರ್ವದಲ್ಲಿಯೇ ವೀರಪುತ್ರನನ್ನು ಒಮ್ಮೆ ಕಣ್ತುಂಬ ನೋಡ ಬೇಕೆಂದು ಅವರು ಬಹಳವಾಗಿ ಹಂಬಲಿಸಿದರು. ಸರಕಾರದವರು ಬೋಸ ರನ್ನು ಗಯಾ ಸೆಂಟ್ರಲ್ ಜೇಲಿಗೆ ತಂದು ಯುರೋಪಕ್ಕೆ ಅವರು ಹೋಗುವ ಪೂರ್ವದಲ್ಲಿ ತಂದೆಯವರಿಗೆ ಭೆಟ್ಟಿ ಮಾಡಿಸುವರೆಂದು ತಿಳಿಸಿದರು. ಆದರೂ ಕಡೆಗೆ ತಂದೆಯ ಮುಖವನ್ನು ಕಾಣದೆ ಬೋಸರು ಪ್ರಯಾಣ ಬೆಳೆಸ ಬೇಕಾಯಿತು.

ಬೋಸರು ಪೋಲೀಸರ ಸಮಕ್ಷಮವಾಗಲಿ ಅಥವಾ ಬಾರುಗಳ ಹಿಂದೆ ನಿಂತಾಗಲೀ ಯಾರ ಭೆಟ್ಟಿಯನ್ನೂ ತಕ್ಕೊಳ್ಳಲು ಒಪ್ಪುತ್ತಿರಲಿಲ್ಲ. ಅವರಿಗೆ ಸ್ವತಂತ್ರವಾಗಿ ಗೌರವಯುತವಾದ ವ್ಯವಸ್ಥೆಯಾದರೆ ಮಾತ್ರ ಭೆಟ್ಟಿಯನ್ನು ತಕ್ಕೊಳ್ಳುವರು. ಅದಕ್ಕಾಗಿ ಅನೇಕ ವೇಳೆ ಇವರ ಬಂಧುಗಳು ನಿರಾಶರಾಗಿ ಹೋಗಬೇಕಾಗುತ್ತಿತ್ತು. ಕಡೆಗೆ ಎಲ್ಲ ನಿರ್ಬಂಧನೆಗಳನ್ನು ತೆಗೆದ ಮೇಲೆ ಇವರ ಅತ್ತಿಗೆಯವರಾದ (ಶರತ್‌ಚಂದ್ರರ ಪತ್ನಿ) ವಿಭಾವತಿಯವರು ಫೆಬ್ರುವರಿ ಮಧ್ಯದ ಸುಮಾರಿಗೆ ಎರಡು ದಿವಸ ಬಲರಾಮಪುರದ ಆಸ್ಪತ್ರೆ ಯಲ್ಲಿ ಸುಭಾಸ ಬಾಬುಗಳನ್ನು ಕಂಡರು. ಬೋಸರ ತೂಕವು ಕೈದಾದಾಗಿ ನಿಂದ ೬೦ ಪೌಂಡು ಕಡಿಮೆಯಾಗಿತ್ತು. ಅವರು ಗೊತ್ತು ಹತ್ತದಷ್ಟು ಕ್ಷೀಣರಾಗಿದ್ದರು. ತಲೆನೋವು ಜ್ವರಗಳು ಇನ್ನೂ ಕಡಿಮೆಯಾಗಿರಲಿಲ್ಲ. ಏಕಾಂತವಾಸದಿಂದ ಅವರಿಗೆ ಹುಚ್ಚುಹಿಡಿವಂತಾಗಿತ್ತು. ಆದಾಗ್ಯೂ ಅವರ ನಗುಮುಖವು ಮಾತ್ರ ಆನಂದವನ್ನುಂಟು ಮಾಡುವಂತಿತ್ತು. ಅಲ್ಲಿಯ ಕರ್ನಲ್ ಬಕ್ಲೆ ಮತ್ತು ಉಳಿದ ಡಾಕ್ಟರುಗಳು ಅವರನ್ನು ಬಹಳ ಅಂತಃಕರಣದಿಂದ ಕಾಣುತ್ತಿದ್ದರು.

ಬೋಸರು ಫೆಬ್ರುವರಿ ೨೩ನೆಯ ದಿವಸ ಮುಂಬೈಯಿಂದ ಹೊರಡುವ ಗ್ಯಾಂಜಿಸ್ ಎಂಬ ಹಡಗದಲ್ಲಿ ಹೊರಡುವದು ನಿಶ್ಚಯವಾಯಿತು. ಅವರು ಮೊದಲು ಕೆಲಕಾಲ ವೇನಿಸದಲ್ಲಿದ್ದು ಮುಂದೆ ಸ್ವಿತ್ಸರ್ಲಂಡಕ್ಕೆ ಹೋಗುವ ವ್ಯವಸ್ಥೆಯಾಗಿತ್ತು.

ಬೋಸರು ಹೊರಡುವ ನಿಶ್ಚಿತವು ತಿಳಿದ ಕೂಡಲೆ ದೇಶವಲ್ಲೆಲ್ಲ ಆನಂದದ ಉದ್ಗಾರಗಳು ಹೊರಬೀಳಹತ್ತಿದವು. ಚಿಂತೆಯಿಂದ ಬಿಗಿಯಲ್ಪಟ್ಟ ಜನತೆಯ ಹೃದಯವು ಈಗ ಸ್ವಲ್ಪ ಉತ್ಸಾಹವನ್ನು ಪಡೆಯಿತು. ಕಲಕತ್ತಾ ಕಾರ್ಪೊರೇಶನ್ನದವರು ೧೬ನೆಯ ತಾರೀಖಿನ ದಿನ ಬೋಸರು ಮಾಡಿದ ಸತ್ಕಾರ್ಯಗಳನ್ನು ಕೊಂಡಾಡಿ, ಪರಮಾತ್ಮನು ಅವರಿಗೆ ಆರೋಗ್ಯವನ್ನು ದಯಪಾಲಿಸಲೆಂದೂ ಬೋಸರು ಬೇಗನೆ ಮಾತೃಭೂಮಿಗೆ ಮರುಳಿ ಬರಲೆಂದೂ ಪ್ರಾರ್ಥಿಸಿದರು. ಸುಭಾಸ ಬಾಬುಗಳು ಹೋದ ಹೋದಲ್ಲೆಲ್ಲ ತಮ್ಮ ಪ್ರಿಯ ಬಂಗಾಲದ ಪ್ರೇಮಪೂರ್ವಕ ಸದಿಚ್ಛೆಗಳು ಅವರನ್ನು ಹಿಂಬಾಲಿಸಿದವು. ಅವರ ರಕ್ಷಣೆಗಾಗಿ ಪ್ರತಿಯೊಬ್ಬ ಮಹಿಳೆಯೂ ಮತ್ತು ಪುರುಷನೂ ಪರಮಾತ್ಮನನ್ನು ಪ್ರಾರ್ಥಿಸಿದರು. ಕಾರ್ಪೊರೇಶನ್‌ದ ಅಧ್ಯಕ್ಷಸ್ಥಾನದ ಭಾರವನ್ನು ಇಷ್ಟು ಚಿಕ್ಕವಯಸ್ಸಿನಲ್ಲಿ ವಹಿಸಿ ಧೀರತನದಿಂದಲೂ ಚತುರತನದಿಂದಲೂ ನ್ಯಾಯವಾಗಿಯೂ ಸಮಾಧಾನಕರವಾಗಿಯೂ ನಡೆಯಿಸಿಕೊಂಡು ಹೋದ ಇನ್ನೊಬ್ಬ ತರುಣರು ಸಿಗಲಾರರೆಂದೂ ಬೋಸರು ಬೇಗನೆ ಮರುಳಿಬಂದು ತಾಯ್ನಾಡಿನ ಸೇವೆಗೈಯಲೆಂದೂ ಮೇಯರ್ ಬಿ. ಸಿ. ರಾಯರೇ ಮೊದಲಾದವರು ಪ್ರಾರ್ಥಿಸಿ ತಮ್ಮ ಸದಿಚ್ಛೆಗಳನ್ನು ಕಳುಹಿದರು.

ಸುಭಾಸಚಂದ್ರರು ಮುಂಬೈಗೆ ಹೊರಟಮೇಲೆ ಮಾರ್ಗದಲ್ಲಿ ಪಾಟ್ನಾದಲ್ಲಿ ಅವರ ಬಳಗದವರನೇಕರು ಬಂದು ಭೆಟ್ಟಿಯಾದರು. ಸಹೋದರರಾದ ಬ್ಯಾರಿಸ್ಟರ ಸತೀಶಚಂದ್ರರೂ ಅವರ ಪತ್ನಿಯರೂ ಅತ್ತಿಗೆಯವರೂ ೩ನೆಯ ಚಿಕ್ಕ ತಮ್ಮನೂ ಸಹೋದರಿಯೂ ಸೊಸೆಯೂ ಸೋದರ ಮಾವನೂ ಅನೇಕರು ಬಂದಿದ್ದರು. ಬೋಸರ ಕುಟುಂಬವು ಬಹಳ ದೊಡ್ಡದು. ಇಂಥ ದೊಡ್ಡ ಕುಟುಂಬದಲ್ಲಿ ಬೆಳೆದ ಇವರಿಗೆ ಏಕಾಂತವಾಸವು ಅತ್ಯಂತ ಕಠಿಣತರವಾದ ಶಿಕ್ಷೆಯಾಗಿತ್ತು.

ಪ್ರಯಾಣ ಮಾರ್ಗದಲ್ಲಿ ಜಬ್ಬಲಪೂರಕ್ಕೆ ಇಳಿದು ಅಲ್ಲಿ ಸೆರೆಮನೆಯಲ್ಲಿದ್ದ ಸಹೋದರ ಶರತ್‌ಚಂದ್ರರನ್ನು ಕಂಡರು. ಇವರ ತಂದೆಯವರನ್ನೂ ಇಲ್ಲಿಗೆ ತಂದು ಭೆಟ್ಟಿಮಾಡಿಸುವೆವೆಂದು ಹೇಳಿದ ಸುಳ್ಳು ಆಶೆಗಳು ಈಗ ಬೈಲಾದವು. ತಂದೆಯನ್ನು ಕಾಣದೇ ಹೋಗಬೇಕಾಗಿ ಬಂದಿತು. ಮುಪ್ಪಿನ ತಂದೆಯನ್ನು ಕಾಣಲು ಸರಕಾರವು ತಕ್ಕ ಸವಲತ್ತಿನ ಏರ್ಪಾಡು ಮಾಡದ್ದಕ್ಕಾಗಿ ಬೋಸರಿಗೂ ಅವರ ಬಂಧು-ಮಿತ್ರರಿಗೂ ಬಹಳೇ ಸಂತಾಪವಾಯಿತು. ಪೋಲೀಸಿ

ನವರ ಸಿಬ್ಬಂದಿಯಲ್ಲಿ ಭೆಟ್ಟಿ ತೆಗೆದುಕೊಳ್ಳುವದನ್ನು ಬೋಸರು ನಿರಾಕರಿಸಿ ತಂದೆಯ ಮುಖವನ್ನು ಕಾಣದೆ ಪರದೇಶವನ್ನು ಕಾಣಬೇಕಾಯಿತು. ಸ್ವಾಭಿಮಾನದ ಧೀರರ ನಡೆಯೇ ಆ ತೆರನಾಗಿರುವದು. ಬಂಧುಗಳ ದರ್ಶನವಾಗದಿರುವ ಕಷ್ಟವನ್ನು ಅವರು ಆನಂದದಿಂದ ಸಹಿಸಬಲ್ಲರು; ಆದರೆ ಪೋಲೀಸಿನವರ ಕಾವಲಿನಲ್ಲಿ ಬಳಗದವರ ಭೆಟ್ಟಿಯಾಗುವ ಅಪಮಾನದ ಕಷ್ಟವನ್ನು ಅವರು ಸಹಿಸಲಾರರು. ಆದ್ದರಿಂದಲೇ ಬೋಸರು ಅನೇಕ ವೇಳೆ ಭೆಟ್ಟಿಯ ವಿಷಯದಲ್ಲಿ ನಿರಾಶರಾಗುತ್ತಿದ್ದರು.

ಜಬ್ಬಲಪುರದಲ್ಲಿ ಸತೀಶಚಂದ್ರರೂ ದಿ. ಚಿತ್ತರಂಜನ ದಾಸರವರ ಪತ್ನಿ ಶ್ರೀಮತಿ ವಸಂತಿ ದೇವಿಯವರೂ ಶರತ್‌ಚಂದ್ರರ ೨ನೆಯ ಮಕ್ಕಳಾದ ಅಮಿಯಾಬೋಸರೂ ಇವರನ್ನು ಕಂಡು ಮಾತನಾಡಿದರು. ೨೩ನೆಯ ತಾರೀಖಿನ ಮುಂಜಾನೆ ೯ ಘಂಟೆಗೆ ಸುಭಾಸಚಂದ್ರರು ಮುಂಬೈಗೆ ಮುಟ್ಟಿದರು. ಅಮಿಯಾ ಬೋಸರೂ ಡಾ. ಸೇನರೂ ಅವರೊಡನೆ ಬಂದಿದ್ದರು. ಸ್ಟೇಶನ್ನಿನಲ್ಲಿ ಅನೇಕರು ಕಾದಿದ್ದರು. ಸುಭಾಸಚಂದ್ರರ ಕಕ್ಕಂದಿರೂ ಡಾಕ್ಟರ ದತ್ತರೂ ಇನ್ನೂ ಅನೇಕ ಪ್ರಮುಖರೂ ಬಂದಿದ್ದರು. ಬೋಸರು ಪೋಲೀಸರ ಉಸ್ತುವಾರಿಯಲ್ಲಿ ಬಂದದ್ದರಿಂದ ಯಾರಸಂಗಡ ಮಾತಾಡಲೂ ಅವರಿಗೆ ಅವಕಾಶವಿರಲಿಲ್ಲ.

ಅವರ ಅಂದಿನ ಸ್ಥಿತಿಯು ಶೋಚನೀಯವಾಗಿತ್ತು. ಅವರು ಎದ್ದು ಕೂಡ್ರಲಾರದಷ್ಟು ಅಶಕ್ತರಾಗಿದ್ದರು. ತಾಯ್ನಾಡಿನಿಂದ ದೂರಹೋಗುವ ದುಃಖವು ಅವರನ್ನು ಆವರಿಸಿತ್ತು. ಮುಂಬೈಗೆ ಬಂದ ಮೇಲೂ ಕೂಡ ಅವರಿಗೆ ಸ್ವಾತಂತ್ರ್ಯವಿದ್ದಿಲ್ಲ. ಇನ್ನೂ ಅವರು ಬಂದಿಗಳಾಗಿಯೇ ಇದ್ದರು. ಸರಕಾರದವರ ಕಾರ್ಯದಿಂದ ಸಂತಪ್ತರಾಗಿ ನಿಟ್ಟುಸುರುಗರೆಯುತ್ತಿದ್ದರು. ಪೋಲೀಸರಿಂದ ಸುತ್ತುಗಟ್ಟಲ್ಪಟ್ಟ ಕೃಶಾಂಗೀ, ರೋಗೀ ಸುಭಾಸಚಂದ್ರರು ಇಂದು ಹಡಗಿನವರೆಗೆ ಆ್ಯಂಬುಲನ್ಸ ಕಾರಿನಲ್ಲಿ ಒಯ್ಯಲ್ಪಟ್ಟರು. ಹಡಗಿನಲ್ಲಿ ಳಿಸುವಾಗ ಡೋಲಿಯ ಮೇಲಿಂದ ಇಳಿಸಿದರು. ಇಂಥ ಸ್ಥಿತಿಯಲ್ಲಿದ್ದರೂ ಅವರು ಹಸನ್ಮುಖಿಗಳಾಗಿದ್ದರು. ಅವರ ಮುಖದಿಂದ ಆನಂದದ ಸ್ಫೂರ್ತಿಯು ಹೊರಚಿಮ್ಮಿ ದೇಶ ಬಾಂಧವರನ್ನು ಸಂತೈಸುವಂತಿತ್ತು.

ಇವರು ಹೊರಡುವ ಮುನ್ನ ಇವರಿಗೆ ಸುಖಪ್ರವಾಸವನ್ನು ಕೋರಿ, ಶೀಘ್ರವಾಗಿ ಗುಣವಾಗಲೆಂದು ಹರಸಿ, ಬೇಗನೆ ಮರುಳಿ ಭಾರತಕ್ಕೆ ಬರಲೆಂದು ಹಾರೈಸಿ ಕಳಿಸಿದ ಬಯಕೆಗಳ ಸಂದೇಶಗಳು ಅಸಂಖ್ಯವಾಗಿದ್ದವು. ಭಾರತದ

ಎಲ್ಲ ಭಾಗಗಳಿಂದಲೂ ನೂರಾರು ಸಂಸ್ಥೆಗಳಿಂದಲೂ ಸಾವಿರಾರು ಜನರಿಂದಲೂ ಸಂದೇಶಗಳ ಸುರಿಮಳೆ ಸುರಿದರೂ ಒಂದಕ್ಕಾದರೂ ಸುಭಾಸರು ಉತ್ತರ ಕೊಡುವಂತಿದ್ದಿಲ್ಲ. ಮನಬಿಚ್ಚಿ ಮಾತನಾಡಲು ಕೂಡ ಅವರಿಗೆ ಸ್ವಾತಂತ್ರ್ಯವಿದ್ದಿಲ್ಲ.

ಬೋಸರು ಹಡಗಿನಲ್ಲಿಳಿದಾಗ ಇವರ ಅಣ್ಣನ ಮಕ್ಕಳಾದ ಅಮಿಯಾ ಬೋಸರೂ ಡಾಕ್ಟರ ಸೇನರೂ ಮತ್ತು ಜಬ್ಬಲಪೂರದ ಪೋಲೀಸ ಆಫೀಸರರ ಹೊರ್ತು ಇನ್ನಾರೂ ಇರಲಿಲ್ಲ. ಡಾ. ಸೇನರು ಇವರ ಸ್ಥಿತಿಗಳನ್ನು ನೋಡಿಕೊಳ್ಳುವದಕ್ಕಾಗಿ ಇವರೊಡನೆ ಹೋದರು. ಆಗ ಅಲ್ಲಿದ್ದ ಪೋಲೀಸ ಅಧಿಕಾರಿಯುಷ್ಟು ಉತ್ಸುಕತೆ ಕಳಕಳಿಗಳಿಂದ ಸುಖಪ್ರವಾಸವನ್ನು ಮತ್ತಾರೂ ಕೋರಿರಲಿಕ್ಕಿಲ್ಲವೆಂದು ಹೇಳಬಹುದು. ಈಗ ಬೋಸರನ್ನು ಕಂಡವರೆಲ್ಲ 'ಹೇಗಾದರೂ ಇವರಿಗೆ ಖಾಯಿಲೆ ಗುಣವಾದರೆ ಸಾಕಲ್ಲ!' ಎಂಬ ಉದ್ಗಾರ ತೆಗೆಯುದಿರಲಿಲ್ಲ. ಭಾರತದ ಅಭಿಮಾನಾಸ್ಪದ ಮುದ್ದು ಪುತ್ರನ ಜನ್ಮಕ್ಕೋಸುಗ ಎಲ್ಲರೂ ಚಿಂತಿಸುವವರಲ್ಲಿ ಆಶ್ಚರ್ಯವೇನು?

ರಾಷ್ಟ್ರದ ನೈತಿಕಬಲ ಮತ್ತು ಆತ್ಮಬಲಗಳ ಕೆಚ್ಚಿನ ಪರೀಕ್ಷೆಯು, ಅತ್ಯುನ್ನತ ಆದರ್ಶವನ್ನು ಪಡೆಯುವದಕ್ಕಾಗಿ ಕಾದುವ, ಅಪಜಯದಿಂದ ನಿರಾಶರಾಗಿ ಹಿಂದೆಗೆಯದ ಮತ್ತು ಮೈಮೇಲೆ ಬಂದ ಕಷ್ಟಗಳಿಗೆಲ್ಲ ಹಣಿಯದ ತರುಣರನ್ನವಲಂಬಿಸಿದ್ದರೆ, ಸುಭಾಸಚಂದ್ರರು ಅಂಥ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ರಾಷ್ಟ್ರದ ಮರ್ಯಾದೆಯನ್ನು ಹೆಚ್ಚಿಸಿದ್ದಾರೆಂದು ಹೇಳಬಹುದು. ಇವರು ರಾಷ್ಟ್ರದ ತಾರುಣ್ಯ ಮೂರ್ತಿಯು. ( Idol of the Nation's Youth ) ಕೋಟಿಗಟ್ಲೆ ದೇಶಬಾಂಧವರಿಗೆ ಶಾಶ್ವತ ಸ್ಫೂರ್ತಿದಾಯಕವಾದ ತಾರುಣ್ಯದ ಅವತಾರವೇ ಇವರಿದ್ದಾರೆ. ಇವರು ಭಾವೀ ಯುಗಯುಗಾಂತರಗಳಲ್ಲಿ ಶೋಭಿಸುವ ಉಜ್ವಲ ದೇಶಾಭಿಮಾನದ ಖಣಿಯು; ರಾಷ್ಟ್ರವೀರರ ಮಾಲಿಕೆಯಲ್ಲಿ ಉಚ್ಚಸ್ಥಾನ ಶೋಭಿತರು.

ದೇಶಬಾಂಧವರ ಸೇವಾಭಾವನೆಯಿಂದ ಇವರ ಹೃದಯವು ತುಂಬಿ ತುಳುಕುತ್ತಿದೆ. "ದೇಶಸೇವೆಗಾಗಿ ಉಜ್ವಲವಾದ ಸ್ವಾರ್ಥತ್ಯಾಗ ಮತ್ತು ಅತ್ಯಂತ ಕಳಕಳಿಯ ಆತ್ಮಾರ್ಪಣಗಳ ಉದಾತ್ತ ಕವನವೇ ಅವರ ಜೀವನವಾಗಿದೆ." ( His life has been a noble lyric of brilliant sacrifice and passionate dedication )

ಸುಭಾಷಚಂದ್ರರು ತಾಯ್ನಾಡಿನ ದಡವನ್ನು ಬಿಡುವ ವರೆಗೆ ಬಂದಿಯಾಗಿಯೇ ಇರಬೇಕಾಯಿತು. ಹಡಗವು ಹೊರಡುವಾಗ ಅವರ ಮೇಲಿದ್ದ ೧೮೧೮ ರ ೩ನೆಯ ರೆಗ್ಯೂಲೇಶನ್ ಬಾಣವು ಹಿಂದಕ್ಕೆ ತೆಕ್ಕೊಳ್ಳಲ್ಪಟ್ಟು ಅವರ ವಿಮೋಚನೆಯಾಯಿತು. ಆಗ ಅವರ ಬಾಯಿಬೀಗವು ಕಳಚಿಬಿತ್ತು.

ಹಡಗವು ಏಳು ತಾಸಿನ ದಾರೀ ನಡೆದ ಮೇಲೆ ಫ್ರೀಪ್ರೆಸ್ ಪತ್ರಿಕೆಗೆ ಬೋಸರು ಈ ರೀತಿ ವಾಯುವಾರ್ತಾ ಸಂದೇಶವನ್ನು ಕಳಿಸಿದರು:

“ ಭಾರತೀಯರು ನನ್ನ ಸಲುವಾಗಿ ತೋರಿಸಿದ ಕಳಕಳಿಯ ವಿಶ್ವಾಸಕ್ಕಾಗಿ ನಾನು ಅವರಿಗೆಲ್ಲ ತುಂಬಾ ಕೃತಜ್ಞನಾಗಿದ್ದೇನೆ. ಭಾರತದ ದಡವನ್ನು ಬಿಡುವ ವರೆಗೆ ಸರಕಾರದವರು ನನಗೆ ಸ್ವಾತಂತ್ರ್ಯವನ್ನು ಕೊಡದಿದ್ದುದರ ಕಾರಣವು ನನಗಂತೂ ತಿಳಿಯದಾಗಿದೆ.ವಯೋವೃದ್ಧರೂ ಬೇನೆಯಿಂದ ನರಳುವವರೂ ಆದ ನನ್ನ ಮಾತಾ ಪಿತೃಗಳನ್ನು ನೋಡಲಿಕ್ಕೆ ನನಗೆ ಅನುಕೂಲಮಾಡಿಕೊಡದಿದ್ದುದು ಸರಕಾರದ ಕೇವಲ ಅನ್ಯಾಯವೇ ಸರಿ.

ಈ ನನ್ನ ರೋಗದ ಉಲ್ಬಣಕ್ಕೆ ಸರಕಾರದವರೇ ಕಾರಣರು. ಅದು ಬೆಳೆದು ಇಷ್ಟೊಂದು ತೀಕ್ಷ್ಣವಾದುದಕ್ಕೆ ಅವರೇ ಜವಾಬದಾರರು. ಅದು ಬೆಳೆಯುವ ಪೂರ್ವದಲ್ಲಿಯೇ ನಾನು ಬೇಕಾದಲ್ಲಿ ಹೋಗಿ ರೋಗದ ಲಕ್ಷಣಗಳನ್ನು ಪರೀಕ್ಷಿಸಿಕೊಂಡು ಚಿಕಿತ್ಸೆಹೊಂದಲು ನನಗೆ ಸರಕಾರದವರು ಅವಕಾಶವನ್ನೀಯಲಿಲ್ಲ. ನನ್ನ ಈಗಿನ ಪ್ರವಾಸದ ಖರ್ಚನ್ನೂ ವಹಿಸಲಿಲ್ಲ.

ಈಗ ರೋಗಿಷ್ಠನಾದ ನಾನು ನಿರುಪಯೋಗಿಯಾಗಿ ನಾಡಗಡಿಯಾಚೆಯಲ್ಲಿದ್ದಾಗ್ಯೂ ಈಗೊಬ್ಬ ಸ್ವತಂತ್ರ ಬಂಧುವಿನಂತೆ ನನ್ನ ದೇಶಬಾಂಧವರಿಗೆಲ್ಲ ಸದಿಚ್ಛೆಗಳನ್ನು ಕಳುಹುವೆನು. ಸ್ವಾತಂತ್ರ್ಯಸಮರದಲ್ಲಿ ಜೇಲಿನೊಳಗೂ ಹೊರಗೂ ಕಷ್ಟಕ್ಕೀಡಾದ ಬಾಂಧವರಿಗೆಲ್ಲ ನನ್ನ ವಂದನೆಗಳನ್ನರ್ಪಿಸುವೆ.

ನನ್ನ ಬಾಂಧವರಿಗೆ ನಾನು ಹೇಳುವದಿಷ್ಟೇ:-**ಭಾರತದ ಸ್ವಾತಂತ್ರ್ಯಕ್ಕಾಗಿ ಮಣಿಯದೆ ನಿಂತು ಕಾದಿರಿ. ಭಾರತದ ಧ್ವಜವು ಸದಾ ಮೇಲೆ ಮೇಲೆ ಹಾರಾಡುತ್ತಿರಲಿ. ನಿಮ್ಮ ಉದ್ದೇಶ ಮತ್ತು ಕಾರ್ಯಗಳಿಗೆ ವಿಶ್ವದ ಬೆಂಬಲವಿದೆ. ಅಂತಿಮ ವಿಜಯದಲ್ಲಿ ನಂಬುಗೆಯನ್ನಿಡಿರಿ. ಹರಿಗಡಿಯದ ಉತ್ಸಾಹ ಕಳಕಳಿಗಳಿಂದ ಮುಂದೆ ಸಾಗಿರಿ. ಕಾಮೋಡದ ದಿನಗಳು ಬಯಲಾಗಿರುವವೆಂಬ ನನ್ನ ಮಾತಿನಲ್ಲಿ ವಿಶ್ವಾಸವಿಡಿರಿ. ಸ್ವಾತಂತ್ರ್ಯಸೂರ್ಯನುದಯಕಾಲವು ಸಮೀಪಿಸಿದೆ.** ”

# ೧೩. ಪರದೇಶದಲ್ಲಿ

## ೧೯೩೩-೧೯೩೬

ಬೋಸರು ವ್ಹಿಯೆನ್ನಾದಲ್ಲಿ ಮೂರು ತಿಂಗಳು ಕಳೆಯುವಷ್ಟರಲ್ಲಿ ಅವರ ಆರೋಗ್ಯದಲ್ಲಿ ಸ್ವಲ್ಪ ಗುಣಮುಖತೋರಿತು. ಆದರೂ ಕೆಲವು ವೇಳೆ ಊಟವಾದ ಮೇಲೆ ಹೊಟ್ಟೆನೋವು ಬರುವದು ಕಡಿಮೆಯಾಗಲಿಲ್ಲ. ತೂಕವು ಸಾವಕಾಶವಾಗಿ ಹೆಚ್ಚಹತ್ತಿತು. ಹಾಸಿಗೆಯಿಂದೆದ್ದು ಹೊರಗೆ ಬರುವ ಶಕ್ತಿಯೂ ಬರಹತ್ತಿತು.

ಅಲ್ಲಿ ಅವರು ಪರಕೀಯರಂತೆ ಎಣಿಸಲ್ಪಡಲಿಲ್ಲ. ಅಲ್ಲಿದ್ದ ಭಾರತೀಯ ವಿದ್ಯಾರ್ಥಿಗಳೂ ಅಲ್ಲಿಯ ನಾಗರೀಕರೂ ಬೋಸರನ್ನು ಅವರು ತಮ್ಮ ಸ್ವಗೃಹದಲ್ಲಿದ್ದಷ್ಟೇ ಆನಂದದಿಂದ ಇರುವಂತೆ ಜಾಗರುಕತೆಯಿಂದ ನೋಡಿಕೊಂಡರು. ಎಲ್ಲ ಪಕ್ಷಗಳ ರಾಜಕೀಯ ವಿಚಾರದವರೂ ಸರಿಸಮಾನವಾಗಿ ಕಂಡರು. ಗ್ರಂಥಕರ್ತರು,ಪತ್ರಿಕಾಕರ್ತರು,ವಿಮರ್ಶಕರು, ಕಲೋಪಾಸಕರು, ವಿಶ್ವವಿದ್ಯಾಲಯದ ಪ್ರೊಫೆಸರರು, ಶಾಲಾಗುರುಗಳು, ಸಾಮಾಜಿಕ ಕೆಲಸಗಾರರು

ಮೊದಲಾದವರೆಲ್ಲ ಬೋಸರಿಗೆ ಆಗಿಂದಾಗ್ಗೆ ಸಂದರ್ಶನವಿತ್ತು ಇವರ ಮನಸ್ಸನ್ನು ಹರ್ಷಿತವಾಗಿ ಮಾಡುತ್ತಿದ್ದರು. ಅಲ್ಲಿಯ ಸಾಹಿತ್ಯ, ಸಂಸ್ಕೃತಿ, ಸಮಾಜ ರಚನೆ, ಕಲೆ, ವಿಜ್ಞಾನಗಳನ್ನು ಇವರು ಚೆನ್ನಾಗಿ ತಿಳಿದು ಕೊಳ್ಳಲು ಅಸ್ಪದವಾಯಿತು. ಅಲ್ಲದೆ ಭಾರತದ ವಿಷಯದಲ್ಲಿ ಅಲ್ಲಿಯ ಜನ ರಿಗೆ ಮ. ಗಾಂಧಿ, ಕವಿಕುಲತಿಲಕ ರವೀಂದ್ರನಾಥ ಠಾಕೂರ, ವಿಜ್ಞಾನ ಪಿತಾರದ ಜಗದೀಶಚಂದ್ರ ಬೋಸರ ವಿಷಯಕ್ಕೆ ಆದರಾಭಿಮಾನಗಳು ಇದ್ದವು. ಈ ವ್ಯಕ್ತಿಗಳ ಮೂಲಕ ಅವರು ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಭಿರುಚಿಯುಳ್ಳವರಾಗಿದ್ದರು. ಈ ಸಂಧಿಯಲ್ಲಿ ಸುಭಾಸ ಚಂದ್ರರು ಭಾರತದ ಸ್ಥಿತಿಯನ್ನು ಅವರಿಗೆ ಪ್ರತ್ಯಕ್ಷ ನಿದರ್ಶನಕ್ಕೆ ತಂದು ಕೊಟ್ಟಿರಲ್ಲದೆ ಪರರಾಷ್ಟ್ರದ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಭಾರತದ ಹೋರಾಟಕ್ಕೆ ಸಹಾನುಭೂತಿಯನ್ನು ಪಡೆಯಲನುವಾಗುವಂತೆ ಮಾಡಿದರು.

## ವಿಠ್ಠಲಭಾಯಿಯವರ ಸಹವಾಸ

ಆ ಕಾಲಕ್ಕೆ ಒಂದು ಮಹತ್ವಪೂರ್ಣವಾದ ಪ್ರಸಂಗವು ಒದಗಿತು. ಭಾರತೀಯರ ಅತ್ಯುಚ್ಚವಾದ ಆದರಾಭಿಮಾನಗಳಿಗೆ ಪಾತ್ರರಾಗಿದ್ದ ದಿವಂಗತ ವಿಠ್ಠಲಭಾಯಿ ಪಟೇಲರು ವ್ಹಿಯೆನ್ನಾಕ್ಕೆ ಚಿಕಿತ್ಸೆಗಾಗಿ ಹೋಗಿದ್ದರು. ಅವರ ಸಹವಾಸ-ಸೇವೆಗಳು ಬೋಸರಿಗೆ ದೊರೆತು ಅವರ ಜೀವನದಲ್ಲಿ ಅತ್ಯಂತ ಮಹತ್ವದ ಮಾರ್ಪಾಡುಗಳಾಗಲು ಕಾರಣವಾಯಿತೆನ್ನಬಹುದು.

ಈ ಸಮಯದಲ್ಲಿ ಭಾರತದ ಶಾಸನಭಂಗ ಚಳವಳಿಯು ನಿಲ್ಲಿಸಲ್ಪಟ್ಟ ಸಿಡಿಲಿನಂತಹ ಸುದ್ದಿಯು ಹೊರಬಿತ್ತು. ಇದನ್ನು ಕೇಳಿ ಬೇನೆಯಲ್ಲ ನರ ಳುತ್ತಿದ್ದ ಈರ್ವರೂ ತಳಮಳಿಸಿದರು. ಅಸೆಂಬ್ಲಿಯ ಅಧ್ಯಕ್ಷಸ್ಥಾನವನ್ನೇರಿ ಪಡೆದ ಅತ್ಯುಚ್ಚ ಪದವಿ-ಗೌರವಗಳನ್ನು ಕಾಲಿನಿಂದೊದ್ದು ಸೆರೆಮನೆ ಕಂಡಿದ್ದ ಈ ಮುದಿಹುಲಿಯು ತರುಣಸಿಂಹ ಸುಭಾಸಚಂದ್ರರೊಡನೆ ಕೂಡಿಕೊಂಡು ಗುಡುಗಿತು. ಸಂಯುಕ್ತ ಪ್ರಕಟನೆಯೊಂದನ್ನು ಹೊರಡಿಸಿ ಇವರು ಮಹಾತ್ಮರ ನಿರ್ಣಯವನ್ನು ಬಲವಾಗಿ ಖಂಡಿಸಿದರು. "ಸತ್ಯಾಗ್ರಹವನ್ನು ನಿಲ್ಲಿಸುವ ದೆಂದರೆ ಅಪಜಯವನ್ನು ಒಪ್ಪಿಕೊಂಡಂತೆಯೇ ಸರಿ. ಗಾಂಧಿಯವರು ರಾಜಕೀಯ ನಾಯಕತ್ವದಲ್ಲಿ ಅಪಯಶಸ್ವಿಗಳಾದರು. ಇನ್ನು ಹೊಸ ತತ್ವದ ಮೇಲೆ ಹೊಸ ಪದ್ಧತಿಯಿಂದ ಕಾಂಗ್ರೆಸಿನ ಪುನರ್ಘಟನೆ ಮಾಡ ಬೇಕೆಂಬುದೇ ನಮ್ಮ ಖಂಡಿತವಾದ ಮತ" ಎಂಬುದಾಗಿ ಘೋಷಿಸಿದರು.

ಮುಂದೆ ಅಲ್ಪಾವಧಿಯಲ್ಲಿಯೇ ಅಂದರೆ ೧೯೩೩ ನೆಯ ಅಕ್ಟೋಬರ ೨೨ನೆಯ ದಿನ ವಿಠ್ಠಲಭಾಯಿಯವರು ಜಿನೇವಾದ ಹತ್ತಿರಿನ ಆಸ್ಪತ್ರೆಯೊಂದ ರಲ್ಲಿ ದಿವಂಗತರಾದರು. ಪಟೇಲರ ಮೃತಕಳೇಬರವನ್ನು ಭಾರತಕ್ಕೆ ಸಾಗಿ ಸಲು ಬೋಸರು ಸ್ವತಃ ಮಾರ್ಸೆಲ್ಸದ ವರೆಗೂ ಬಂದಿದ್ದರು. ಆ ಕಾಲಕ್ಕೆ ಬೋಸರು ಮಾಡಿದ ಸೇವೆಯನ್ನು ಮ. ಗಾಂಧಿಯವರು ಪ್ರಶಂಸಿಸಿದ್ದಾರೆ.

## ಮುಖಂಡರ ಖಂಡನೆ, ಮುಂದಿನಮಾರ್ಗ

ಭಾರತದ ಶೋಚನೀಯ ಸ್ಥಿತಿಯ ಬಗ್ಗೆ ಬೋಸರು ಸದಾವಕಾಲವೂ ಚಿಂತಿಸುತ್ತಿದ್ದರು. ಬ್ರಿಟಿಶರ ವಿಷಯದಲ್ಲಿ ಅವರು ಪೂರಾ ನಿರಾಶರಾಗಿದ್ದರು. "ಸುಳ್ಳು ಆಶೆಗಳನ್ನು ಜನರ ಮನಸಿನಲ್ಲಿ ಹುಟ್ಟಿಸುವದಾಗಲಿ ಅಥವಾ ಆ ಆಶೆಗಳ ನಿರೀಕ್ಷಣೆಯಿಂದ ನಾವು ಮೋಸಹೋಗುವದಾಗಿಲಿ ಸದ್ಯದ ಪರಿ ಸ್ಥಿತಿಯಲ್ಲಿ ಮಹಾಪರಾಧವಾಗಿದೆ. ಕಾಂಗ್ರೆಸನ್ನು ಮುರಿದುಹಾಕುವದರಲ್ಲಿ ಸರಕಾರವು ಅಪಜಯಹೊಂದಿದಂತೆ ತನ್ನ ಬೇಡಿಕೆಗಳಿಗೆ ಸರಕಾರವು ಬಾಗಿ ಬರುವಂತೆ ಮಾಡುವದರಲ್ಲಿ ಕಾಂಗ್ರೆಸೂ ಅಪಜಯಹೊಂದಿದೆ. ಆದ್ದರಿಂದ ಸದ್ಯದ ಕಾರ್ಯಕ್ರಮವು ಸಾಕಷ್ಟು ಯೋಗ್ಯವಾದುದಿಲ್ಲವೆಂಬುದನ್ನು ಕಾಂಗ್ರೆಸ ಕೆಲಸಗಾರರೆಲ್ಲ ಅರಿತರೆ ಭಾವೀಕಾರ್ಯಕ್ರಮವನ್ನು ನಿಶ್ಚಯಿಸಲು ಸುಲಭವಾಗುವದು" ಎಂದು ಬೋಸರು ಪತ್ರಿಕೆಗಳಲ್ಲಿ ಬರೆಯಹತ್ತಿದ್ದರು.

ಅಲ್ಲದೆ ಮ. ಗಾಂಧಿಯವರು ಹರಿಜನ ಚಳವಳಿಯನ್ನು ಪ್ರಾರಂಭಿಸಿ ದಾಗ ಅವರ ನಾಯಕತ್ವವನ್ನು ನಿದಾರ್ಕ್ಷಿಣ್ಯವಾಗಿ ಖಂಡಿಸಿ, ಪ್ರತಿಯೊಬ್ಬ ಕಾಂಗ್ರೆಸ ಕಾರ್ಯಕರ್ತನು ಆಗ ಮಾಡಬೇಕಾದ ಕರ್ತವ್ಯವನ್ನು ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ.

"ನಾಯಕರು ತಮ್ಮ ಅನುಯಾಯಿಗಳನ್ನು ನಡುನೀರಿನಲ್ಲಿ ಕೈಬಿಟ್ಟ ರೆಂಬುದು ಸಿದ್ಧ. ನಾನೂ ಭಾರತ ಜನಾಂಗದ ದೀನ ಪ್ರಜೆಗಳಲ್ಲೊಬ್ಬ. ದೇಶದ ನಾಯಕರ ತಪ್ಪುಗಳನ್ನು ವಿಶದಗೊಳಿಸುವದು ನನ್ನ ಕರ್ತವ್ಯವಾಗಿದೆ.

ಮಹಾತ್ಮಾ ಗಾಂಧಿಯವರ ಧ್ವಜದಡಿಯಲ್ಲಿ ನಾನು ೮-೧೦ ವರ್ಷ ಗಳಿಂದ ದುಡಿದಿದ್ದೇನೆ. ಸತ್ಯಾಗ್ರಹ ಸಂಗ್ರಾಮದಲ್ಲಿ ನನ್ನ ಯೋಗ್ಯತೆಗೆ ಮೀರಿ ಹೋರಾಡಿದ್ದೇನೆ. ಗಾಂಧಿಯವರು ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಯಿಸುವ ವರೆಗೆ ನಾವು ಅವರ ಹಿಂದೆ ಇದ್ದೇವೆಂಬ ವಚನವನ್ನು ಕರಾಚಿ ಕಾಂಗ್ರೆಸಿನಲ್ಲಿಯೇ ಕೊಟ್ಟಿದ್ದೇವೆ.

ಈಗ ರಾಜಕಾರಣವನ್ನು ಬಿಟ್ಟು ಅಸ್ಪೃಶ್ಯತಾ ನಿವಾರಣೆಯ ಕಡೆಗೆ ಜನತೆಯ ಲಕ್ಷ್ಯವನ್ನೆಳೆಯುವದು ಶುದ್ಧ ತಪ್ಪು. ಸತ್ಯಾಗ್ರಹವನ್ನು ನಿಲ್ಲಿಸಿದ್ದಂತೂ ಪೂರಾ ತಪ್ಪು. ನಾಯಕರು ನಮ್ಮ ಮನೋರಥಗಳನ್ನೆಲ್ಲ ಭಗ್ನ ಮಾಡಿದರು. ಗಾಂಧಿಯವರು ತಪ್ಪುಗಳಮೇಲೆ ತಪ್ಪನ್ನು ಮಾಡುತ್ತ ಬಂದಿದ್ದಾರೆ. ೧೯೨೨ ರಲ್ಲಿ ಅವರು ಮಾಡಿದ ಬಾರಡೋಲಿ ನಿಶ್ಚಯದಿಂದ ಕಾಲು ಶತಮಾನದ ವರೆಗೆ ದೇಶವು ಹೊಂದಿದ ಕಷ್ಟನಷ್ಟಗಳೆಲ್ಲ ವ್ಯರ್ಥವಾದವು. ಅಂದಿನಿಂದಲೂ ಅವರು ತಮ್ಮ ಹಿಂಬಾಲಿಗರನ್ನು ಈ ರೀತಿ ನಡುಗಾಡಿನಲ್ಲಿ ಕೈಬಿಡುತ್ತಿದ್ದಾರೆ. ಈಗ ಅವರು ತಮ್ಮ ಸಂಕಲ್ಪವನ್ನು ಬಿಟ್ಟು ಬೇರೆ ದಾರಿ ಹಿಡಿದಿದ್ದಾರೆ. ದೇಶವೂ ಸ್ವಾತಂತ್ರ್ಯಸಾಧನೆಗೆ ಬೇರೆ ದಾರಿಯನ್ನು ಕಂಡುಕೊಳ್ಳಬೇಕು. ಸರಕಾರದೊಡನೆ ಸಹಕಾರದ ಮನೋವೃತ್ತಿಯು ನಮ್ಮನ್ನಾವರಿಸದಂತೆ ಪ್ರತಿಯೊಬ್ಬನೂ ಎಚ್ಚರಪಡಬೇಕು. ಕೆಲವು ಕಾಂಗ್ರೆಸ ಜನರು ದಣಿದಿದ್ದಾರೆ. ಅವರು ಈ ಹೋರಾಟವನ್ನು ಹೇಗಾದರೂ ನಿಲ್ಲಿಸಬೇಕೆಂಬ ವಿಚಾರದಲ್ಲಿದ್ದಾರೆ. ಅಂಥವರು ಮೌನವಾಗಿ ಕಾಂಗ್ರೆಸಿನಿಂದ ನಿವೃತ್ತರಾಗಬೇಕಲ್ಲದೆ ಕಾಂಗ್ರೆಸನ್ನು ಲಿಬರಲ್ ಲೀಗನ್ನಾಗಿ ಮಾಡಲೆತ್ನಿಸಬಾರದು. ದಣಿದ ಮತ್ತು ನಿರ್ವೀರ್ಯರಾದ ಜನರೆಲ್ಲ ಹೊರಬಿದ್ದು ಹೊಸ ಹುರುಪಿನ ನವತರುಣರಿಗೆ ಸ್ಥಾನಮಾಡಿಕೊಟ್ಟರೆ ಸರ್ವರಿಗೂ ಹಿತವಾಗುವದು. ಪ್ರತಿಯೊಬ್ಬ ಕಾಂಗ್ರೆಸ ಮನುಷ್ಯನಲ್ಲಿ **ಆತ್ಮವಿಶ್ವಾಸವೂ ಅಂತಿಮ ವಿಜಯದಲ್ಲಿ ನಂಬುಗೆಯೂ ತರ್ಕಬದ್ಧವೂ ಸಶಾಸ್ತ್ರೀಯವೂ ಆದ ಕಾರ್ಯಯೋಜನೆಯೂ** ಇದ್ದರೆ ಅಪಜಯವನ್ನು ಹೊಂದಲಾರೆವು. ಕಾಂಗ್ರೆಸಿನ ಹಿಂದೆ ಜನ ಬೆಂಬಲವಿರುವ ವರೆಗೆ ಮತ್ತು ಸರಕಾರವನ್ನು ಎದುರಿಸುವಾಗ ಅದರಲ್ಲಿ ಇಬ್ಬಣಗಳಾಗದಿರುವ ವರೆಗೆ ನಾವು ಭವಿಷ್ಯದ ವಿಷಯಕ್ಕೆ ಚಿಂತೆಮಾಡಬೇಕಾಗಿಲ್ಲ''.

## ಪರದೇಶದಲ್ಲಿ ಬೋಸರ ಇತರ ಚಟುವಟಿಕೆಗಳು

ದಿ. ವಿಠ್ಠಲಭಾಯಿಯವರ ಮರಣದನಂತರ ಸುಭಾಸಚಂದ್ರರು ಜಿನೇವಾವನ್ನು ಬಿಟ್ಟು ಫ್ರಾನ್ಸದೇಶದ ದಕ್ಷಿಣ ಸಮುದ್ರ ತೀರದಲ್ಲಿರುವ ನೀಸ್ ಎಂಬಲ್ಲಿ ಕೆಲಕಾಲ ಇದ್ದರು. ಅಲ್ಲಿಯ ಅಲ್ಹಾದಕರವಾದ ದೃಶ್ಯ ಮತ್ತು ಸಮುದ್ರದ ಮೇಲಿನ ಗಾಳಿಗಳಿಂದ ಇವರಿಗೆ ಅದೆಷ್ಟೋ ವಿಶ್ರಾಂತಿ ದೊರೆತಂತಾಯಿತು. ಅವರ ಹೊಟ್ಟೆಯಲ್ಲುಂಟಾಗಿದ್ದ ವಿಕೃತಿಯು ಕಡಿಮೆಯಾ

ಯಿತು. ಪ್ರಕೃತಿಯಲ್ಲಿ ಮೆಲ್ಲಮೆಲ್ಲನೆ ಸುಧಾರಣೆಯಾಗಹತ್ತಿದ್ದು ಕಂಡು ಬಂದಿತು. ಅಲ್ಲಿರುವಾಗ "ವಿಠ್ಠಲಭಾಯಿಯವರ ಕೊನೆಯದಿನಗಳು" ಎಂಬ ಚಿಕ್ಕ ಪುಸ್ತಕವನ್ನು ಬರೆಯುವದರಲ್ಲಿಯೂ ಮತ್ತು ಪರದೇಶದ ರಾಜಕಾರಣವನ್ನು ಅಭ್ಯಸಿಸುವದರಲ್ಲಿಯೂ ಇವರು ಹೊತ್ತುಗಳೆದರು. ಅಲ್ಲಿಯ ನಗರ ಸಭೆಗಳ ವಿಷಯಗಳನ್ನು ಆಳವಾಗಿ ಅಭ್ಯಸಿಸಿ ಭಾರತದ ನಗರ ಸಭೆಗಳೊಂದಿಗೆ ತುಲನೆಮಾಡಿ ಚಿಕ್ಕಹೊತ್ತಿಗೆಯೊಂದನ್ನು ಬರೆದರು.

ಮುಂದೆ ಇವರು ಅಭ್ಯಾಸ ದೃಷ್ಟಿಯಿಂದ ಯುರೋಪದ ಆಗ್ನೇಯ ದಿಕ್ಕಿನ ವಿಶಾಲವಾದ ಪ್ರವಾಸವನ್ನು ಕೈಕೊಂಡರು. ಹಂಗರಿ, ರೋಮಾನಿಯಾ, ಟರ್ಕಿ, ಮತ್ತು ಜುಗೋಸ್ಲೋವಕಿಯಾ ದೇಶಗಳಲ್ಲಿ ಅವರು ಸಂಚರಿಸಿದರು. ಮೊದಲು ಅವರು ಇಂಡೋ-ಝೆಕೋಸ್ಲೋವಕ ಸಮಾಜ (Indo-Czechoslovak society) ದ ಪ್ರಾರಂಭೋತ್ಸವಕ್ಕೆ ಪ್ರೇಗಕ್ಕೆ ಹೋಗಿದರು. ಅಲ್ಲಿಂದ ಮುಂದೆ ವ್ಹಿಯೆನ್ನಾದ ಮೇಲೆ ಹಾಯ್ದು ಮೊದಲು ಹಂಗರಿಗೆ ಬಂದರು. ಬೋಸರು ಬ್ಯುಡಾಪೆಸ್ಟವನ್ನು ಸಂದರ್ಶಿಸಿದ ಬಗ್ಗೆ ಹಂಗರಿಯ ಪರದೇಶ ಶಾಖೆಯ ಮುಖಪತ್ರಿಕೆಯಾದ "ದಿ ಪೆಸ್ಟರ್ ಲಾಯಿಡ್" ಮೊದಲಾದ ಪತ್ರಿಕೆಗಳಲ್ಲಿ ಮಹತ್ವದ ಲೇಖಗಳು ಪ್ರಕಟವಾದವು. ಭಾರತದ ಸಮಸ್ಯೆಯು ಜಾಗತಿಕ ಪ್ರಶ್ನೆಯಾಗಿರುವದರಿಂದ ಅದನ್ನು ಬಿಡಿಸದೆ ಅಂತರರಾಷ್ಟ್ರೀಯ ಪ್ರಶ್ನೆ ಬಿಡಲಾರದೆಂಬ ಅವರ ವಾದವನ್ನೂ ಅವರ ಭಾರತದ ಭಾವೀ ಯೋಜನೆಯನ್ನೂ ಅಲ್ಲಿ ದೊಡ್ಡಕ್ಕರಗಳಲ್ಲಿ ಮಹತ್ವದ ಸ್ಥಾನಗಳಲ್ಲಿ ಪ್ರಸಿದ್ಧಮಾಡಿದವು. ಬೋಸರು ಈ ಪ್ರವಾಸದಲ್ಲಿ ಅಲ್ಲಿಯ ರಾಷ್ಟ್ರಗಳ ಪರಿಸ್ಥಿತಿಯನ್ನು ಭಾರತದ ಪರಿಸ್ಥಿತಿಯೊಡನೆ ಸರಿಹಚ್ಚಿ ತೋರಿಸಿ ಭಾರತದ ವಿಷಯಕ್ಕೆ ಆಸ್ಥೆ, ಆದರ, ಸಹಾನುಭೂತಿಗಳನ್ನು ಹುಟ್ಟಿಸುತ್ತಿದ್ದರು. ಬೆಲ್ಗ್ರೇಡದಿಂದ ಬಾಲ್ಕನ್ನರಿಗೆ ಕಳಿಸಿದ ಒಂದು ಸಂದೇಶದಲ್ಲಿ ಇವರು ಬಾಲ್ಕನರ ಆರ್ಥಿಕ ಮತ್ತು ರಾಜಕೀಯ ಸಮಸ್ಯೆಗಳಲ್ಲಿ ಭಾರತೀಯರಿಗೆ ಕಂಡು ಬರುವ ಮಹತ್ವದ ಹಿತಾಹಿತಗಳನ್ನು ಸಾಂಗವಾಗಿ ವಿವರಿಸಿದ್ದರು.

ವ್ಹಿಯೆನ್ನಾದಲ್ಲಿದ್ದಾಗ ಬೋಸರ ದೇಹವನ್ನು ಅನೇಕ ಸುಪ್ರಸಿದ್ಧ ಡಾಕ್ಟರರುಗಳು ಪರೀಕ್ಷಿಸುತ್ತಿದ್ದರು. ಜರ್ಮನಿಯ ಯಾವುದಾದರೊಂದು ಆರೋಗ್ಯ ನಿವಾಸದಲ್ಲಿ ಕೆಲಕಾಲ ಕಳೆಯಬೇಕೆಂದು ಕೆಲವು ಡಾಕ್ಟರರು ಸಲಹೆ ಕೊಟ್ಟ ಪ್ರಕಾರ ಬೋಸರು ಜರ್ಮನಿಗೆ ಪ್ರಯಾಣವನ್ನು

ಬೆಳೆಸಿದರು. ಅಲ್ಲಿ ಭಾರತೀಯ ವಾರ್ತಾಪ್ರಸಾರಕ ಸಂಘವೊಂದನ್ನು (Indian Information Bureau) ರಾಷ್ಟ್ರಪತಿ ಪಂ. ಜವಾಹರಲಾಲರು ಕಾಂಗ್ರೆಸ ಪರವಾಗಿ ಸ್ಥಾಪಿಸಿದ್ದರಷ್ಟೆ. ಅದು ಕೆಲಕಾಲ ಬಂಧು ನಂಬಿಯಾರರ ನೇತೃತ್ವದಲ್ಲಿ ಸರಿಯಾಗಿ ಸಾಗಿತು. ಆದರೆ ನಂಬಿಯಾರರನ್ನು ಜರ್ಮನಿಯಿಂದ ಹೊರಗೆ ತಳ್ಳಿದಂದಿನಿಂದ ಈ ಕೆಲಸವು ಕುಂಠಿತವಾಗಿತ್ತು. ಜರ್ಮನಿಯೊಳಗಿದ್ದ ಭಾರತೀಯ ವಿದ್ಯಾರ್ಥಿಗಳಲ್ಲಿ ತಾಳಮೇಳಗಳಿರಲಿಲ್ಲ. ಬರ್ಲಿನದೊಳಗಿನ ಭಾರತೀಯರ ಸಂಘಟನೆಮಾಡಿ ಭಾರತದ ಹಿತಸಂರಕ್ಷಣೆಗಾಗಿ ಅವರನ್ನು ಹೋರಾಡಹಚ್ಚಿದ ಕೀರ್ತಿಯು ಬೋಸರಿಗೆ ಸಲ್ಲುವದು. ಜರ್ಮನಿಯ ಅನೇಕ ನಾಯಕರೊಡನೆ ಬೋಸರು ಮಾತುಕತೆ ನಡೆಯಿಸಿ ಭಾರತ ಮತ್ತು ಜರ್ಮನಿಗಳ ನಡುವಿನ ಸಖ್ಯಸಂಬಂಧವನ್ನು ಹೆಚ್ಚಿಸಿದರು. ಜರ್ಮನಿಯ ಪ್ರಮುಖ ಪತ್ರಿಕೆಗಳ ಪ್ರತಿನಿಧಿಗಳೆಲ್ಲ ಬೋಸರನ್ನು ಕಂಡು ಅವರೊಡನೆ ಚರ್ಚಿಸಿ ಅವರ ಸಂಭಾಷಣೆಗಳನ್ನು ಅವರ ಚಿತ್ರಗಳೊಂದಿಗೆ ಒಳ್ಳೇ ಮಹತ್ವದವುಗಳೆಂದು ಪ್ರಕಟಿಸಿದರು. ಭಾರತದ ವಿಷಯದಲ್ಲಿ ಜರ್ಮನಿಗೆ ಹೆಚ್ಚಿನ ಆಸ್ಥೆಯುಂಟಾಗತೊಡಗಿತು. "ಭಾರತದ ಸ್ಥಿತಿ"ಯ ವಿಷಯಕ್ಕೆ ಅನೇಕ ಸಾರ್ವಜನಿಕ ಭಾಷಣಗಳನ್ನು ಬೋಸರು ಮಾಡಬೇಕಾಯಿತು. ಹೀಗಾಗಿ ಅವರ ಬೇನೆಯು ಕಡಿಮೆಯಾಗಲಿಲ್ಲ. ಆದ್ದರಿಂದ ಕೆಲ ಕಾಲ 'ಬ್ಲ್ಯಾಕ ಫಾರೆಸ್ಟ' ದಲ್ಲಿ ಉಪಚಾರಹೊಂದಲು ನಿಶ್ಚಯಿಸಿದರು.

ಭಾರತದ ವಿಷಯಕ್ಕೆ ಅಲ್ಲಿಯ ಜನಸಾಮಾನ್ಯರ ಅಜ್ಞಾನವನ್ನೂ ಮತ್ತು ನಿಜವಾದ ಸಂಗತಿಗಳನ್ನು ತಿಳಿಯಬೇಕೆಂಬ ಪಲಕೆಲವರ ಕುತೂಹಲವನ್ನೂ ಇವರು ಈ ಪ್ರವಾಸದಿಂದ ಕಂಡುಕೊಂಡರು. ಆ ಆ ದೇಶಗಳ ಪತ್ರಿಕೆಗಳ ಮೂಲಕ ಭಾರತದ ನಿಜವಾದ ಕಲ್ಪನೆಯನ್ನು ಅಲ್ಲಿಯ ಜನರಿಗೆ ತಂದುಕೊಡಲು ಸಾಧ್ಯವಿದ್ದ ಎಲ್ಲ ಸಾಹಸವನ್ನು ಮಾಡಿದರು. ಕಾಂಗ್ರೆಸ ಮಹಾ ಸಂಸ್ಥೆಯು ಈ ವಿಷಯದಲ್ಲಿ ಅತ್ಯವಶ್ಯವಾಗಿ ಗಮನಿಸಬೇಕಾದ ವಿಚಾರಗಳನ್ನು ಕಾಂಗ್ರೆಸ್ಸಿಗೆ ನಿಷ್ಠುರವಾಗಿ ಒತ್ತಿಹೇಳಿದರು.

೧೯೩೩ನೆಯ ಜೂನತಿಂಗಳ ೧೦ನೆಯ ತಾರೀಖಿನದಿನ ಲಂಡನ್ನಿನಲ್ಲಿ ೩ನೆಯ ಭಾರತ ರಾಜಕೀಯ ಪರಿಷತ್ತು ಫ್ರಾಯರ್ಸ ಹಾಲಿನಲ್ಲಿ ಕೂಡಿತ್ತು. ಪ್ರತಿನಿಧಿಗಳಲ್ಲಿ ಕಮ್ಯುನಿಸ್ಟರ ಸಂಖ್ಯೆಯೇ ಬಹಳವಾಗಿತ್ತು. ಈ ಪರಿಷತ್ತಿಗೆ ಅಧ್ಯಕ್ಷರಾಗಿ ಆರಿಸಲ್ಪಟ್ಟ ಬೋಸರಿಗೆ ಬರುವದು ಶಕ್ಯವಾಗಲಿಲ್ಲ. ಬ್ರಿಟಿಶ

ಸರಕಾರವು ಇವರಿಗೆ ಪ್ಯಾಸಪೋರ್ಟ ( ಪರವಾನಿಗೆ ) ಕೊಡಲಿಲ್ಲವಾದ್ದರಿಂದ ಇವರು ತಮ್ಮ ಭಾಷಣವನ್ನು ಬರೆದು ಕಳಿಸಬೇಕಾಯಿತು.

ಪರದೇಶದಲ್ಲಿದ್ದಾಗ ಬೋಸರು ಇಂಗ್ಲಂಡಕ್ಕೆ ಹೋಗಲು ಇಷ್ಟಪಟ್ಟು ಅನೇಕಸಲ ಪ್ಯಾಸ್ ಪೋರ್ಟಗಾಗಿ ನಿಷ್ಫಲವಾಗಿ ಪ್ರಯತ್ನಿಸಿದ್ದರು. ಕೊನೆಯ ಪ್ರಯತ್ನವೆಂದು ಅವರು ಒಮ್ಮೆ ಬಹಿರಂಗ ಪತ್ರವೊಂದನ್ನು ಬ್ರಿಟಿಶ ಸರಕಾರಕ್ಕೆ ಬರೆದುದರ ಫಲವಾಗಿ ಅವರಿಗೆ "ಅವಕಾಶ ಕೊಟ್ಟಿದೆ" ಎಂಬ ಅನುಮತಿ ದೊರೆಯಿತು. ಈ ಸುದ್ದಿ ಹರಡುವಷ್ಟರಲ್ಲಿಯೇ ತೆರೆಯ ಮರೆಯಲ್ಲಿ ಏನೇನೋ ನಡೆದು ಈ "ಅವಕಾಶ"ಕ್ಕೆ ಸಂಚಕಾರ ಬಂದಿತು. "ಭಾರತ ಕಚೇರಿಯ ಕಾರಕೂನರು ಕೈತಪ್ಪಿ ಮಾಡಿದ ಪ್ರಮಾದವಿದು" ಎಂಬ ಕುಂಟು ನೆವದಿಂದ ಕೊಟ್ಟಿದ್ದ ಪ್ಯಾಸ್ ಪೋರ್ಟನ್ನು ರದ್ದು ಮಾಡಲಾಯಿತು. ಆಗ ಬೋಸರು ವಿಶದವಾದ ಪ್ರಕಟನೆಯೊಂದನ್ನು ಹೊರಡಿಸಿ, ತಮ್ಮ ಭಗೀರಥ ಪ್ರಯತ್ನಗಳೆಲ್ಲ ಹೇಗೆ ಮಣ್ಣು ಗೂಡಿದವೆಂಬುದನ್ನು ಸ್ಪಷ್ಟೀಕರಿಸಿ, ಬ್ರಿಟಿಶ ಸರಕಾರದ ಪ್ರಾಮಾಣಿಕತನದಲ್ಲಿ ತಮ್ಮ ಸಂಶಯುವನ್ನು ವ್ಯಕ್ತಮಾಡಿ ಅದರ ರೀತಿ ನೀತಿಗಳನ್ನು ಬಲವಾಗಿ ಖಂಡಿಸಿದರು. ಸ್ವತಂತ್ರ ರಾಷ್ಟ್ರಗಳಲ್ಲಿ ಸಹ ಪರದೇಶಿಯಾಗಿದ್ದ ಬೋಸರಿಗೆ ಎಷ್ಟೊಂದು ನಿರ್ಬಂಧಗಳಿದ್ದವೆಂಬುದನ್ನು ಈ ಒಂದು ಉದಾಹರಣೆಯಿಂದ ವಾಚಕರು ಊಹಿಸಬಹುದಾಗಿದೆ.

ಬೋಸರು ಪರನಾಡಿನಲ್ಲಿದ್ದಾಗ ಅಯರ್ಲಂಡವನ್ನು ಸಂದರ್ಶಿಸಿದರು. ಅಲ್ಲಿಯ ಸ್ವಾತಂತ್ರ್ಯ ವೀರರಾದ ಅಧ್ಯಕ್ಷ ಡಿ. ವೆಲರಾರವರು ಇವರನ್ನು ಅಧಿಕಾರೀ ವತಿಯಿಂದ ಡಬ್ಲಿನದಲ್ಲಿ ಸ್ವಾಗತಿಸಿದರು. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಇವರೊಡನೆ ಮಾತುಕತೆನಡೆಯಿಸಿ ಬೋಸರು ಇವರ ಸಹಾನುಭೂತಿಯನ್ನು ದೊರಕಿಸಿಕೊಂಡು ಬಂದರು. ಮತ್ತು ಅಲ್ಲಿಂದಲೇ ಲಂಡನದೊಳಗಿನ ನ್ಯಾಶನ್ಯಾಲಿಸ್ಟರೊಡನೆ ಸಂಬಂಧ ಬೆಳಿಸಲು ಪ್ರಯತ್ನಿಸಿದರು.

ಪಾಶ್ಚಾತ್ಯ ದೇಶಗಳ ಸಂಚಾರದಿಂದ ತಿರುಗಿ ಬರುವಾಗ ಬೋಸರು ಸುಪ್ರಸಿದ್ಧ ಫ್ರೆಂಚ ತತ್ವಜ್ಞಾನಿಗಳೂ ಹೆಸರುವಾಸಿಯಾದ ಗ್ರಂಥಕರ್ತರೂ ಜಗತ್ತಿನ ಶಾಂತಿಗಾಗಿ ಸದಾ ಹಂಬಲಿಸುತ್ತಿರುವ ಮಹರ್ಷಿಯೂ ಆಗಿರುವ ರೋಮಾನ್ ರೋಲ್ಯಾಂಡರನ್ನು ಸಂದರ್ಶಿಸಿ ಅವರೊಡನೆ ಭಾರತದ ರಾಜಕೀಯ ಪರಿಸ್ಥಿತಿಯನ್ನು ಕುರಿತು ದೀರ್ಘವಾದ ಸಂಭಾಷಣೆ ಮಾಡಿದರು.

●



ವ್ಹಿಯೆನ್ನಾದಲ್ಲಿ ಚಿಕಿತ್ಸೆ ಹೊಂದುತ್ತಲಿದ್ದ ಬೋಸರು

೧೯೩೩—೧೯೩೪

## ೧೪. ಭಾರತಕ್ಕೆ ಪಯಣ, ತಂದೆಯವರ ಮರಣ

ಸುಭಾಸಚಂದ್ರರು ಪರದೇಶದಲ್ಲಿ ಚಿಕಿತ್ಸೆ ಹೊಂದುತ್ತಿದ್ದಾಗ ಅವರ ಮುಪ್ಪಿನ ತಂದೆಯವರ ಸ್ಥಿತಿಯು ತೀರಾ ಅಂತ್ಯಾವಸ್ಥೆಗೆ ಬಂದಿತು. ತಂದೆಯವರ ಮೇಲೆ ಸುಭಾಸಚಂದ್ರರ ಪ್ರೇಮ ಬಹಳ. ಸುಭಾಸಚಂದ್ರರೆಂದರೆ ತಂದೆಯವರಿಗೂ ಅಷ್ಟೇ; ಪಕ್ಷಪಾತ ಪ್ರೇಮವಿದ್ದಂತಿತ್ತು. ತಂದೆಯವರ ಅಂತ್ಯಾವಸ್ಥೆಯ ವಾರ್ತೆಯು ಸಹನಾತೀತವಾಯಿತು. ಸುಭಾಸಚಂದ್ರರು ವಿಮಾನಮಾರ್ಗವಾಗಿ ವ್ಹಿಯೆನ್ನಾದಿಂದ ಭಾರತಕ್ಕೆ ಹೊರಟೇ ಬಿಟ್ಟರು. ತಮ್ಮ ದೇಹಾರೋಗ್ಯದ ಪರಿವೆ ಅವರಿಗುಳಿಯಲಿಲ್ಲ.

ಸುಭಾಸಬಾಬುಗಳು ೧೯೩೪ನೆಯ ಡಿಸೆಂಬರ ೩ನೆಯ ತಾರೀಖಿನ ಸಾಯಂಕಾಲ ೬|| ಘಂಟೆಗೆ ಡಚ್ ಟಪಾಲ ವಿಮಾನದಿಂದ ಕರಾಚಿಗೆ ಬಂದು ಮುಟ್ಟಿವರು. ಅವರ ಸ್ವಾಗತಕ್ಕಾಗಿ ಪ್ರತಿಷ್ಠಿತ ಗೃಹಸ್ಥರನೇಕರೂ ಪ್ರಾ. ಕಾ. ಕ. ಅಧ್ಯಕ್ಷರಾಗಿದ್ದ ಗಿಡ್ವಾನಿಯರೂ ಆಗಮಿಸಿದ್ದರು. ವಿಮಾನದಿಂದ ಕೆಳಗಿಳಿದ ಕೂಡಲೆ ಬೋಸರು ತಮ್ಮ ತಂದೆಯ ಪ್ರಕೃತಿಯ ಬಗ್ಗೆ ವಿಚಾರಿಸಿದರು. ಹಿಂದಿನ ಕರಾಚಿ ನಗರ ಸಭಾಧ್ಯಕ್ಷರಾದ ಜಮಸೇದ ಮೆಹತಾರವರು ದುಃಖದಿಂದ ಉತ್ತರವನ್ನೀಯುತ್ತ “ಇತ್ತೀಚಿನ ಸುದ್ದಿ ತಮಗೆ ತಿಳಿದಂತೆ ಕಾಣುವದಿಲ್ಲ” ಎಂದರು. ಬೋಸರು ಗೊತ್ತಿಲ್ಲವೆಂದು ತಿಳಿಸಿದಾಗ ನಿರುಪಾಯರಾಗಿ ಅವರು ಬೋಸರ ತಂದೆಯ ಶೋಕಮಯ ವಾರ್ತೆಯನ್ನು ತಿಳಿಸಬೇಕಾಯಿತು. ಅದನ್ನು ಕೇಳಿದ ಕೂಡಲೆ ಬೋಸರ ಕಣ್ಣುಗಳಲ್ಲಿ ನೀರುತುಂಬಿ ಕಂಠವು ಬಿಗಿಯಿತು. ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಹೀಗೆ ಎಲ್ಲರೂ ಕೆಲಹೊತ್ತು ಸ್ತಬ್ಧರಾಗಿದ್ದರು.

ಆಮೇಲೆ ಪ್ರೊ. ಘನಸ್ಯಾಮರು ಸುಭಾಸ ಬಾಬುಗಳಿಗೆ ಭಾರತಕ್ಕೆ ಬರಲು ಪ್ಯಾಸಪೋರ್ಟ ಸಿಗಲಿಲ್ಲವೆಂಬ ಸುದ್ದಿಯ ಬಗ್ಗೆ ಕೇಳಿದರು. ಆಗ ಸುಭಾಸಚಂದ್ರರು ಉತ್ತರಕೊಡುತ್ತ ಮೊದಮೊದಲು ವ್ಹಿಯೆನ್ನಾದ ರಾಯಭಾರಿಯು ಪ್ಯಾಸಪೋರ್ಟ ಕೊಡಲು ಒಪ್ಪಲಿಲ್ಲ ಆದರೆ ತಂದೆಯವರ ವಿಷಯಕ್ಕೆ ಇತ್ತೀಚಿಗೆ ಬಂದ ತಾರನ್ನು ತೋರಿಸಿ ನೆಟ್ಟಗೆ ಕಲ್ಕತ್ತೆಗೆ ಹೋಗುವೆನೆಂದು ತಿಳಿಸಿದ ಕೂಡಲೆ ಅವರು ಒಪ್ಪಿದರೆಂದು ತಿಳಿಸಿದರು.

ಆಗ ಪ್ರಶ್ನೆಕೇಳಲು ಮುಂದೆ ಬಂದ ಪತ್ರಿಕಾಪ್ರತಿನಿಧಿಗೆ ಸುಭಾಸಬಾಬುಗಳು “ಈಗ ನನ್ನ ಸ್ಥಿತಿ ಏನಾಗಿದೆ ಎಂಬುದು ನಿಮಗೆ ಗೊತ್ತೇ ಇದೆ” ಎಂದು ಹೇಳಲು ಯಾರೂ ಹೆಚ್ಚು ಮಾತನಾಡದೆ ಸುಮ್ಮನಾದರು. ಕಸ್ಟಮ್ ಅಧಿಕಾರಿಗಳ ಪ್ರಶ್ನೆಗಳಿಗೆ ಉತ್ತರ ಕೊಡುವದಕ್ಕಿಷ್ಟು ಮಾತ್ರ ಅವರು ಮಾತಾಡುತ್ತಿದ್ದರು. ಉಳಿದ ವೇಳೆಯಲ್ಲೆಲ್ಲ ಅವರನ್ನು ವ್ಯಾಕುಲತೆಯು ತುಂಬಾ ಆವರಿಸಿದ್ದರಿಂದ ಅವರು ಮೌನವಾಗಿಯೇ ಇದ್ದರು. ಕಸ್ಟಮ್ ಅಧಿಕಾರಿಗಳು ಸುಭಾಸಬಾಬುಗಳ ಸಾಮಾನುಗಳನ್ನೆಲ್ಲ ಸೂಕ್ಷ್ಮವಾಗಿ ಪರೀಕ್ಷಿಸಿದರು. ಕೆಲವು ಸಿ. ಆಯ್. ಡಿ. ಅಧಿಕಾರಿಗಳೂ ಆ ಕಾಲಕ್ಕೆ ಹಾಜರಿದ್ದರು. ಬೇಗನೆ ಲಂಡನ್ನಿನಲ್ಲಿ ಪ್ರಸಿದ್ಧವಾಗಲಿದ್ದ ಸುಭಾಸಚಂದ್ರರ “ಭಾರತೀಯ ಸಂಗ್ರಾಮ” ವೆಂಬ ಗ್ರಂಥದ ಟಾಯಿಪರಾಯಿಟ ಪ್ರತಿಯನ್ನು ಜಪ್ತಮಾಡಿದರು.

ಮರುದಿನ ಸಾಯಂಕಾಲ ನಾಲ್ಕು ಗಂಟೆಯ ಸುಮಾರಿಗೆ ವಿಮಾನ ಮಾರ್ಗವಾಗಿ ಬೋಸರು ಕಲ್ಕತ್ತೆಯನ್ನು ತಲ್ಪಿದರು. ವಿಮಾನಗೃಹದಲ್ಲಿ ಅನೇಕ ಪೋಲೀಸರೂ ಸಿಪಾಯರೂ ಪತ್ರಿಕಾ ಪ್ರತಿನಿಧಿಗಳೂ ಪ್ರತಿಷ್ಠಿತ ಸಭ್ಯಗೃಹಸ್ಥರೂ ಒಂದು ಕಾದಿದ್ದರು. ವಿಮಾನು ಭೂಮಿಗಿಳಿದ ಕೂಡಲೆ ಪೋಲೀಸರು ಅವರನ್ನು ಮುತ್ತಿ ಸುತ್ತುವರಿದು ನಿಂತುಕೊಂಡರು. ಕೂಡಲೆ ಅವರೊಳಗಿದ್ದ ಸಿ. ಆಯ್. ಡಿ. ಅಧಿಕಾರಿಯು ಅವರ ಮೇಲೆ ಸರಕಾರದ ನೋಟೀಸನ್ನು ಪ್ರಯೋಗಿಸಿ ಪೋಲೀಸರ ಮೋಟರಿನಲ್ಲಿ ಅವರನ್ನು ಮನೆಗೆ ಒಯ್ದು ಮುಟ್ಟಿಸಿದರು. ಅವರು ಮನೆ ಮುಟ್ಟುವವರೆಗೆ ಅಧಿಕಾರಿಗಳು ವಿಮಾನಗೃಹಕ್ಕೆ ಬಂದಿದ್ದ ಖಾಸಗಿ ಮೋಟರುಗಳನ್ನು ಅಲ್ಲಿಂದ ಚಲಿಸಗೊಡಲಿಲ್ಲ. ಸುಭಾಸಚಂದ್ರರ ಮೇಲಿನ ಈ ಬಾಣಪ್ರಯೋಗವು ಬಂಗಾಲ ಕ್ರಿಮಿನಲ್ ಅಮೆಂಡಮೆಂಟ್ ಕಾಯಿದೆಯನ್ವಯವಾಗಿತ್ತು. ಅದರಲ್ಲಿ ಸುಭಾಸಬಾಬುಗಳು ಮನೆಬಿಟ್ಟು ಹೊರಗೆ ಹೋಗಬಾರದು, ಯಾರ ಭೆಟ್ಟಿಯನ್ನೂ ತೆಗೆದುಕೊಳ್ಳಲಾಗದು, ಮನೆಯವರ ಹೊರತು ಇತರರೊಡನೆ ಮಾತಾಡಬಾರದು, ಅಡ್ಡಾಡಬಾರದು, ತಾರು, ಪತ್ರ, ಪಾಕೀಟು, ಪಾರ್ಸಲ್, ರಜಿಸ್ಟರ ಮೊದಲಾದವುಗಳೇನಾದರೂ ಬಂದರೆ ಅವುಗಳನ್ನು ಒಡೆಯದೆ ಮೊದಲು ಪೋಲೀಸರ ವಶಕ್ಕೆ ಕೊಡಬೇಕು, ಮೊದಲಾದ ಹೇಯವಾದ ಕರಾರುಗಳಿದ್ದವು. ಈ ಅಪ್ಪಣೆ ಮುರಿದರೆ ೭ ವರ್ಷ ಶಿಕ್ಷೆ ಮತ್ತು ದಂಡ ವಿಧಿಸಲಾಗುವದೆಂದು ಹೇಳಿತ್ತು.

ಅತ್ತ ತಂದೆಯ ಮರಣದ ಶೋಕಾಗ್ನಿ, ಇತ್ತ ಅಪಮಾನದ ಪರಮಾವಧಿಯಾದ ಹೇಯ ಆಜ್ಞೆ, ಮೊದಲೇ ತೀಕ್ಷ್ಣವಾದ ಪ್ರಕೃತಿ, ಈ ಮೂರು ವ್ಯಾಕುಲತೆಗಳ ಮಧ್ಯದಲ್ಲಿ ಸಿಕ್ಕು ಸುಭಾಸ ಬಾಬುಗಳ ಗತಿ ಏನಾಗಿರಬಹುದು? ಹೇಗಾಗಿರಬಹುದು? ಎಂಬುದನ್ನು ವರ್ಣಿಸುವ ಸಾಹಸ ಮಾಡುವದಕ್ಕಿಂತ ವಾಚಕರಿಗೆ ಊಹಿಸಲು ಬಿಡುವದು ಯಥಾ ಯೋಗ್ಯವಾಗಿದೆ.

ಸುಭಾಸಬಾಬುಗಳು ಈ ಪರಿಸ್ಥಿತಿಯಲ್ಲಿ ಏನೂ ತೋಚದವರಾಗಿ ಆಪ್ತಬಾಂಧವರ ಸಲಹೆಯಂತೆ ತಂದೆಯವರ ದಿನಕರ್ಮವಿಧಿಗಳು ಪೂರೈಸುವವರೆಗೂ ಅಪಮಾನಕಾರಕವಾದ ಆಜ್ಞೆಗಳನ್ನು ಪಾಲಿಸಿದರು. ಜೀವಪಹಂಗು ದೊರೆದ ಈ ವೀರರು ಭಾರತೀಯರೆಲ್ಲರ ಆಗ್ರಹಕ್ಕಾಗಿ ಪುನಃ ಒಂದು ತಿಂಗಳ ಅವಧಿಯಲ್ಲಿ ವ್ಹಿಯೆನ್ನಾಕ್ಕೆ ಪ್ರಯಾಣ ಬೆಳಿಸಿದರು. ಇದರಿಂದ ತಪ್ತಹೃದಯಗಳಿಗೆಲ್ಲ ಒಂದು ತೆರನಾದ ಶಾಂತಿ ದೊರೆತಂತಾಯಿತು.

## ೧೫. ಬೋಸರ ಇತ್ತೀಚಿನ ವಿಚಾರಗಳು

### " ಭಾರತೀಯ ಸಂಗ್ರಾಮ "

ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ನಿಜವಾದ ಕಲ್ಪನೆಯನ್ನು ಜಗತ್ತಿಗೆ ತಂದುಕೊಟ್ಟು ಭಾರತೀಯರಿಗೆ ಭಾವೀಮಾರ್ಗದರ್ಶಿಯಾಗಲು ಪರದೇಶದಲ್ಲಿದ್ದಾಗಲೇ ಬೋಸರು " ಭಾರತೀಯ ಸಂಗ್ರಾಮ " ವೆಂಬ ೩೦೦ ಕ್ಕಿಂತ ಹೆಚ್ಚು ಪುಟಗಳುಳ್ಳ ಗ್ರಂಥವೊಂದನ್ನು ಬರೆದರು. ಅದನ್ನು ಇಂಗ್ಲಂಡದ ಮೆಸರ್ಸ ವಿಶಾರ್ಟರು ಪ್ರಸಿದ್ಧಿಸಿದ್ದಾರೆ. ತಾವು ರಾಜಕಾರಣ ದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದ ಅವಧಿಯ-ಅಂದರೆ ೧೯೨೦ ರಿಂದ ೧೯೩೪ರ ವರೆಗಿನ ಹೋರಾಟದ ವಿಷಯವೂ ಮತ್ತು ಭಾವೀಕಾರ್ಯಕ್ರಮದ ಕಲ್ಪನೆಗಳೂ ಇದರಲ್ಲಿ ಹೆಚ್ಚಾಗಿ ತುಂಬಿವೆ. ಈ ಪುಸ್ತಕಕ್ಕೆ ಇಟಲಿ ಜರ್ಮನಿಗಳ ಬೇಡಿಕೆ ಬಹಳವಾಗಿತ್ತು.

ಈ ಪುಸ್ತಕದಲ್ಲಿ "ಮಹಾತ್ಮಾ ಗಾಂಧಿಯವರ ಪಾತ್ರ, ಭವಿಷ್ಯ ಸೂಚಿ" ಗಳೆಂಬ ಎರಡು ಅಧ್ಯಾಯಗಳು ಹೆಚ್ಚು ಆಕರ್ಷಕವಾಗಿವೆ. ಅತ್ಯಂತ ಪವಿತ್ರವಾದ ಹೃದಯ ಮತ್ತು ಆಚರಣೆಗಳಿದ್ದು ಕಲ್ಪನಾತೀತವಾದ ಬೆಂಬಲವಿದ್ದರೂ ತಾವು ಹೇಳಿದಂತೆ ಒಂದೇ ವರ್ಷದಲ್ಲಿ ಸ್ವರಾಜ್ಯವನ್ನು ತರುವದು ಮಹಾತ್ಮರಿಗೆ ಯಾಕೆ ಶಕ್ಯವಾಗಲಿಲ್ಲವೆಂಬುದರ ಕಾರಣಗಳನ್ನು ಇದರಲ್ಲಿ ಕಂಡುಹಿಡಯಲೆತ್ನಿಸಿದ್ದಾರೆ. ವಿಜಯವು ಬೆಂಬಲಿಗರ ದೊಡ್ಡ ಸಂಖ್ಯೆಗಿಂತಲೂ ಅವರ ಸ್ವಭಾವದ ಮೇಲೆ ಹೆಚ್ಚಾಗಿ ಅವಲಂಬಿಸಿದೆ. ಅಲ್ಪ ಸಂಖ್ಯಾ ಬೆಂಬಲವುಳ್ಳ ನಾಯಕರನೇಕರು ಜಗತ್ತಿನಲ್ಲಿ ತಮ್ಮ ನಾಡನ್ನು ಬಂಧಮುಕ್ತಮಾಡಿದ ಉದಾಹರಣೆಗಳುಂಟು. ಆದರೆ ಬಹುಜನ ಬೆಂಬಲವಿದ್ದರೂ ಮಹಾತ್ಮರಿಂದ ಈ ಕಾರ್ಯವು ಸಾಧ್ಯವಾಗದಿರುವುದಕ್ಕೆ ಕಾರಣಗಳುಂಟು. ಮಹಾತ್ಮರಿಗೆ ತಮ್ಮ ಜನರ ಸ್ವಭಾವವು ತಿಳಿದಂತೆ ವೈರಿಗಳ ಸ್ವಭಾವವು ತಿಳಿದಿಲ್ಲ. ಇವರ ತರ್ಕವು ಆಂಗ್ಲರ ಅಂತಃಕರಣಕ್ಕೆ ಮುಟ್ಟುವದಿಲ್ಲ. ಬಿಚ್ಚುಮನಸಿನ ಆಟವು ರಾಜಕಾರಣದಲ್ಲಿ ನಡೆಯದು. ಮುತ್ಸದ್ದಿತನವು ಬೇಕೇಬೇಕು. ಮುಯ್ಯಿಗೆ ಮುಯ್ಯಿ ಇಲ್ಲದೆ ಜಯವು ಸಿಗಲಾರದು. ಅಂತರರಾಷ್ಟ್ರೀಯ ಅಸ್ತ್ರವನ್ನು ಮಹಾತ್ಮರು ಪೂರಾ ಅಲಕ್ಷಿಸಿದ್ದಾರೆ. ಅಹಿಂಸಾಮಾರ್ಗದಿಂದಲೇ ನಮಗೆ ಸ್ವರಾಜ್ಯ ದೊರೆಯಬೇಕಾದರೆ ಚಾಣಕ್ಯತನ, ಮುತ್ಸದ್ದಿತನ ಮತ್ತು ಅಂತರರಾಷ್ಟ್ರೀಯ ಪ್ರಚಾರಗಳು ಹೆಚ್ಚಾಗಿ ಬೆಳೆಯಬೇಕು. ಇವೇ ಮೊದಲಾದ ಅನೇಕ ಕಾರಣಗಳನ್ನು ಹೇಳುತ್ತ, ಕೊನೆಯಲ್ಲಿ ಮಹಾತ್ಮರ ಒಂದೇ ವ್ಯಕ್ತಿಯು ಎರಡು ಪಾತ್ರಗಳನ್ನು ವಹಿಸಿರುವದು ಅಪಜಯದ ದೊಡ್ಡ ಕಾರಣವೆಂದು ಸಾರಿದ್ದಾರೆ. (೧) **ದೀನಜನಾಂಗದ ದಾಸ್ಯವಿಮೋಚಕ ಸೂತ್ರಧಾರನ ಪಾತ್ರ.** (೨) **ವಿಶ್ವಕ್ಕೆ ಹೊಸದೊಂದು ತತ್ವವನ್ನು ಬೋಧಿಸುವ ಜಗತ್ ಶಿಕ್ಷಕನ ಪಾತ್ರ.** ಈ ದ್ವಿದಳ ಪಾತ್ರದಿಂದ ಮಹಾತ್ಮರು ಏಕಕಾಲಕ್ಕೆ ವಿಂಟ್ಸನ್ ಚರ್ಚಿಲ್‌ರ ಅಭಿಪ್ರಾಯದಂತೆ "Irreconcilable Foe of the Englishman" ಮಣಿಸಲಸದಳವಾದ ಆಂಗ್ಲರ ವೈರಿಯೂ ಮತ್ತು ಮಿಸ್ ಎಲಿನ್ ವಿಲ್ಕಿನ್‌ಸನ್‌ಳ ಅಭಿಪ್ರಾಯದಂತೆ "Best Policeman of the Englishman" ಆಂಗ್ಲರ ಅತ್ಯುತ್ತಮ ಸಂರಕ್ಷಕ ಪೋಲೀಸರೂ ಆಗಿದ್ದಾರೆಂದು ಬೋಸರ ಮತ. ಮಹಾತ್ಮರ ಸೇವೆಯು

ನಮಗೆ ನಿಸರ್ಗದೇವಿಯ ಮಹೋಪಕಾರವಾಗಿ ಪರಿಣಮಿಸಿದೆಯಾದರೂ ಅವರ ನಾಯಕತ್ವದಲ್ಲಿ ನಮಗೆ ಸ್ವರಾಜ್ಯ ದೊರೆಯಲಾರದು ಎಂದಿದ್ದಾರೆ.

ಮಹಾತ್ಮರ ಅನೇಕ ವಿಚಾರಗಳು ಬೋಸರಿಗೆ ಸರಿಬೀಳುವದಿಲ್ಲ. ಅವರು ಅಸಂತುಷ್ಟರಾಗಿ ಹೊಸ ಮಾರ್ಗಗಳಿಗಾಗಿ ಹೊರಗೆ ನೋಡುತ್ತಿರುವ ಕಾಲಕ್ಕೆ ಜರ್ಮನಿ, ಇಟಾಲಿಗಳಲ್ಲಿ ವಾಸಿಸುವ ಪ್ರಸಂಗವು ಅವರಿಗೆ ಒದಗಿತು. ಸ್ವಾಭಾವಿಕವಾಗಿ ಈ ಎರಡು ದೇಶಗಳ ಮತ್ತು ಮಧ್ಯ ಯುರೋಪದ ವಾತಾವರಣದ ಛಾಯೆಯು ಬೋಸರ ಇತ್ತೀಚಿನ ವಿಚಾರಗಳ ಮಾರ್ಪಾಡಿನಲ್ಲಿ ಬಿದ್ದಿತೆನ್ನಬಹುದು. ಭಾರತದಲ್ಲಿ ಹೊಸದಾಗಿ ತಲೆ ಎತ್ತಿದ ಸೋಶಿಯಾಲಿಸ್ಟ ಪಕ್ಷದಿಂದಲೂ ಅವರಿಗೆ ಸಮಾಧಾನವಾಗಿರಲಿಲ್ಲ. ಹೊಸದೊಂದು ಪಕ್ಷದ ಸ್ಥಾಪನೆಯ ಕಲ್ಪನೆಯು ಅವರ ತಲೆಯಲ್ಲಿ ತುಂಬಿಕೊಂಡಿತ್ತು. ಈ ಪಕ್ಷವು ಜಮೀನದಾರರು, ಹಣವಂತರು, ಬಂಡವಾಲಗಾರರೇ ಮೊದಲಾದ ಸ್ವಾರ್ಥಿಗಳ ಹಿತಕ್ಕಾಗಿರದೆ ಕೇವಲ ಬಡರೈತ ಮತ್ತು ಕೂಲಿಕಾರರಾದ ಜನಸಾಮಾನ್ಯರ ಹಿತಕ್ಕಾಗಿರುವದು; ಅದು ಭಾರತೀಯರ ಆರ್ಥಿಕ ಮತ್ತು ರಾಜಕೀಯ ಸಂಪೂರ್ಣ ಸ್ವಾತಂತ್ರ್ಯದ ಧ್ಯೇಯಕ್ಕಾಗಿ ಹೆಣಗುವದು; ಫೆಡರಲ್ ಸರಕಾರವೇ ಅದರ ಅಂತಿಮಗುರಿ; ಆದರೆ ನವಭಾರತವನ್ನು ಸ್ಥಿರವಾದ ತಳಹದಿಯಮೇಲೆ ಸ್ಥಾಪಿಸಲು ಮುಂಬರುವ ಕೆಲವರ್ಷಗಳ ವರೆಗೆ ಸರ್ವಾಧಿಕಾರವುಳ್ಳ ಬಲವಾದ ಕೇಂದ್ರಸರಕಾರವು ಬೇಕು. ನವನಾಗರಿಕತೆಯ ಈಗಿನ ಜಗತ್ತಿನಲ್ಲಿ ಪ್ರಯೋಗವಲ್ಲಿರುವ ಮತ್ತು ಪ್ರಚಲಿತವಿರುವ ಹೊಸ ಪದ್ಧತಿಯ ಆರ್ಥಿಕ ವ್ಯವಸ್ಥೆಯನ್ನು ಅದು ಅನುಸರಿಸುವದು. ಮಧ್ಯ ವಿಕ್ಟೋರಿಯಾಯುಗದ ಪ್ರಜಾಪ್ರಭುತ್ವವು ಈ ಪಕ್ಷಕ್ಕೆ ಬೇಕಾಗಿಲ್ಲ. ಅರಾಜಕತ್ವವನ್ನು ತಲೆ ಎತ್ತದಂತೆ ಬಗ್ಗುಬಡಿದು ಅಖಿಲ ಭಾರತವನ್ನು ಒಂದೇ ಸೂತ್ರದಲ್ಲಿ ತರುವಂಥ ಸೈನ್ಯದ ದರ್ಪದಿಂದ ಕೂಡಿದ ಬಲವಾದ ಪಕ್ಷದ ಸರಕಾರವು ನಮಗೆ ಮೊದಲು ಬೇಕು. ಭಾರತವು ಸಂಪೂರ್ಣ ಸ್ವಾತಂತ್ರ್ಯಹೊಂದಿ, ಸ್ವಾವಲಂಬಿಯಾದ ಮೇಲೆ ಕೊನೆಯಲ್ಲಿ ಆ ಪಕ್ಷವು ಉಳಿದ ಎಲ್ಲ ಪಕ್ಷಗಳನ್ನು ಕೂಡಿಕೊಂಡು ಒಂದೇ ಒಂದಾದ ರಾಷ್ಟ್ರೀಯ ಸರಕಾರವನ್ನು ಸ್ಥಾಪಿಸಬೇಕು, ಎಂಬುದೇ ಬೋಸರ ಮತವಾಗಿದೆ.

ಕಮ್ಯುನಿಜಮ್ ತತ್ವವು ಭಾರತದಲ್ಲಿ ಹರಡುವದು ಅನಾವಶ್ಯಕವೂ ಮತ್ತು ಅಶಕ್ಯವೂ ಆಗಿದೆ ಎಂಬುದನ್ನು ಬೋಸರು ವಿವರವಾಗಿ ತಮ್ಮ

ಪುಸ್ತಕದಲ್ಲಿ ಬಣ್ಣಿಸಿದ್ದಾರೆ. ಪಂಡಿತ ಜವಾಹರಲಾಲರಂತೆ ಇವರು ಫ್ಯಾಸಿಜಮ್ ತತ್ವ ದ್ವೇಷಿಗಳೂ ಅಲ್ಲ. ಕಮ್ಯೂನಿಜಮ್ ಮತ್ತು ಫ್ಯಾಸಿಜಮ್‌ಗಳೆರಡರಲ್ಲೂ ಸಾಮಾನ್ಯವಾಗಿ ಕಂಡುಬರುವ ತತ್ವಗಳನ್ನು ಅನುಸರಿಸಬೇಕೆಂಬ ವಿಚಾರವನ್ನು ಇವರು ಎತ್ತಿಹಿಡಿಯುತ್ತಾರೆ.

(೧) ವ್ಯಕ್ತಿಗಳಿಗಿಂತ ಸಂಸ್ಥೆ (ಸರಕಾರ) ಹೆಚ್ಚಿನದು.
(Supremacy of the State over the Individual)

(೨) ಪಾರ್ಲಿಮೆಂಟರಿ ಪ್ರಜಾಪ್ರಭುತ್ವದ ನಿಷೇಧ.
( Denouncing of Parliamentarian Democracy )

(೩) ಪಕ್ಷಗಳ ಆಡಳಿತದಲ್ಲಿ ( Party Rule ) ನಂಬುಗೆ.

(೪) ಪಕ್ಷದ ಸರ್ವಾಧಿಕಾರತ್ವ ( Dictatorship of the Party)ಮತ್ತು ವಿರೋಧವಿದ್ದ ಅಲ್ಪಸಂಖ್ಯಾಕ ಪಕ್ಷಗಳ ಮೇಲಿನ ನಿಷ್ಕರುಣವಾದ ದಬ್ಬಾಳಿಕೆಯಲ್ಲಿ ನಂಬುಗೆ. ( Ruthless Suppression of all Dissenting Minorities )

(೫) ನಾಡಿನ ಔದ್ಯೋಗಿಕ ಪುನರ್ಘಟನೆಯ ಒಂದು ಯೋಜನೆ (Industrial Reorganisation )

ಇವೇ ಮೊದಲಾದವುಗಳು ಕಮ್ಯೂನಿಜಮ್ ಮತ್ತು ಫ್ಯಾಸಿಜಮ್ ತತ್ವಗಳಿಗೆ ಸಾಮಾನ್ಯವಾಗಿವೆ. ಈ ಸಾಮಾನ್ಯ ತತ್ವಗಳು ತಾವು ಸ್ಥಾಪಿಸಬೇಕೆನ್ನುವ “ ಸಾಮ್ಯವಾದಿ ” ಸಂಘದ ತಳಹದಿಯ ತತ್ವಗಳಾಗಬೇಕೆಂದು ಬೋಸರು ಬಗೆದಿದ್ದಾರೆ. ಬೋಸರು ಅದನ್ನು “ ಸಮೀಕರಣ ” ಅಥವಾ ಸಮಾನತೆ ಎಂದು ಕರೆಯುತ್ತಾರೆ. ಇದನ್ನು ಸಾಧಿಸುವದು ಭಾರತದ ಕರ್ತವ್ಯವೆಂದು ಇವರು ತಿಳಿಯುತ್ತಾರೆ.

ಈ ಸಂಯುಕ್ತ ತತ್ವಗಳ ಸಮ್ಮೇಲನದಿಂದ ಸ್ಟ್ಯಾಲಿನ್, ಹಿಟ್ಲರ ಮತ್ತು ಮುಸೊಲಿನಿ, ಈ ತ್ರಿಮೂರ್ತಿಗಳ ಗುಣಗಳಿಂದೊಡಗೂಡಿದ ಸಂಯುಕ್ತ ವ್ಯಕ್ತಿಯೊಂದು ಭಾರತದಲ್ಲಿ ಸಿದ್ಧವಾಗಲಿಕ್ಕಿಲ್ಲವೆಂದು ಬೋಸರ ಹೊರತು ಯಾರು ತಾನೆ ಬಲ್ಲರು? ಬೋಸರ ಈ ಪುಸ್ತಕವು ಭಾರತಕ್ಕೆ ಬರಲು ಸರಕಾರದ ನಿರ್ಬಂಧವಿದೆ. ಅದರ ಪ್ರತಿಗಳನ್ನು ಪಡೆಯುವದು ಸರಕಾರದವರ ಕಣ್ಣಲ್ಲಿ ಅಪರಾಧವಾಗಿರುವದರಿಂದ ಹೆಚ್ಚಿನ ವಿವರಗಳನ್ನು ಇಲ್ಲಿ ಹೇಳಲು ಸಾಧ್ಯವಿಲ್ಲ.

## ಅನ್ಯದೇಶಗಳ ವಿಷಯಕ್ಕೆ ಭಾರತದ ನೀತಿ

ಯುರೋಪಿನಲ್ಲಿದ್ದಾಗ ಸುಭಾಸಚಂದ್ರರು ಪರದೇಶ ರಾಜಕಾರಣದ ಮಧ್ಯವಲ್ಲಿದ್ದುಕೊಂಡು ಅಲ್ಲಿಯ ಜೀವನದಲ್ಲಿ ಒಳಹೊಕ್ಕು ನೋಡಲು ಆಸ್ಪದವು ದೊರೆಯಿತು. **ನಗರಸಭೆ** ಮತ್ತು ಅಲ್ಲಿಯ ಅನೇಕ ರಾಜಕೀಯ ಪಕ್ಷ ಸಂಗಡಗಳೊಡನೆ ಸಂಬಂಧ ಬೆಳೆಸಿದರು. ತಾವು ಕಂಡುಕೊಂಡ ಅನೇಕ ಮಹತ್ವದ ವಿಷಯಗಳನ್ನು ಭಾರತೀಯರ ಅವಗಾಹನೆಗಾಗಿ ಭಾರತದ ವೃತ್ತಪತ್ರಿಕೆಗಳಲ್ಲಿ ತಮ್ಮ ದೇಹಾಲಸ್ಯಕ್ಕೆ ಲಕ್ಷಗೊಡದೆ ಪ್ರಕಟಿಸುವ ಶ್ರಮ ವಹಿಸಿದರು. ಅವರು " ರಾಷ್ಟ್ರೀಯ ಭಾರತದ ಪರದೇಶ ನೀತಿ " ಎಂಬ ತಲೆ ಬರಹದಲ್ಲಿ ಅತ್ಯಂತ ಮಹತ್ವದ ಲೇಖನ ಮಾಲೆಯನ್ನು ಪ್ರಾರಂಭಿಸಿ ಅದರ ಮೂಲಕ ಅನೇಕ ತತ್ವಗಳನ್ನು ವಿವರಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ ಪ್ರತಿಯೊಂದು ರಾಷ್ಟ್ರವು ವಿಶೇಷವಾಗಿ ಭಾರತವು ಅನ್ಯದೇಶಗಳ ವಿಷಯದಲ್ಲಿ ಅನುಸರಿಸಬೇಕಾದ ಕೆಲವು ತತ್ವಗಳನ್ನು ಈ ರೀತಿ ಹೇಳಿದ್ದಾರೆ.

(೧) ಸ್ವಹಿತ ಮತ್ತು ಸ್ವಸಂರಕ್ಷಣೆ. (೨) ಸಾಮಾನ್ಯ ವೈರಿಯ ಎದುರು ಒಕ್ಕಟ್ಟಿನಿಂದ ಕಾದುವದು. (೩) ಬಲವಾದ ನೆರೆಯವರೊಡನೆ ಸಖ್ಯ ಬೆಳಿಸುವದು. (೪) ವೈರಿಗೆ ಹಿತಕರವಾದುದು ನಮಗೆ ಅಹಿತಕಾರಕವು. ವೈರಿಗೆ ಅಹಿತಕಾರಕವಾದುದು ನಮಗೆ ಹಿತಕರವು. (೫) ವೈರಿಗಳನ್ನು ವಿಭಾಗಿಸುವದು. (೬) ಸಾಮ್ರಾಜ್ಯವಾದಿಗಳು ತಮ್ಮ ತಮ್ಮೊಳಗೆ ಬಡಿದಾಡಲು ಆಸ್ಪದಕೊಡುವದು. (೭) ಅಂತರರಾಷ್ಟ್ರೀಯ ಸಂಘದಲ್ಲಿ ವಿಶ್ವಾಸವನ್ನಿಡದಿರುವದು.

ಈ ತತ್ವಗಳನ್ನು ಸತತವಾಗಿ ಮನಸಿನಲ್ಲಿರಿಸಿಕೊಂಡರೆ ಅಂತರರಾಷ್ಟ್ರೀಯ ಪ್ರಸಂಗಗಳಲ್ಲಿ ನಾವು ತಾಳಬೇಕಾದ ಧೋರಣ ಮತ್ತು ನಡಾವಳಿಗಳ ಬಗ್ಗೆ ನಿಶ್ಚಿತ ಮಾರ್ಗವನ್ನನುಸರಿಸಲು ಹೇಗೆ ಸಹಾಯವಾಗುವದೆಂದು ಅವರು ವಿವರಿಸಿದ್ದಾರೆ.

## ೧೬. ಬೋಸರ ಮೇಲೆ ಆರೋಪ- ಕೈಸೆರೆ

### ೧೯೩೬

ಸುಭಾಸಚಂದ್ರರ ಆರೋಗ್ಯವಲ್ಲಿ ಕೆಲಮಟ್ಟಿಗೆ ಗುಣಹೊಂದಲಾಗಿ ಅವರು ಭಾರತಕ್ಕೆ ತಿರುಗಿ ಬರಬೇಕೆಂದು ತವಕಿಸಹತ್ತಿದರು. ಆದರೆ ಅವರು ಹಿಂದುಸ್ತಾನಕ್ಕೆ ಬಂದ ಕೂಡಲೆ ಬಂಧನದಲ್ಲಿರಬೇಕಾಗುವದೆಂದು ಹಿಂದುಸ್ತಾನ ಸರಕಾರದವರು ಅವರಿಗೆ ತಿಳಿಸಿದರು. ಈ ಬಗ್ಗೆ ಲಂಡನ್ನಿನ ಕಾಮನ್ಸ ಸಭೆಯಲ್ಲ ಈ ಚಿತ್ರಹಿಂಸೆಗೆ ಕೊನೆ ಎಲ್ಲಿ? ಎಂಬ ಬಗ್ಗೆ ಪ್ರಶ್ನೋತ್ತರಗಳಾದವು. ದಿಲ್ಲಿಯ ಕೇಂದ್ರ ಶಾಸನ ಸಭೆಯಲ್ಲಿ ದೀರ್ಘವಾದ ಚರ್ಚೆಯಾಗಿ ಸರಕಾರದ ನೀತಿಯ ಖಂಡನೆಯಾಯಿತು. ಮಾತೃಭೂಮಿಯಲ್ಲಿರಬೇಕಾದರೆ ಸೆರೆಯಾಳಾಗಿರಬೇಕು; ಪರದೇಶಿಯಾಗಿ ತಾಯ್ನಾಡಿನ ಹೊರಗಿರಬೇಕಾದರೆ ಕೆಲ ದೇಶಗಳಲ್ಲಿ ಮಾತ್ರ ಸ್ವತಂತ್ರವಾಗಿರಬಹುದು. ಹೀಗೆ ಬೋಸರೆದುರಿಗೆ ಈ ಎರಡೇ ಮಾರ್ಗಗಳುಳಿದವು.

## ಬೋಸರ ಮೇಲಿನ ಆರೋಪಗಳು

ಬೋಸರು ಕ್ರಾಂತಿಕಾರಕ ಚಳವಳಿಯ ಪ್ರೋತ್ಸಾಹಕರೆಂಬುದೇ ಸರಕಾರದವರು ಅವರನ್ನು ಈ ರೀತಿಯ ಚಿತ್ರಹಿಂಸೆಗೆ ಗುರಿಮಾಡಿದ್ದರ ಕಾರಣವೆಂದು ಶಾಸನ ಸಭೆಯಲ್ಲಿ ಹೇಳಲಾಯಿತು. "ಸುಭಾಸರನ್ನು ಹಿಂದುಸ್ತಾನಕ್ಕೆ ಹಿಂದಿರುಗಗೊಡುವದು ಬಂಗಾಲಕ್ಕೆ ಮಾತ್ರವಲ್ಲದೆ ಸಮಗ್ರ ಹಿಂದುಸ್ತಾನಕ್ಕೆ ಅಪಾಯಕರವಾಗಿದೆ. ಅವರು ಸಿವ್ಹಿಲ್ ಸರ್ವಿಸಿಗೆ ರಾಜಿನಾಮೆ ಕೊಟ್ಟು ರಾಜಕೀಯ ರಂಗಕ್ಕಿಳಿದರು. ಕಾಂಗ್ರೆಸಿನ ನ್ಯಾಯಸಮ್ಮತವಾದ ಕಾರ್ಯಕ್ರಮವನ್ನು ಕ್ರಾಂತಿಕಾರವಾಗಿ ಮಾಡಿದ ಅಸಹಕಾರದಲ್ಲಿ ಅವರಿಗೆ ಹೆಚ್ಚು ಪ್ರೇಮ. ಚೌರಿಚೌರಾದ ಪ್ರಸಂಗದನಂತರ ಅಸಹಕಾರವು ನಿಲ್ಲಿಸಲ್ಪಟ್ಟದ್ದರಿಂದ ಬಹಳ ಅಸಮಾಧಾನ ಹೊಂದಿದರು. ಕ್ರಾಂತಿಕಾರ ಚಳವಳಿಯು ಮೊದಲಿಗಿಂತ ಹೆಚ್ಚು ತೀವ್ರತರವಾದುದು ಆಗಲೆ. ೧೯೨೧ ರಲ್ಲಿ ಕೈದಾದಾಗ ಅವರನ್ನು ಇಬ್ಬರು ಯೋಗ್ಯ ನ್ಯಾಯಾಧೀಶರು ಪರ್ಯಾಲೋಚಿಸಿ ಇವರು ಕ್ರಾಂತಿಕಾರ ಚಳವಳಿಯ ಮುಂದಾಳುಗಳಾದ್ದರಿಂದ ಇವರ ಕಾರ್ಯಕುಶಲತೆ ಮತ್ತು ಪ್ರತಿಭೆಗಳಿಂದ ಆ ಚಳವಳಿಯು ಹಿಂದುಸ್ತಾನದ ತುಂಬ ಹರಡುವದೆಂದು ಭಾವಿಸಲ್ಪಟ್ಟಿತು. ೧೯೨೩ ರಲ್ಲಿ 'ಆತ್ಮಶಕ್ತಿ' ಎಂಬ ಬಂಗಾಲದ ಕ್ರಾಂತಿಕಾರಕ ವಾರ್ತಾಪತ್ರಿಕೆಯಲ್ಲಿ ಸುಭಾಸರು ಲೇಖವೊಂದನ್ನು ಬರೆದು ಯುವಕರೆಲ್ಲ ದೇಶಹಿತಕ್ಕಾಗಿ ಪ್ರಾಣಗಳನ್ನರ್ಪಿಸಲು ಕೋರಿದ್ದರು. ಬಹಿರಂಗವಾಗಿ ನಡೆಸುತ್ತಿದ್ದ ಚಟುವಟಿಕೆಗಳಲ್ಲದೆ ಕ್ರಾಂತಿಕಾರ ಪಂಗಡದ ರಹಸ್ಯಗಳೂ ಮಂತ್ರಾಲೋಚನೆಗಳೂ ಸುಭಾಸರಿಗೆ ತಿಳಿದಿದ್ದವು. ಸರಕಾರೀ ಅಧಿಕಾರಿಗಳನ್ನು ಕೊಲೆಮಾಡಿದ ಹಲವು ಪಿತೂರಿ ಕಾರ್ಯಕ್ರಮಗಳು ಅವರಿಗೆ ಮೊದಲೇ ಗೊತ್ತಿದ್ದವು. ರಂಗೂನಿನಿಂದ ಆರೋಗ್ಯದ ನೆವದಿಂದ ಬಿಡುಗಡೆಯಾಗಿ ಬಂದ ಮೇಲೆ ಅವರು ಕೂಲಿಕಾರರನ್ನೂ ವಿದ್ಯಾರ್ಥಿಗಳನ್ನೂ ಉದ್ರೇಕಿಸತೊಡಗಿದರು. ಬಂಗಾಲ ವಿದ್ಯಾರ್ಥಿಗಳಿಗೆ ೧೯೨೮ರಲ್ಲಿ ಇವರು ಅಪಾಯಕಾರಕ ಕಮ್ಯೂನಿಜಮ್‌ನ್ನು ಬೋಧಿಸಿದರು. ಜಮಷೇದಪುರ ಮತ್ತು ಮುಂಬೈ ಕೂಲಿಕಾರರ ಮುಷ್ಕರಗಳಲ್ಲಿ ಇವರ ಭಾಗವಿತ್ತು. ಮಿತವಾದಿ ಕಾಂಗ್ರೆಸಿನವರ ಕಾರ್ಯಕ್ರಮಗಳನ್ನು ಇವರು ಖಂಡಿಸುತ್ತಿದ್ದರಲ್ಲದೆ ೧೯೨೯ ರಲ್ಲಿ ತಮ್ಮದೊಂದು ಪ್ರತಿಸರಕಾರದ ಸ್ಥಾಪನೆಯಾಗಬೇಕೆಂದು ಕಾಂಗ್ರೆಸ ಮಹಾಸಭೆಯಲ್ಲಿ ಸಾರಿದರು. ಮತ್ತು ಅದಕ್ಕಾಗಿ ತಾವು ಜನರನ್ನು

ಸಿದ್ಧ ಮಾಡುವೆನೆಂದು ಭರವಸೆ ಇತ್ತರು. ಇವೆಲ್ಲ ಕ್ರಾಂತಿಗಳಲ್ಲದೆ ಮತ್ತೇನು ? ಕ್ರಾಂತಿಕಾರಕ ಪತ್ರಿಕೆಗಳು ಹಂಚಲ್ಪಟ್ಟ ಸಭೆಯೊಂದರಲ್ಲಿ ರಾಜದ್ರೋಹದ ಭಾಷಣ ಮಾಡಿದ್ದರಿಂದ ಬೋಸರಿಗೆ ೧೯೩೨ರಲ್ಲಿ ಶಿಕ್ಷೆ ವಿಧಿಸಲ್ಪಟ್ಟಿತು.

ಕೃಷ್ಣಕಾಂತದಾಸರು ಬರೆದ ಒಂದು ಪತ್ರದಲ್ಲಿ ಉಲ್ಲೇಖಿಸಿದ ಅ ಮತ್ತು ಬ ಇವರಲ್ಲಿ ಅ ಎಂಬುವವರೇ ಸುಭಾಸಚಂದ್ರರಾಗಿದ್ದಾರೆ. ಆ ಕಾಗದದಿಂದ ಸುಭಾಸಚಂದ್ರರು ಯುಗಾಂತರವೆಂಬ ಕ್ರಾಂತಿಕಾರ ಪಕ್ಷಕ್ಕೆ ಸೇರಿದವರೆಂದೂ ಚಿತಗಾಂಗ ಮತ್ತು ಪಹರತಲಿ ಗಲಭೆಗೆ ಈ ಪಂಗಡವೇ ಕಾರಣವೆಂದೂ ತಿಳಿಯಬಂದಿದೆ. ಸುಭಾಸರೇ ಈ ಸಂಸ್ಥೆಯ ಮುಖಂಡರು. ಸತತವಾಗಿ ೧॥ ವರ್ಷ ನಡೆದ ಕ್ರಾಂತಿಕಾರರ ಮೊಕದ್ದಮೆಯೊಂದರಲ್ಲಿ ಆ ಸಂಸ್ಥೆಯು ಅಖಿಲ ಹಿಂದುಸ್ತಾನ ಮತ್ತು ಬರ್ಮಾದಲ್ಲಿಯೂ ಸಾರ್ವತ್ರಿಕವಾಗಿ ವ್ಯಾಪಿಸಿದೆ ಎಂಬುದು ವ್ಯಕ್ತವಾಯಿತು. ಕೊಲೆಯ ಮೂಲಕ ಸರಕಾರದವರೊಡನೆ ಹೋರಾಡುವದೇ ಈ ಸಂಸ್ಥೆಯ ಉದ್ದೇಶವಾಗಿದೆ. ಅಲ್ಲದೆ ಬೋಸರು ಕ್ರಾಂತಿಯಲ್ಲಿ ವಿಶ್ವಾಸವನ್ನಿಟ್ಟಿದ್ದಾರೆಂಬುವದಕ್ಕೆ ಅವರು ಯುರೋಪಿನಲ್ಲಿದ್ದಾಗ ಬರೆದ ಸ್ವಾತಂತ್ರ್ಯದ ಹೋರಾಟವೆಂಬ ಪುಸ್ತಕವೇ ಸಾಕ್ಷಿ. ಮಹಾತ್ಮರ ಅಹಿಂಸಾತತ್ವವೇ ಅಪಜಯದ ಕಾರಣವೆಂದು ಅದರಲ್ಲಿ ಹೇಳಲಾಗಿದೆ. ಅಲ್ಲದೆ ೧೯೩೨ರಲ್ಲಿ ಸಾಮ್ಯವಾದಿ ಸಂಘವೆಂಬ ಕ್ರಾಂತಿಕಾರ ಸಮಿತಿಯೊಂದರ ಪ್ರೋತ್ಸಾಹಕರಿದ್ದು ಆ ಸಂಸ್ಥೆಗೆ ಬೋಸರು ಬರೆದ ಕೆಲವು ಪತ್ರಗಳು ಸಿಕ್ಕಿವೆ. ಸೈನ್ಯ ಮತ್ತು ಪೋಲೀಸಖಾತೆಗಳನ್ನು ನಿಶ್ಚೇತನಗೊಳಿಸುವ ಹಲವು ಉಪಾಯಗಳು ಆ ಪತ್ರದಲ್ಲಿ ಸೂಚಿಸಲ್ಪಟ್ಟಿವೆ. ಮುಂದೆ ಆ ಸಾಮ್ಯವಾದೀಸಂಘವೇ "ಸೋಶಿಯಾಲಿಸ್ಟ ರಿಪಬ್ಲಿಕನ್ ಆರ್ಮಿ" ಎಂದು ಹೆಸರು ಬದಲಾಯಿಸಿಕೊಂಡಿತು. ಸೈನ್ಯ ಮತ್ತು ಪೋಲೀಸ ಖಾತೆಗಳನ್ನು ವಶಮಾಡಿಕೊಳ್ಳಬೇಕು. ಸರಕಾರದ ಬೊಕ್ಕಸಕ್ಕೆ ಹಣವು ಕೂಡದಂತೆ ವ್ಯವಸ್ಥೆ ಮಾಡಬೇಕು ಎಂದು ಅವರು ವ್ಹಿಯೆನ್ನಾದಿಂದ ಬರೆದ ಒಂದು ಪತ್ರವು ಸಿಕ್ಕಿದೆ. ಇದು ಕ್ರಾಂತಿಯಲ್ಲವೆ? ಬೋಸರಂಥ ಸಾಮರ್ಥ್ಯಶಾಲಿಗಳೂ ಚತುರರೂ ಪ್ರತಿಭಾವಂತರೂ ಆದವರಿಗೆ ಈ ಅಭಿಪ್ರಾಯಗಳನ್ನು ಕಾರ್ಯರೂಪದಲ್ಲಿ ತರಲು ಅವಕಾಶಕೊಡುವದಕ್ಕಿಂತ ಹೆಚ್ಚಿನ ಹುಚ್ಚುತನವನ್ನು ಯಾವ ಸರಕಾರವೂ ಮಾಡಲಾರದು." ಇವೇ ಮೊದಲಾದ ಆರೋಪಗಳನ್ನು ಸರಕಾರವು ಬೈಲಿಗಿಟ್ಟಾಗ ಅಖಿಲ ಚಂದ್ರ

ದತ್ತ, ಭುಲಾಭಾಯಿ ದೇಸಾಯಿಯರೇ ಮೊದಲಾದವರು ಉಗ್ರವಾದ ಭಾಷಣಗಳನ್ನು ಮಾಡಿ ಸರಕಾರದ ಆರೋಪಗಳನ್ನೆಲ್ಲ ಖಂಡಿಸಿದರು. ಸರಕಾರದ ನಿಷೇಧದ ಗೊತ್ತುವಳಿಯನ್ನು ಪಾಸುಮಾಡಿದರು. ಸರಿಯಾದ ಸಾಕ್ಷಿ, ಪುರಾವೆಗಳಿಲ್ಲದಿದ್ದರೆ ಅವುಗಳನ್ನು ಕಲ್ಪಿಸಿ ಶಿಕ್ಷೆಗೆ ಗುರಿಮಾಡಬಲ್ಲ ಸರಕಾರವು ಬೋಸರ ವಿಷಯಕ್ಕೆ ಇಷ್ಟೊಂದು ಅಪರಾಧಗಳಿದ್ದರೂ ನ್ಯಾಯಮಂದಿರಕ್ಕೆ ಅವರನ್ನು ಎಳೆಯದೆ, ವಿಚಾರಣೆ ನಡೆಯಿಸದೆ, ಹಾಗೆಯೇ ಬಂಧನದಲ್ಲಿರಿಸುವದೂ ಅಥವಾ ದೇಶದಿಂದ ಹೊರಗೆ ಇಡುವದೂ ಇವುಗಳನ್ನು ನೋಡಿದರೆ ಸರಕಾರಕ್ಕೆ ಸರಿಯಾದ ಆಧಾರಗಳಿಲ್ಲವೆಂಬುದು ತಾನೇ ಸಿದ್ಧವಾಗುತ್ತದೆ. ಬೋಸರೂ ಅವರ ಮಿತ್ರರೂ ಅನೇಕ ಸಲ ಅವರನ್ನು ನ್ಯಾಯಮಂದಿರಕ್ಕೆಳೆಯಲು ಸರಕಾರದವರನ್ನು ಆಹ್ವಾನಿಸಿದ್ದರೂ ಸರಕಾರವು ಮೌನವಾಗಿರುವ ಕಾರಣವೇನು? ಬೋಸರ ಕಾಗದಗಳನ್ನೆಲ್ಲ ಗುಪ್ತವಾಗಿ ಒಡೆದು ನೋಡಲು ಮತ್ತು ಕಳವು ಮಾಡಲು ಹಿಂಜರಿಯದ ಸರಕಾರವು ನ್ಯಾಯಮಂದಿರಕ್ಕೆ ಬಾರದಿದ್ದುದರ ಕಾರಣವೇನು? ಒಂದು ವೇಳೆ ಸರಕಾರದ ಈ ಎಲ್ಲ ಆರೋಪಗಳೂ ನಿಜವಾದರೆ ಬೋಸರು ರಾಷ್ಟ್ರವೀರರೆಂದಂತಾಗುವದಿಲ್ಲವೆ? ಸರಕಾರದ ಸಾಕ್ಷಿಗಳಾವೂ ಕೋರ್ಟಿನಲ್ಲಿ ಒಪ್ಪತಕ್ಕವುಗಳಾಗಿಲ್ಲ. ಮ. ಗಾಂಧಿಯವರ ಶಿಷ್ಯರೆಂದು ಹೇಳುವ ಕೃಷ್ಣಕಾಂತರ ಸಂದಿಗ್ಧ ಪತ್ರವು ಬೋಸರ ಮೇಲಿನ ಆರೋಪವನ್ನು ಸಿದ್ಧಮಾಡಲಾರದು.

## ಸ್ವದೇಶಾಗಮನ ಮತ್ತು ಬಂಧನ.

ಸುಭಾಸಚಂದ್ರ ಬೋಸರು ಸರಕಾರದ ಸಂತೋಷದಂತೆ ಹದ್ದುಪಾರು ಮಾಡಲ್ಪಟ್ಟು ಪರದೇಶಗಳಲ್ಲಿ ಕಾಲಹಾಕಬೇಕಾಗಿತ್ತು. ಮತ್ತು ಅವರ ದೇಹಾರೋಗ್ಯದ ದೃಷ್ಟಿಯಿಂದಲೂ ಇನ್ನೂ ಕೆಲವು ಕಾಲ ಪರದೇಶದಲ್ಲಿಯೇ ಇದ್ದು ಪೂರ್ಣಾರೋಗ್ಯವನ್ನು ಪಡೆಯಬೇಕಾಗಿತ್ತು. ಆದರೆ ಸರ್ವದಾ ಸರಕಾರದ ಸಂಶಯಕ್ಕೊಳಗಾಗಿ ಕಂಡವರ ನಾಡಿನಲ್ಲಿ ಬಾಳುವದು ಇವರಿಗೆ ಸರಿದೋರಲಿಲ್ಲ. ೧೯೩೬ನೆಯ ಮಾರ್ಚ ತಿಂಗಳ ಅಂತ್ಯದಲ್ಲಿ ಹಡಗು ಹತ್ತಿ ಭಾರತಕ್ಕೆ ಹೊರಟೇ ಹೊರಟರು. ಇದಕ್ಕೆ ಮುನ್ನವೇ ವ್ಹಿಯೆನ್ನಾದಲ್ಲಿರುವ ಬ್ರಿಟಿಶ್ ರಾಯಭಾರಿಗಳಿಂದ "ನೀವು ಭಾರತಕ್ಕೆ ಹೋದರೆ ನಿಮ್ಮ ಸ್ವಾತಂತ್ರ್ಯಕ್ಕೆ ಸಂಚಕಾರ ಬರುತ್ತದೆ" ಎಂಬ ಒಂದು ಎಚ್ಚರಿಕೆಯ ಪತ್ರ ಬೇರೆ ಬಂದಿತ್ತು. ಇಂಥ ಬೆದರಿಕೆಗೆ ಸುಭಾಸರು ಸೊಪ್ಪು ಹಾಕುವರೇ?

ಎಪ್ರಿಲ್ ೮ನೆಯದಿನ ಪ್ರಾತಃಕಾಲ ೯-೩೦ ಗಂಟೆಯ ಸಮಯಕ್ಕೆ "ಕಾಂಟೆವರ್ಡಿ"ಎಂಬ ಇಟಾಲಿಯನ್ ನೌಕೆಯಲ್ಲಿ ಸುಭಾಸಚಂದ್ರಬೋಸರು ಮುಂಬೈ ಬಂದರವನ್ನು ಮುಟ್ಟಿದರು. ಮುಂಬೈ ನಾಗರಿಕರೂ ನಾಯಕರೂ ಇನ್ನೂ ಅನೇಕರು ಬಂದರದೊಳಗೆ ಬೋಸರನ್ನು ಇದಿರ್ಗೊಳ್ಳಲು ಹೋಗಿ ಕಾದಿದ್ದರು. ನೌಕೆಯಲ್ಲಿ ನಿಂತುಕೊಂಡೇ ಬೋಸರು ನೆರೆದಿದ್ದ ಆಪ್ತಮಿತ್ರರನ್ನೆಲ್ಲ ಗುರ್ತಿಸುತ್ತ, "ಸ್ವಾತಂತ್ರ್ಯಕ್ಕಾಗಿ ಹೊಡೆದಾಡಿ" ಎನ್ನುವ ಸಿಂಹನಾದವನ್ನು ಮಾಡಿದರು. ಯಾರನ್ನೂ ನೌಕೆಯ ಹತ್ತರ ಹೋಗಲು ಬಿಡಲಿಲ್ಲ. ಮತ್ತು ನೌಕೆಯಿಂದಿಳಿದು ಬರಲು ಬೋಸರಿಗೂ ಅವಕಾಶಕೊಡಲಿಲ್ಲ. ೧೦-೩೦ಗಂಟೆ ಆಯಿತು. ಬೋಸರು ಕೆಳಗಿನಿಂದ ಅರ್ಪಿಸಿದ ಹಾರಗಳನ್ನು ಹಾಕಿಕೊಂಡು ನೌಕೆಯನ್ನಿಳಿಯತೊಡಗಿದರು ಅವರಿನ್ನೂ ದಡ ಮುಟ್ಟುತ್ತಿರುವಾಗಲೇ ಮುಂಬೈ ಪೋಲೀಸರು ಜಿಲ್ಹಾಧಿಕಾರಿಗಳ ಬಂಧನದ ಆಜ್ಞೆಯನ್ನು ತೋರಿಸಿ ಅಲ್ಲಿಂದಲೇ ಮತ್ತೊಂದು ಡೋಣಿಯಲ್ಲಿ ಅಲೆಕ್ಸಾಂಡ್ರ ಡಾಕಿಗೊಯ್ದು ಅನಂತರ ಆರ್ಥರ್ ರಸ್ತೆಯಲ್ಲಿರುವ ಜೈಲಿಗೆ ಅವರನ್ನು ಸಾಗಿಸಿದರು. ಈಗಲೂ ಬೋಸರನ್ನು ಕೈದುಮಾಡಿದುದು ೧೮೧೮ರ ಶಾಸನಬಾಣಗಳ ಪ್ರಕಾರ.

ಪ್ರಯಾಣದಲ್ಲೆಲ್ಲ ಆಳರಸರು ಇವರ ಮೇಲೆ ಸರ್ಪಕಾವಲಿದ್ದರು. ಬೋಸರು ಆ ಹಡಗಿನಲ್ಲಿ ಪ್ರಯಾಣಮಾಡುತ್ತಿರುವರೆಂಬುದು ಆ ಹಡಗಿನ ಪ್ರಯಾಣಿಕರಿಗೇ ಗೊತ್ತಿರಲಿಲ್ಲವಂತೆ. ಯಾತ್ರಿಕರ ಪಟ್ಟಿಯಲ್ಲಿ ಬೋಸರ ಹೆಸರನ್ನು ಸ್ಪಷ್ಟವಾಗಿ ಹಾಕಿರಲಿಲ್ಲವಂತೆ. ಹಡಗು ಇಜಿಪ್ತ ದೇಶವನ್ನು ಮುಟ್ಟುತ್ತಲೇ ಅಲ್ಲಿಯ ಜನರು ಬೋಸರನ್ನು ಕಾಣಲು ಬಂದು ರೇವಿನಲ್ಲಿ ನೆರೆದಿದ್ದರು. ಬೋಸರು ರೇವಿನಲ್ಲಿ ಕೆಳಗಿಳಿದು ಹೋಗಿ ಅವರನ್ನೆಲ್ಲ ಕಾಣಲಿದ್ದರು. ಅಷ್ಟರಲ್ಲಿ ಸಮುದ್ರಯಾನದ ಅಪ್ಪಣೆ ಚೀಟಿಯನ್ನು ಪೋಲೀಸರು ತೆಗೆದುಕೊಂಡು, ಹಡಗು ಹೊರಡುವವರೆಗೂ ಹಿಂದಕ್ಕೆ ಕೊಡಲೇ ಇಲ್ಲ.

ಇಷ್ಟೇಅಲ್ಲ ಆಂಗ್ಲ ಆಳರಸರು ಇದಕ್ಕೂ ಹೆಚ್ಚಿನ ಕುಟಿಲೋಪಾಯವನ್ನು ಹೂಡಿದ್ದರು. ಏಡನ್ನಿಗೆ ಹಡಗು ಬರುತ್ತಲೇ ಅಲ್ಲಿಯೇ ಇವರನ್ನು ದಸ್ತಗಿರಿ ಮಾಡಬೇಕೆಂದು ಪ್ರಯತ್ನಪಟ್ಟರು. ಆದರೆ ಆ ಹಡಗು ಬ್ರಿಟಿಶರದಲ್ಲ ಇಟಲಿಯವರದು. ನೌಕಾಪಾಲಕರು ಅವಕ್ಕೆ ಅವಕಾಶಕೊಡುವದಿಲ್ಲವೆಂದು ತಿರಸ್ಕರಿಸಿಬಿಟ್ಟರು. ಮತ್ತೊಮ್ಮೆ, ಮುಂಬೈ ಹತ್ತಿರಬರುತ್ತ ನೌಕೆಯಲ್ಲಿಯೇ ಹಿಡಿದು ಹಾಕಬೇಕೆಂದು ಆಂಗ್ಲ ಅಧಿಕಾರಿಗಳು ಹೆಣಗಿದರು.

ಬೋಸರಿಗೆ ಇನ್ನೂ ವಿಶ್ರಾಂತಿ ಬೇಕಾಗಿತ್ತು. ಖ್ಯಾತಿಯನ್ನಾದ ಡಾ. ಡಿಮೆಲ್ಲರು ಹೊಂ ಮೆಂಬರರಿಗೆ ಬರೆದು ಬೋಸರ ಆರೋಗ್ಯದ ಬಗ್ಗೆ ಸರಕಾರವು ವಹಿಸಬೇಕಾದ ಕಾಳಜಿ ಮತ್ತು ಜವಾಬದಾರಿಗಳನ್ನು ತಿಳಿಸಿದ್ದರು· ಆದರೆ ಸೆರೆಮನೆಯಲ್ಲಿ ದಯೆ ದಾಕ್ಷಿಣ್ಯಗಳೆಲ್ಲಿಂದ ಬರಬೇಕು ?

ಎಷ್ಟೋ ವರ್ಷಗಳಾದನಂತರ ಸ್ವದೇಶಕ್ಕೆ ತಿರುಗಿ ಬಂದು ಲಖನೌ ಕಾಂಗ್ರೆಸ ಅಧಿವೇಶನಕ್ಕೆ ಒದಗಬೇಕೆಂದಿದ್ದ ಸುಭಾಸಚಂದ್ರ ಬೋಸರನ್ನು ಬಂದರದ ಮೇಲೆಯೇ ಸೆರೆಹಿಡಿದ ಕೂಡಲೇ ಹಿಂದೀ ಜನತೆಗೆ ಒಳ್ಳೇ ತೀಕ್ಷ್ಣವಾದ ತಾಪವಾಯಿತು. ಸರಕಾರದ ವಿರುದ್ಧವಾಗಿ ನಿಷೇಧಪರ ಧಿಃಕಾರದ ಪ್ರಚಂಡ ಘೋಷಣೆಯು ದೇಶದಲ್ಲೆಲ್ಲ ಮೊಳಗಹತ್ತಿತು. ಪಂ. ಜವಾಹಿರಲಾಲರ ನೇತೃತ್ವದ ಕೆಳಗೆ ಕಾಂಗ್ರೆಸು ಸುಭಾಸ ಬಾಬುಗಳನ್ನು ಸೆರೆಹಿಡಿದದ್ದಕ್ಕೆ ಸರಕಾರವನ್ನು ಕಟುತರವಾಗಿ ನಿಷೇಧಿಸಿದ್ದಲ್ಲದೆ ಹಿಂದೀ ನಾಗರಿಕರ ಮೂಲಭೂತ ಹಕ್ಕುಗಳನ್ನು ಸರಕಾರವು ಕಾಲಬುಡದಲ್ಲಿ ತುಳಿಯುತ್ತಿರುವದನ್ನು ಯಾವತ್ತೂ ಹಿಂದೀ ಜನತೆಯು ಸಂಘಟಿತ ರೀತಿಯಿಂದ ಹೋರಾಡಲಿಕ್ಕೆಬೇಕೆಂಬ ತಿಳಿವಳಿಕೆಯನ್ನು ಉಂಟುಮಾಡುವದಕ್ಕಾಗಿ ದೇಶದಲ್ಲೆಲ್ಲ ಮೇ ೧೦ನೆಯ ದಿನವನ್ನು 'ಸುಭಾಸ ದಿನ' ವೆಂದು ಆಚರಿಸಬೇಕೆಂದು ಅದು ನಿಶ್ಚಯಿಸಿತು. ಈ ಬಗ್ಗೆ ಪಂ. ಜವಾಹಿರಲಾಲರು ಹೀಗೆ ಪ್ರಕಟನೆ ಹೊರಡಿಸಿದರು. "ಸುಭಾಸ ಬಾಬುಗಳನ್ನು ಬಂಧಿಸಿದ್ದು ಹಿಂದೀ ನಾಗರಿಕ ಸ್ವಾತಂತ್ರ್ಯದ ಮೇಲೆ ಎತ್ತಿದ ಗಡೆಯ ಬಲವಾದ ಹೊಸಪೆಟ್ಟಿನ ಉದಾಹರಣೆಯಾಗಿದೆ. ಲಖನೌ ಕಾಂಗ್ರೆಸು ಈ ವಿಷಯವಾಗಿ ನಿಶ್ಚಯ ಮಾಡಿದ ಠರಾವಿಗೆ ಎಲ್ಲಕಡೆಗೆ ಸಭೆಗಳಲ್ಲಿ ಮಾನ್ಯತೆ ದೊರೆಯಬೇಕು. ಮತ್ತು ಈಕಡೆಗೆ ಜನತೆಯ ಲಕ್ಷ್ಯವನ್ನು ಹೆಚ್ಚಾಗಿ ಎಳೆಯಬೇಕು. ಇದು ಇಷ್ಟವಾದ ಸಂಗತಿ. ನಾಗರಿಕ ಸ್ವಾತಂತ್ರ್ಯದ ರಕ್ಷಣೆಯ ಪ್ರಶ್ನೆಯು ಯಾವದೇ ವಿಶಿಷ್ಟ ಪಕ್ಷಕ್ಕೆ ಅಥವಾ ಗುಂಪಿಗೆ ಸಂಬಂಧಿಸಿರದೆ ಯಾವತ್ತೂ ಹಿಂದೀ ಜನತೆಗೇ ಸಂಬಂಧಿಸಿದೆ."

ಸುಭಾಸದಿನಾಚರಣೆಯು ಇಡೀ ಭಾರತದಲ್ಲೆಲ್ಲ ಒಳ್ಳೇ ವಿಜೃಂಭಣೆ ಉತ್ಸಾಹಗಳಿಂದ ನಡೆದು ಸರಕಾರದ ನಿಷೇಧ, ಸ್ವಾತಂತ್ರ್ಯದ ಘೋಷಣೆ, ಬೋಸರ ಆರೋಗ್ಯಕ್ಕಾಗಿ ಪ್ರಾರ್ಥನೆಗಳು ಮೊಳಗಿದುವು ಸುಭಾಸಬಾಬುಗಳ ಮೇಲಿನ ದಬ್ಬಾಳಿಕೆಯು ಪರಸರಕಾರ ಮತ್ತು ರಾಷ್ಟ್ರೀಯ ಸ್ವಾತಂತ್ರ್ಯದ ಚಳವಳಿ ಇವುಗಳ ನಡುವಿರುವ ಅನಿವಾರ್ಯ ವಿರೋಧದ ದ್ಯೋತಕವಾಗಿದೆ.

# ೧೭. ಬಂಧವಿಮೋಚನೆ

## ೧೯೩೭

ವಿಯೆನ್ನಾದಿಂದ ಬಂದ ಕೂಡಲೆ ಕೈದುಮಾಡಲ್ಪಟ್ಟು ಎರವಡಾ ಸೆರೆಮನೆಗಟ್ಟಲ್ಪಟ್ಟ ಬೋಸರ ಆರೋಗ್ಯವು ಮತ್ತೆ ಕೆಡಹತ್ತಿತು. ಮೇ ೧೧ರ ಸುಭಾಸಚಂದ್ರ ದಿನಾಚರಣೆಯ ದೃಶ್ಯದಿಂದ ಸರಕಾರವು ಎಚ್ಚರಿಯಿತು. ಸುಭಾಸರಿಗೆ ಹಿಂಸೆಕೊಟ್ಟಷ್ಟೂ ಜನಸಾಮಾನ್ಯರಲ್ಲಿ ಕ್ಷೋಭೆಯುಂಟಾಗುವದೆಂಬುದನ್ನು ಮನಗಂಡಿತು. ಅದರ ಪರಿಣಾಮವಾಗಿ ಅವರನ್ನು ಮೇ ೨೦ ನೆಯ ದಿನ ಎರವಡಾದಿಂದ ಕುರ್ಸೋಂಗಕ್ಕೆ ತಂದರು. ಅಲ್ಲಿ ಅವರ ಹಿರಿಯ ಅಣ್ಣಂದಿರಾದ ಶರತ್‌ಚಂದ್ರರ ಮನೆಯಲ್ಲಿ ಸ್ಥಾನಬದ್ಧರನ್ನಾಗಿರಿಸಿದರು. ಕುರ್ಸೋಂಗದಲ್ಲಿ ಬೋಸರಿಗೆ ಯಾವ ಸ್ವಾತಂತ್ರ್ಯವೂ ಇದ್ದಿಲ್ಲ. ಕಾಯಿಲೆಯು ಮಾತ್ರ ಇನ್ನೂ ಬೆಳೆಯುತ್ತಲೇ ಇತ್ತು. ಡಿಸೆಂಬರ ೧೭ನೆಯ ತಾರೀಖಿನ ವರೆಗೂ ಸುಭಾಸ ಬಾಬುಗಳು ಅಲ್ಲಿಯೇ ಇದ್ದರು. ಮುಂದೆ

ಕಾಯಿಲೆಯು ವಿಪರೀತಕ್ಕೆಳಿಸಬಹುದೆಂದು ಕಂಡು ಬಂದು ಕಲ್ಕತ್ತೆಯ ಮೆಡಿಕಲ್ ಕಾಲೇಜ ಆಸ್ಪತ್ರೆಗೆ ಸಾಗಿಸಲ್ಪಟ್ಟರು.

ಕಲ್ಕತ್ತೆಯಲ್ಲಿ ೩ ತಿಂಗಳು ಕಳೆಯುತ್ತಿರುವಷ್ಟರಲ್ಲಿ ದೇಶದ ಕಾಲ ಪರಿಸ್ಥಿತಿಯು ಬದಲಾಯಿತು. ಫೈಜಪುರ ಕಾಂಗ್ರೆಸ ಅಧಿವೇಶನದಲ್ಲಿ ನಿರ್ಣಯವಾದಂತೆ ಕಾಂಗ್ರೆಸಿನವರು ಪ್ರಾಂತಿಕ ಶಾಸನಸಭೆಗಳನ್ನು ಹೊಕ್ಕು ಅವುಗಳನ್ನು ವಶ ಪಡಿಸಿಕೊಂಡು ಹೊಸ ರಾಜ್ಯಘಟನೆಯನ್ನು ಮುರಿಯಬೇಕೆಂಬ ಪ್ರಯತ್ನಗಳು ನಡೆದವು. ಕಾಂಗ್ರೆಸು ಚುನಾವಣೆಯಲ್ಲಿ ಪ್ರಚಂಡವಾಗಿ ಹೋರಾಡಿತು. ದೇಶವಲ್ಲೆಲ್ಲ ವಿದ್ಯುತ್ಪ್ರವಾಹವು ತುಂಬಿ ರಾಷ್ಟ್ರಪ್ರೇಮವು ಉಕ್ಕೇರಿಬಂದಿತು. ಭಾರತದ ೧೧ ಪ್ರಾಂತಗಳಲ್ಲಿ ೭ ಪ್ರಾಂತಗಳು ಕಾಂಗ್ರೆಸಿನ ಕೈವಶವಾದವು. ಅಧಿಕಾರ ಸ್ವೀಕಾರದ ಪ್ರಶ್ನೆ ಇನ್ನೂ ನಿಕಾಲಿಯಾಗಿರಲಿಲ್ಲ. ಬ್ರಿಟಿಶ ಸರಕಾರವೂ ಕಾಂಗ್ರೆಸ ವಿರೋಧಿಗಳೂ ಕಾಂಗ್ರೆಸ ನಿರ್ಣಯವನ್ನು ನಿರೀಕ್ಷಿಸುತ್ತ ಬಾಯಲ್ಲಿ ಅಕ್ಕಿಕಾಳು ಹಾಕಿಕೊಂಡು ಆತುರರಾಗಿ ಎದುರುನೋಡುತ್ತಿದ್ದರು. ಕಾಂಗ್ರೆಸಿನಲ್ಲಿ ಅಧಿಕಾರಸ್ವೀಕಾರದ ಬಗ್ಗೆ ಪರ ಮತ್ತು ಪ್ರತಿ ಹೀಗೆ ಎರಡು ಬಲವಾದ ಗುಂಪುಗಳಾಗಹತ್ತಿದ್ದವು. ವರ್ಧಾದಲ್ಲಿ ಕೂಡಿದ ವರ್ಕಿಂಗ ಕಮಿಟಿಯ ಒಲವು ಅಧಿಕಾರ ಸ್ವೀಕಾರದ ಕಡೆಗೆ ಇದ್ದಿತಾದರೂ ಅ. ಭಾ. ಕಾಂಗ್ರೆಸ ಕಮಿಟಿಯ ಸದಸ್ಯರಲ್ಲಿ ಅದರ ವಿರೋಧಮತವುಳ್ಳವರು ಬಲವಾಗಿಗಿದ್ದಂತೆ ತೋರಿತು. ಆದ್ದರಿಂದ ಈ ಸಮಯಕ್ಕೆ ದಿಲ್ಲಿಯಲ್ಲಿ ಅ. ಭಾ. ಕಾ. ಕಮಿಟಿ, ವರ್ಕಿಂಗ ಕಮಿಟಿ ಮತ್ತು ಎಲ್ಲ ಪ್ರಾಂತಗಳ ಕಾಂಗ್ರೆಸ ಶಾಸನ ಸದಸ್ಯರ ಸಭೆಯು ನಡೆಯಿತು. ಈ ರಾಷ್ಟ್ರೀಯ ಮಹಾಸಮಿತಿ ( National Convention ) ನಡೆದ ಕಾಲಕ್ಕೆ ಮ. ಗಾಂಧಿಯವರು ಪುನಃ ರಾಜಕಾರಣದ ಸೂತ್ರವಿಡಿದು ಎರಡೂ ಪಕ್ಷಗಳಿಗೆ ಮಧ್ಯವಾಗಿದ್ದ ಮಾರ್ಗವೊಂದನ್ನು ಕಂಡು ಹಿಡಿದು ಆಶ್ವಾಸನದ ಕರಾರನ್ನು ಹಾಕಿ ಎರಡೂ ಬಣಗಳಲ್ಲಿ ಐಕ್ಯತೆಯನ್ನು ಕಾಪಾಡಿ ಜಗತ್ತಿನಲ್ಲಿ ತಮ್ಮ ಮಹಾ ಮುತ್ಸದ್ದಿತನವನ್ನು ಸಿದ್ಧಮಾಡಿದರು. ಹ್ಯಾಗಾದರೂ ಕಾಂಗ್ರೆಸಿನವರು ಅಧಿಕಾರದ ಬಲೆಯೊಳಗೆ ಒಮ್ಮೆ ಸೇರಬೇಕೆಂದು ಬಯಸುತ್ತಿದ್ದ ಸರಕಾರವು ಅದಕ್ಕೆ ತಕ್ಕ ವಾತಾವರಣವನ್ನು ಹುಟ್ಟಿಸಿ ವಿಸ್ವಾಸಕ್ಕೆ ಪಾತ್ರವಾಗಲೆತ್ನಿಸಿತು. ಸುಭಾಸಚಂದ್ರರ ಆಕಸ್ಮಿಕ ಬಿಡುಗಡೆಯು ಅಂಥ ಪ್ರಯತ್ನದ ಕಾರ್ಯಗಳಲ್ಲೊಂದಾಗಿದೆ ಎಂದು ಹೇಳಬಹುದು.

ವ್ಹಿಯೆನ್ನಾದಲ್ಲಿ ವಿಠ್ಠಲಭಾಯಿಯವರು ಮರಣಶಯ್ಯೆಯಲ್ಲಿದ್ದಾಗ
ಅವರನ್ನು ಉಪಚರಿಸುತ್ತಲಿದ್ದ



ಬಾಬು ಸುಭಾಸ ಚಂದ್ರ ಬೋಸರು

(೧೯೩೪)

( ಪುಟ ೧೧೫ ನೋಡಿರಿ )

ಆಳರಸರ ದಬ್ಬಾಳಿಕೆಗೆ ತುತ್ತಾಗಿ
ಸೆರೆಮನೆ, ಗಡಿಪಾರು, ಸ್ಥಾನ ಬದ್ಧತೆಗಳ ನರಕಯಾತನೆಯನ್ನು ಅನುಭವಿಸಿ
ಬೇನೆಯಿಂದ ಬಳಲಿ, ಬೆಂಡಾಗಿ, ಕೊರಗಿ, ಕೃಶವಾಗಿ ಕೊನೆಗೊಮ್ಮೆ ಬಂಧಮುಕ್ತರಾದ

ಬಂಗಾಲದ



ವೀರಕೇಸರಿ

ಸುಭಾಸ ಚಂದ್ರ ಬೋಸ

( ೧೭–೩–೧೯೩೭ )

ಕಾಲೇಜ ಮೆಡಿಕಲ್ ಆಸ್ಪತ್ರೆಯಲ್ಲಿ ಚಿಕಿತ್ಸೆಹೊಂದುತ್ತಿದ್ದಾಗ ಆಕಸ್ಮಿಕವಾಗಿ ೧೭ನೆಯ ಮಾರ್ಚ ಸಾಯಂಕಾಲ ೬-೩೦ಕ್ಕೆ ಸುಭಾಸಚಂದ್ರರ ಕೈಯಲ್ಲಿ ಗವ್ಹರ್ನರ ಜನರಲರಿಂದ ಬಂಧವಿಮೋಚನೆಯ ಆರ್ಡರು ಬಂದಿತು. ಒಮ್ಮೆಲೆ ಸುಭಾಸ ಬಾಬುಗಳು ಈ ವಿಷಯವು ಸುಳ್ಳೋ ನಿಜವೋ ಎಂಬುವನ್ನು ನಂಬಲಾರದೆ ಹೋದರು. ೨ ಗಂಟೆಗಳ ಕಾಲ ಡೆಪುಟಿ ಕಮಿಶನರೊಡನೆ ಡೆಟಿನ್ಯೂಗಳ ವಿಷಯವಾಗಿ ಮಾತಾಡಿದನಂತರ ತಮ್ಮ ತಾಯಿಯವರಿಗೆ ಈ ಸಂಗತಿಯನ್ನು ತಿಳಿಸಿದರು. ತಮ್ಮ ಚಿಕಿತ್ಸೆಯಲ್ಲಿ ನೆರವಾದವರೆಲ್ಲರಿಂದ ಬೀಳ್ಕೊಂಡು ರಾತ್ರಿ ೧೦ ಗಂಟೆಗೆ ಮನೆಗೆ ತಲ್ಪಿದರು. ಅಲ್ಲಿ ಬಂಗಾಲ ಕಾಂಗ್ರೆಸ ಮುಖಂಡರು ಅವರನ್ನು ಆದರದಿಂದ ಸ್ವಾಗತಿಸಿ, ಸತ್ಕರಿಸಿ, ಪೂಮಾಲೆಗಳನ್ನರ್ಪಿಸಿ ತಮ್ಮ ಆನಂದವನ್ನು ವ್ಯಕ್ತಮಾಡಿದರು.

ಈ ಕಾಲಕ್ಕೆ ಸುಭಾಸಚಂದ್ರರು ಬಹಳ ಇಳಿದು ಹೋಗಿದ್ದರು. ಅವರ ತೂಕವು ೧೪೬ ಕ್ಕೆ ಇಳಿದಿತ್ತು; ಜ್ವರವು ಇನ್ನೂ ನಿಂತಿದ್ದಿಲ್ಲ. ಇನ್ನು ಕೆಲ ಕಾಲ ಚಿಕಿತ್ಸೆಗಾಗಿ ಕಲ್ಕತ್ತೆಯಲ್ಲೇ ಅವರು ಇರಬೇಕಾಗಿತ್ತು. ರಾಜಕೀಯ ವಿಷಯವನ್ನು ಚರ್ಚಿಸಲಾಗದೆಂದು ಡಾಕ್ಟರರ ಕಟ್ಟಪ್ಪಣೆ ಇದ್ದಿತಾದರೂ ಬೋಸರ ಹೃದಯವು ದಿಲ್ಲಿಯ ಕಡೆಗೆ ಸೆಳೆಯುತ್ತಿತ್ತು. ದಿಲ್ಲಿಯಿಂದ ಬಂದ ಇತ್ತೀಚಿನ ಸಮಾಚಾರವೇನು? ಎಂದು ತಟ್ಟನೆ ಕೇಳಿದರು. ಆಷ್ಟರಲ್ಲಿ ರಾಷ್ಟ್ರಪತಿ ಜವಾಹರಲಾಲರು “ ಇದೇ ತಾನೆ ನಿಮ್ಮ ಬಿಡುಗಡೆಯ ಸುದ್ದಿಯನ್ನು ಕೇಳಿ ನಮಗೆಲ್ಲ ಅತ್ಯಾನಂದವಾಗಿದೆ. ಡಾಕ್ಟರರು ಅನುಮತಿ ಇತ್ತರೆ ತಾವು ಈ ಕ್ಷಣ ದಿಲ್ಲಿಗೆ ಹೊರಟು ಬರುವಿರೆಂದು ನಂಬಿದ್ದೇನೆ ” ಎಂದು ತಂತಿ ಕಳಿಸಿದರು. ಆದರೆ ಬೋಸರು ಹೋಗುವದು ಉಚಿತವಾಗಿದ್ದಿಲ್ಲವಾದ್ದರಿಂದ ವೈದ್ಯರು ಅವರನ್ನು ಹೋಗಗೊಡಲಿಲ್ಲ. ಹೀಗೆ ಸುಭಾಸ ಚಂದ್ರರು ಕೈದಿ, ದೇಶಭ್ರಷ್ಟ, ಸ್ಥಾನಬದ್ಧರಾಗಿ ಈಗ ಸ್ವಂತ್ರತರಾಗಿದ್ದುದು ಅವರಿಗೇನೇ ಆಶ್ಚರ್ಯವನ್ನು ಉಂಟುಮಾಡುವಂತಿತ್ತು.

ಮುಂದೆ ಎಪ್ರಿಲ ೬ ರಲ್ಲಿ ಸುಭಾಸಚಂದ್ರರ ಸನ್ಮಾನಾರ್ಥವಾಗಿ ಶ್ರದ್ಧಾನಂದ ಪಾರ್ಕಿನಲ್ಲಿ ಸು. ೫೦,೦೦೦ ಸಾವಿರ ಜನರ ಪ್ರಚಂಡ ಸಭೆ ಸೇರಿತು. ಸುಮಾರು ೨೦೦ ಸಂಸ್ಥೆಗಳು ಇವರಿಗೆ ಪೂಮಾಲೆಗಳನ್ನರ್ಪಿಸಿ ಸ್ವಾಗತಿಸಿದವು. ರಮಾನಂದ ಚತರ್ಜಿಯವರು ಅಧ್ಯಕ್ಷಸ್ಥಾನ ವಹಿಸಿದ್ದರು. ಎಲ್ಲ ಸ್ಥಾನಬದ್ಧ ಕೈದಿಗಳನ್ನು ಬಿಡಬೇಕು. ಮುಷ್ಕರ ಹಿಡಿದವರಿಗೆ ಸಹಾನುಭೂತಿ ತೋರಿಸ

ಬೇಕು. ಮೊದಲಾದ ಠರಾವುಗಳು ಪಾಸಾದವು. ಸುಭಾಸಚಂದ್ರರು ಆ ಕಾಲಕ್ಕೆ ಮಾನಪತ್ರಕ್ಕೆ ಉತ್ತರವೀಯುತ್ತ ಅಮೋಘವಾದ ಭಾಷಣ ಮಾಡಿದರು.

"ಯಾವುದಾದರೊಂದು ವಿಷಯದಬಗ್ಗೆ ನಮ್ಮ ಸಾಧನಗಳು ಭಿನ್ನವಿರಬಹುದಾದರೂ ಕೆಲವು ವಿಶಿಷ್ಟ ವಿಚಾರಗಳ ವಿಷಯಕ್ಕೆ ಎಲ್ಲ ಹಿಂದೀ ಜನರಲ್ಲಿ ಐಕಮತ್ಯವಿರಲೇಬೇಕು. ಇಂದಿಗೆ ಇಡಿಯ ಜಗತ್ತೇ ಒಂದು ಘಟಕವಾಗಿ ಪರಿಣಮಿಸಿರುವದೆಂಬದನ್ನು ನಾವೆಲ್ಲರೂ ಲಕ್ಷದಲ್ಲಿಡಬೇಕು; ಆಧುನಿಕ ಜಗತ್ತಿನ ಬೇರೆ ಭಾಗದ ಸ್ಥಿತಿಗತಿಯೊಡನೆಯೇ ಹಿಂದುಸ್ತಾನದ ಹಣೆಬರಹವೂ ಹೆಣೆಯಲ್ಪಟ್ಟದೆ. ಆದ್ದರಿಂದ ಇಡೀ ಜಗತ್ತಿನ ಹಿಂದು ಮುಂದಿನ ಸ್ಥಿತಿಯನ್ನು ಲಕ್ಷದಲ್ಲಿಟ್ಟುಕೊಂಡೇ ನಮ್ಮ ಚಳವಳಿಯ ದಿಕ್ಕನ್ನು ನಿಶ್ಚಯಿಸಬೇಕು.

ನಾವು ನೆನಪಿನಲ್ಲಿಡತಕ್ಕ ಎರಡನೆಯಮಾತೆಂದರೆ, ಸಾಮ್ರಾಜ್ಯವಾದವು ಎಲ್ಲಿಯೇ ಯಾವುದೇ ಸ್ವರೂಪದಲ್ಲಿ ಕಂಡುಬಂದರೂ ಅದರಿಂದ ಬೇರೆ ಜನಾಂಗಗಳ ಸ್ವಾತಂತ್ರ್ಯಕ್ಕೂ ಜಾಗತಿಕ ಶಾಂತತೆಗೂ ಬಾಧೆ ಬರುವದೆಂಬದು ಖಂಡಿತ. ಯುರೋಪದ ಪಶ್ಚಿಮ ಭಾಗದ ದೇಶಗಳಲ್ಲಿ ಈಗ ಕಂಡು ಬರುತ್ತಿರುವಂತೆ ಸಾಮ್ರಾಜ್ಯವಾದವು ಪ್ರಜಾಪ್ರಭುತ್ವದ ವೇಷವನ್ನೂ ಧರಿಸಬಹುದು; ಮಧ್ಯಯುರೋಪದಲ್ಲಿ ನಡೆದಿರುವಂತೆ ಫ್ಯಾಸಿಸ್ಟ ಸರ್ವಾಧಿಕಾರಿತ್ವದ ರೂಪವನ್ನೂ ತಾಳಬಹುದು, ಅದು ಯಾವ ಸ್ವರೂಪದಲ್ಲಿಯೇ ಇರಲಿ ಸ್ವಾತಂತ್ರ್ಯ ಮತ್ತು ಶಾಂತತೆಯ ಭಕ್ತರೆಂಬ ದೃಷ್ಟಿಯಿಂದ ನಾವು ಅದರ ವಿರುದ್ಧವಾಗಿ ಹೋರಾಡಲೇ ಬೇಕು.

ಇನ್ನು ಮೂರನೆಯ ಮಾತು. ಹೊರಗಿನ ಜಗತ್ತಿನ ಸಂಬಂಧದ ದೃಷ್ಟಿಯಿಂದ ಮಾತಾಡುವದಾದರೆ ಅಖಂಡ ಭರತಖಂಡವು ಒಂದೇ ರಾಷ್ಟ್ರವೆಂಬದನ್ನು ನಾವು ನೆನಪಿನಲ್ಲಿಡಬೇಕು. ನಮ್ಮ ಜನರ ಉದ್ಧಾರವು ಶೀಘ್ರವಾಗಿ ಸಾಧ್ಯವಾಗಬೇಕಾದರೆ ದೇಶದೊಳಗಿನ ಭಿನ್ನ ಭಿನ್ನ ಸಮಾಜಗಳೂ ಒಂದೇ ಧ್ವಜದ ಕೆಳಗೆ ಒಟ್ಟುಗೂಡಿ ಒಂದೇ ಧೋರಣವನ್ನು ಅನುಸರಿಸುವದು ಅತ್ಯವಶ್ಯವಿದೆ. ವಿಭಿನ್ನತೆಗಳಿಗೆಳೆಸುವ ಮನೋವೃತ್ತಿಗಳು, ಅವು ಪ್ರಾಂತಿಕ ದೃಷ್ಟಿಯವೇ ಇರಲಿ, ಜಾತಿಯ ದೃಷ್ಟಿಯವೇ ಇರಲಿ, ಗುಲಾಮ ಜನಾಂಗಕ್ಕೆ ಅತಿ ದಾರುಣವಾದ ದುರ್ದೈವವೆಂದೆಣಿಸಬೇಕು. ಸ್ವಾತಂತ್ರ್ಯ ಭಕ್ತರೆಲ್ಲರು ಸುವಿಶಾಲವಾದ ಸಾಮಾಜಿಕ ಮತ್ತು ಆರ್ಥಿಕ ಕಾರ್ಯಕ್ರಮವನ್ನೇ ತಳಹದಿಯಾಗಿ ಇಟ್ಟುಕೊಂಡರೆ ಪ್ರಾಂತೀಯ ಮತ್ತು ಜಾತೀಯ

ಭಿನ್ನತೆಗಳೆಲ್ಲ ಅಳಿದುಹೋಗಿ ಸಾಮಾನ್ಯ ಜನತೆಯ ಉದ್ಧಾರವು ಶೀಘ್ರ ವಾಗಿ ಸಾಧಿಸುವದು.

ನಾಲ್ಕನೆಯ ವಿಷಯವೆಂದರೆ ರೈತರು, ಕೂಲಿಕಾರರು, ಮಧ್ಯಮ ವರ್ಗದ ಜನರೇ ಮೊದಲಾದವರನ್ನು ಒಟ್ಟುಗೂಡಿಸಿ ಸಾಮ್ರಾಜ್ಯ ವಿರೋಧಿ ಯಾದ ಕಣವನ್ನು ನಿರ್ಮಿಸಿ ಅದನ್ನು ಭದ್ರಗೊಳಿಸಬೇಕು. ದೇಶದಲ್ಲಿರುವ ಸಾಮ್ರಾಜ್ಯ ವಿರೋಧಕ ದಲಗಳನ್ನೆಲ್ಲ ಕಾಂಗ್ರೆಸ್ಸಿನ ಧ್ವಜದಕೆಳಗೆ ಒಂದುಗೂ ಡಿಸಿ ಹಸಿವೆ ಮತ್ತು ತೊತ್ತುಗಾರಿಕೆಯಿಂದ ಸಂತ್ರಸ್ತರಾಗಿರುವ ಕೋಟಿಗಟ್ಲೆ ದೇಶಬಾಂಧವರಿಗೆ ಆರ್ಥಿಕ ಹಾಗೂ ರಾಜಕೀಯ ಸ್ವಾತಂತ್ರ್ಯವನ್ನು ದೊರ ಕಿಸಿ ಕೊಡುವದೇ ಇಂದಿಗೆ ಅತ್ಯಂತ ಆವಶ್ಯಕವಾದ ಸಂಗತಿಯಾಗಿದೆ.

ಒಂದೇ ಪ್ರಾಂತದಲ್ಲಿ ಮನಸ್ಸನ್ನು ಪೂರಾತೊಡಗಿಸಿ ಉಳಿದ ಭಾಗಗಳ ವಿಷಯಕ್ಕಿದ್ದ ಕಾರ್ಯವನ್ನು ಮರೆಯದೆ ಹೆಚ್ಚು ಆಸ್ಥೆಯಿಂದ ಮಾಡುವ ಕಾಲವೀಗ ಬಂದಿದೆ. ಆದ್ದರಿಂದ ನಾನು ಇನ್ನು ಮುಂದೆ ನನ್ನ ಸಮಯ ಮತ್ತು ಉತ್ಸಾಹದ ಕೆಲಭಾಗವನ್ನು ಅಖಿಲ ಭಾರತ ಸಮಸ್ಯೆ ಮತ್ತು ಚಟುವಟಿಕೆಗಳಿಗಾಗಿ ವಿನಿಯೋಗಿಸುವೆನು. ಬಂಗಾಲದಲ್ಲಿ ಹಳೆಯ ಅಂತಃ ಕಲಹಗಳೆಲ್ಲ ಮರೆಯಲ್ಪಟ್ಟು ಒಕ್ಕಟ್ಟಿನ ಭದ್ರವಾದ ಕೋಟೆಯನ್ನು ಕಟ್ಟ ಬೇಕು. ಸರ್ವರಿಗೂ ಸಾಮಾನ್ಯವಾದ ಸಾಮಾಜಿಕ ಮತ್ತು ಆರ್ಥಿಕ ಕಾರ್ಯಕ್ರಮಗಳಿಂದ ಕಾಂಗ್ರೆಸಿನೊಳಗಿನ ಭಿನ್ನ ಪಂಗಡಗಳಲ್ಲಷ್ಟೇ ಅಲ್ಲದೆ ಹಿಂದು ಮುಸಲ್ಮಾನರಲ್ಲಿಯೂ ಐಕ್ಯವು ಸಾಧ್ಯವಾಗುವದು. ಅಲ್ಲದೆ ಬಂಗಾ ಲವು ಕಾಂಗ್ರೆಸ ಮಹಾಸಭೆಯ ಧುರೀಣತೆಯನ್ನು ಸಂಪೂರ್ಣವಾಗಿ ಅನುಸ ರಿಸಬೇಕು. ತತ್ವ ಅಥವಾ ತಪಶೀಲಿನ ವಿಷಯಕ್ಕೆ ಬಂಗಾಲವು ಕಾಂಗ್ರೆಸಿ ನಿಂದ ಭಿನ್ನವಾದ ಮಾರ್ಗವನ್ನು ಎಷ್ಟುಮಾತ್ರವೂ ಅನುಸರಿಸಲಾಗದು.

### ಪುನಃ ಗಾಂಧಿಯುವರ ಮುಖಂಡತ್ವದ ಅವಶ್ಯಕತೆ

ರಾಷ್ಟ್ರವು ಇಂದಿನ ಪರಿಸ್ಥಿತಿಯಲ್ಲಿ ಪುನಃ ಮಹಾತ್ಮರ ನಾಯಕತ್ವ ಕ್ಕಾಗಿ ಎದುರು ನೋಡುತ್ತಿದೆ. ನಮ್ಮ ಹೋರಾಟವು ಅಹಿಂಸಾಮಯ ಅಸಹಕಾರದ ಮಟ್ಟಿಗೇ ಮರ್ಯಾದಿತವಾಗಿರಬೇಕೆಂಬುದು ಅತ್ಯಂತ ಮಹ ತ್ವದ್ದಾಗಿದೆ. ಮ. ಗಾಂಧಿ ಮತ್ತು ರಾಷ್ಟ್ರಪತಿ ಜವಾಹರಲಾಲರೊಡನೆ ಸದ್ಯದ ಪರಿಸ್ಥಿತಿಯ ಬಗ್ಗೆ ಮಾತನಾಡಿ ನನ್ನ ಮುಂದಿನ ಕಾರ್ಯಕ್ರಮವನ್ನು ಗೊತ್ತುಮಾಡುವೆನು ಎಂದು ಸುಭಾಸಚಂದ್ರರು ಸಾರಿದರು.

ಅ. ಭಾ. ಕಾ. ಕಮೀಟಿಯ ಕಲ್ಕತ್ತಾ ಅಧಿವೇಶನದ ಕಾಲಕ್ಕೆ



ಗಡಿನಾಡಿನ ಗಾಂಧಿಯವರೊಡನೆ ಸುಭಾಸ ಚಂದ್ರರು

# ೧೮. ಅಹಿಂಸಾ ತತ್ವದ ವಿಜಯು ಬೋಸರಿಗೆ ಅಧ್ಯಕ್ಷ ಪಟ್ಟ ?

ಸುಭಾಸಚಂದ್ರರ ಬಿಡುಗಡೆಯಕಾಲಕ್ಕೆ ಮ.ಗಾಂಧಿಯವರ ಆಪ್ತ ಕಾರ್ಯದರ್ಶಿ ಮಹದೇವ ದೇಸಾಯಿಯರು ಸುಭಾಸಚಂದ್ರರನ್ನು ಕಂಡರು. ಮ. ಗಾಂಧಿಯವರನ್ನು ಕಾಣಲು ಸುಭಾಸಚಂದ್ರರಿಗೂ ಆತುರವಿತ್ತು. ಡಾಕ್ಟರರ ಸಲಹೆಯ ಮೇರೆಗೆ ಇವರು ಕೆಲಕಾಲ ಡಾಲಹೌಸಿಯಲ್ಲಿ ವಿಶ್ರಾಂತಿ ಹೊಂದಬೇಕೆಂದು ಗೊತ್ತಾಗಿದ್ದಿತು. ಡಾಲಹೌಸಿಗೆ ಹೋಗುವಾಗ ಮಾರ್ಗ ದಲ್ಲಿ ರಾಷ್ಟ್ರಪತಿ ಜವಾಹರಲಾಲರನ್ನು ಮತ್ತು ವರ್ಕಿಂಗಕಮಿಟಿಯ ಸಭೆ ಗಾಗಿ ಅಲಹಾಬಾದಕ್ಕೆ ಬಂದಿದ್ದ ಗಾಂಧೀಜಿ ಮೊದಲಾದ ಮುಖಂಡರನ್ನು ಸುಭಾಸಚಂದ್ರರು ಕಂಡರು. ಆಗ್ಗೆ ಗಾಂಧೀಜಿಯವರು ಬೋಸರಿಗೆ ಕೊಟ್ಟ ದೃಢಾಲಿಂಗನದ ದೃಶ್ಯವು ಐತಿಹಾಸಿಕವೆನ್ನಬಹುದು. ಪರುಷ ಮಣಿ ಮುಟ್ಟಿದಂತಾಯಿತು. ಬೋಸರ ದೇಹದ ನಾಡಿನಾಡಿಗಳಲ್ಲಿ ಅಹಿಂಸಾತತ್ವ

ಪ್ರವೇಶವಾದಂತಾಯಿತೆನ್ನಬಹುದು. ಯಾಕಂದರೆ ಈ ಸಂದರ್ಶನದ ನಂತರ ಸುಭಾಸಚಂದ್ರರು ಒಳ್ಳೇ ಪರಿಣಾಮಕಾರಕವಾಗಿಯೂ ಸತತವೂ ಅಹಿಂಸೆಯನ್ನು ಬೋಧಿಸಹತ್ತಿದರು. ಅಂದಮಾನ ಕೈದಿಗಳ ಅನ್ನತ್ಯಾಗವನ್ನು ನಿಲ್ಲಿಸುವಿಕೆ ಮತ್ತು ಸ್ಥಾನಬದ್ಧ ಕೈದಿಗಳ ಬಂಧವಿಮೋಚನೆಗಳಲ್ಲಿ ಸುಭಾಸ ಚಂದ್ರರ ವರ್ಚಸ್ಸಿನ ಉಪಯೋಗವು ಬಹಳವಾಯಿತು. ಮ. ಗಾಂಧಿಯವರು ಇದನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಸದ್ಯದ ವಾತಾವರಣದಲ್ಲಿ ಅಹಿಂಸಾತತ್ವದ ವಿಜಯದಲ್ಲಿ ಬೋಸರ ವಿಶ್ವಾಸವು ಹೆಚ್ಚಿದ್ದು ನಾಡಿನ ಸೂತ್ರ ವನ್ನು ವಹಿಸಲು ಅವರಿಗೆ ಹೆಚ್ಚಿನ ಅರ್ಹತೆಯನ್ನುಂಟು ಮಾಡಿದಂತಾಗಿದೆ.

ಬೋಸರು ಅಲಹಾಬಾದದಿಂದ ಲಾಹೋರಕ್ಕೆ ಹೋಗಿ ಮುಂದೆ ಮೇ ೧೧ಕ್ಕೆ ಡಾಲಹೌಸಿಗೆ ಹೋದರು. ಅಲ್ಲಿ ಡಾ. ಧರ್ಮವೀರರ ಆತಿಥ್ಯದಲ್ಲಿ ಚಿಕಿತ್ಸೆ ಮತ್ತು ವಿಶ್ರಾಂತಿಗಳನ್ನು ಹೊಂದಹತ್ತಿದರು. ಅಲ್ಲಿರುವಾಗ ಮ. ಗಾಂಧಿಯವರ ಪಟ್ಟಶಿಷ್ಯರೂ ಸತ್ಯ ಅಹಿಂಸೆಗಳಲ್ಲಿ ಅಚಲಶ್ರದ್ಧೆಯುಳ್ಳವರೂ ಆದ ಮೀರಾಬೆನ್ನರ ಸಹವಾಸದ ಯೋಗವೂ ಒದಗಿತು. ಕಾಲಪರಿಸ್ಥಿತಿ ಯನ್ನರಿತು ನಡೆಯಲು ಬೋಸರಿಗೆ ಇವರ ಸಹವಾಸವು ಅಪ್ರತ್ಯಕ್ಷವಾದ ಪರಿಣಾಮವನ್ನಾದರೂ ಮಾಡಿರಲಿಕ್ಕೆ ಸಾಕೆಂದು ತೋರುತ್ತದೆ.

ಡಾಲಹೌಸಿಯಲ್ಲಿ ಸುಮಾರು ೫ ತಿಂಗಳು ಇರುವಷ್ಟರಲ್ಲಿ ಇವರು ಪುನಃ ಕಲ್ಕತ್ತೆಗೆ ಬರಬೇಕಾಯಿತು. ಡಾಲಹೌಸಿಯಲ್ಲಿದ್ದಾಗ ಇವರು ಏನೂ ಸುಮ್ಮನೆ ಕೂಡ್ರಲಿಲ್ಲ. ಅಧಿಕಾರಸ್ವೀಕಾರದ ಪರವಾಗಿ ತರ್ಕಬದ್ಧವೂ ಮಾರ್ಗದರ್ಶಕವೂ ಆದ ವಿಮರ್ಶಾತ್ಮಕ ಲೇಖನವೊಂದನ್ನು ಬರೆದು ಆ ಸಮ ಸ್ಯೆಯನ್ನು ಸ್ಪಷ್ಟಗೊಳಿಸಿದರು. ಸೆರೆಯಾಳುಗಳ ಮತ್ತು ಸ್ಥಾನಬದ್ಧರ ಬಿಡು ಗಡೆಗೆ ಅವ್ಯಾಹತವಾಗಿ ಪ್ರಯತ್ನಿಸಿದರು. ಬಂಗಾಲ ಪ್ರಾಂತವನ್ನು ಹೇಗೆ ಕಾಂಗ್ರೆಸಿನ ಕೈವಶ ಮಾಡಿಕೊಳ್ಳಬೇಕೆಂದು ಅಲ್ಲಿಂದಲೇ ಹೊಂಚು ಹಾಕು ತ್ತಿದ್ದರು. ನಾಡಿನ ಯಾವದೇ ಮಹತ್ವದ ಪ್ರಶ್ನೆಯಲ್ಲೂ ಇವರು ತಮ್ಮ ಮತವನ್ನು ವ್ಯಕ್ತಮಾಡದೆ ಇರುತ್ತಿರಲಿಲ್ಲ.

ಅಕ್ಟೋಬರ ಮೊದಲನೆಯ ವಾರದಲ್ಲಿ ಸುಭಾಸಚಂದ್ರರು ಕುರ್ಸಿಯಾಂಗಕ್ಕೆ ಬಂದು ತಮ್ಮ ಅಣ್ಣಂದಿರ ಮನೆಯಲ್ಲಿದ್ದುಕೊಂಡೇ ಕಲ್ಕತ್ತೆಯಲ್ಲಿ ಅದೇ ತಿಂಗ ಳ ಕೊನೆಯಲ್ಲಿ ಕೂಡಲಿದ್ದ ವರ್ಕಿಂಗಕಮಿಟಿ ಮತ್ತು ಅ.ಭಾ.ಕಾ. ಕಮಿಟಿ ಗಳ ಅಧಿವೇಶನಗಳ ಸಿದ್ಧತೆ ಮಾಡಿದರು. ೨೪ನೆಯ ದಿನ ಪುನಃ ಕಲ್ಕತ್ತೆಗೆ

ಬಂದು ಪ್ರತಿಯೊಂದು ವ್ಯವಸ್ಥೆಯನ್ನು ಕಣ್ಣುಟ್ಟಿನೋಡಿದರು. ಅತಿಥಿಗಳ ಸ್ವಾಗತ, ಕಮಿಟಿಯ ಮಹತ್ವದ ನಿರ್ಣಯಗಳಲ್ಲೆಲ್ಲ ಅವರ ಪಾತ್ರವು ಹಿರಿಯದಾಗಿದ್ದಿತು. ಅವರ ಚಟುವಟಿಕೆಗಳಲ್ಲಿ ಮುಂಬರುವ ಹರಿಪುರ ಕಾಂಗ್ರೆಸ ಅಧಿವೇಶನದ ಅಧ್ಯಕ್ಷಪಟ್ಟದ ಸೂಚಿ-ಚಿನ್ಹಗಳು ಅಪ್ರತ್ಯಕ್ಷವಾಗಿ ಕಾಣಬರುವಂತಿತ್ತು. ವಿಶೇಷವಾಗಿ ಡೆಟಿನ್ಯೂಗಳ ಬಿಡುಗಡೆಯ ವಿಷಯದಲ್ಲಿ ಇವರು ಮಾಡಿದ ಭಾಷಣವು ಎಲ್ಲರ ಹೃದಯದಲ್ಲಿ ಸ್ಫೂರ್ತಿಯನ್ನುದಯಿಸಿತು. ರಾಷ್ಟ್ರಪತಿಗಳೂ ಅವರ ಭಗಿನಿ ವಿಜಯಲಕ್ಷ್ಮಿಯವರೂ ಗಾಂಧಿಯವರೂ ಇವರ ಮನೆಯಲ್ಲಿಯೇ ಇಳಿದುಕೊಂಡಿದ್ದರು. ಇಡೀ ಅಧಿವೇಶನದಲ್ಲಿ ಸರ್ವರ ಪ್ರೇಮಾದರಗಳಿಗೆ ವಿಶೇಷವಾಗಿ ಪಾತ್ರರಾಗಿದ್ದ ಅತ್ಯಂತ ಮಹತ್ವದ ತರುಣರೆಂದರೆ ಸುಭಾಸರೇ ಆಗಿದ್ದರು. ಅಲ್ಲಿಯ ದೃಶ್ಯ ಖಾಸಗೀ ಮಾತುಕತೆಗಳನ್ನು ನೋಡಿದರೆ ಸುಭಾಸಚಂದ್ರರಿಗೇನೇ ಮುಂದಿನ ಅಧ್ಯಕ್ಷಪಟ್ಟವು ಖಂಡಿತವೆಂದು ಊಹಿಸಬಹುದಾಗಿತ್ತು. ಅಲ್ಲದೆ ನಾಡಿನ ಅನೇಕ ಪ್ರಾಂತಗಳು ಇವರ ಹೆಸರನ್ನು ಈಗಾಗಲೇ ಸೂಚಿಸಹತ್ತಿವೆ. ಪಂ. ಜವಾಹರಲಾಲರು ನಾಡಿನಲ್ಲಿ ಹುಟ್ಟಿಸಿದ ವಿದ್ಯುತ್ಪ್ರವಾಹದ ಚೈತನ್ಯವನ್ನು ಸ್ಥಿರಗೊಳಿಸಿ, ಅದನ್ನು ವೈರಿಗಳ ಕುಟಿಲೋಪಾಯ ಮತ್ತು ಸೈನ್ಯದ ಶಕ್ತಿಗಳಿಗೆ ಹಣಿಯದಂತೆ ಭದ್ರಗೊಳಿಸಬೇಕಾದರೆ ಸುಭಾಸಚಂದ್ರರನ್ನುಳಿದು ಇನ್ನಾರೂ ಹೆಚ್ಚಿನವರಿರಲಾರರೆಂಬುದು ಸ್ಪಷ್ಟವದೆ. ಅಲ್ಲದೆ ದೇಶಪ್ರೇಮದ ತೌರುಮನೆಯಾಗಿದ್ದ ಬಂಗಾಲವಿಂದು ವಿಧವೆಯಾದಂತಾಗಿದ್ದು ಅದಕ್ಕೆ ಮುತ್ತೈದತನವನ್ನು ತಂದು ಕೊಡುವ ಶಕ್ತಿಯಾರಲ್ಲಾದರೂ ಇದ್ದರೆ ಅದು ನಮ್ಮ ತರುಣನಾಯಕ ಸುಭಾಸಚಂದ್ರರಲ್ಲೇ ಎಂದು ಹೇಳಲು ಯಾವ ಅಭ್ಯಂತರವೂ ಇರಲಾರದು. ಹಿಂದು ಮುಸಲ್ಮಾನರ ಐಕ್ಯತೆಯ ಮಹತ್ವವನ್ನರಿತು ಬಂಗಾಲದ ಮುಸಲ್ಮಾನರ ವಿಶ್ವಾಸಕ್ಕೆ ಪಾತ್ರರಾದ ಮತ್ತೊಬ್ಬ ಕಾಂಗ್ರೆಸ ನಾಯಕರು ಇವರನ್ನುಳಿದು ಸಿಗಲಾರರು. ಇಷ್ಟೇ ಅಲ್ಲದೆ ಇನ್ನೂ ಅನೇಕ ಕಾರಣಗಳ ಮೂಲಕ ಈ ಹಿಂದೆಯೇ ಸಲ್ಲಬೇಕಾಗಿದ್ದ ರಾಷ್ಟ್ರಪತಿ ಪದತ್ವವು ಸುಭಾಸರ ಪದರಿನಲ್ಲಿ ಬಿದ್ದಂತೆಯೇ ಸರಿ. ಮುಂದಿನ ತಿಂಗಳಲ್ಲಿ ಅದನ್ನು ಪ್ರತ್ಯಕ್ಷನೋಡುವ ತರುಣರು ಧನ್ಯರು !

ತಾ. ೨೭ರಲ್ಲಿ ನೆರೆದ ೨೦ ಸಾವಿರ ರೈತರ ಸಭೆಯಲ್ಲಿ ರೈತರ ಸಂಘಟನೆಯಬಗ್ಗೆ ಉಜ್ವಲವಾದ ಭಾಷಣ ಮಾಡಿದರು. ನವ್ಹಂಬರ ೧೦ ನೆಯದಿನ

ಸುಭಾಸಚಂದ್ರರು ಕಲ್ಕತ್ತಾನಗರ ಸಭೆಯ ಆಲ್ಡರಮನ್‌ರ ಗೌರವಸ್ಥಾನಕ್ಕೆ ಏರಿಸಲ್ಪಟ್ಟರು. ಚಿತಗಾಂಗ ಮತ್ತು ಬಿಜನೂರಿನ ಮುಸಲ್ಮಾನರನ್ನು ಅಭಿನಂದಿಸಿ ಅವರನ್ನು ಕಾಂಗ್ರೆಸಿನ ವಿಶ್ವಾಸಕ್ಕೆ ಪಾತ್ರರನ್ನಾಗಿ ಮಾಡಲು ಯತ್ನಿಸಿದರು. ಹಿಂದೂ ಮುಸಲ್ಮಾನರ ಐಕ್ಯದ ಪ್ರಶ್ನೆಯಲ್ಲಿ ಮುಖ್ಯ ಪಾತ್ರ ವಹಿಸಿದ್ದಾರೆ. ಈ ಸದ್ಯದ ಪರಿಸ್ಥಿತಿಯಲ್ಲಿ ನಾಡಿಗೆ ಮಾರ್ಗದರ್ಶಕರಾಗಿದ್ದಾರೆ.

## ಯುರೋಪ ಪ್ರಯಾಣ

ತಾ ೧೮ನೆಯ ಮುಂಜಾನೆ ೯|| ಘಂಟೆಗೆ ಬೋಸರು ವಿಮಾನ ಮಾರ್ಗವಾಗಿ ಪುನಃ ಆರೋಗ್ಯಸಂಪಾದನೆಗಾಗಿ ಯುರೋಪಕ್ಕೆ ಹೊರಟರು. ಪ್ರಯಾಣ ಬೆಳೆಸುವ ಮುನ್ನ ಇವರು ಕಾಂಗ್ರೆಸ ಕಾರ್ಯಕರ್ತರೆಲ್ಲ ಅಹಿಂಸೆಯನ್ನಾಚರಿಸುವದರ ಮಹತ್ವವನ್ನು ಒತ್ತಿ ಹೇಳಿದರು. ಅವರನ್ನು ಬೀಳ್ಕೊಡಲು ಅನೇಕ ಪ್ರಮುಖರು ನಿಲ್ದಾಣಕ್ಕೆ ಬಂದಿದ್ದರು. ಅವರು ಆಸ್ಟ್ರಿಯದ ಬ್ಯಾಡ್‌ಗಸ್ಟೀನ ಎಂಬ ಸ್ವಾಸ್ಥ್ಯ ನಿಲಯದಲ್ಲಿ ಕೆಲಕಾಲವಿದ್ದು ಅಲ್ಲಿಂದ ನೇಪಲ್ಸಕ್ಕೆ ಬಂದು ರೋಮಕ್ಕೆ ಸಂದರ್ಶನವಿತ್ತು ಮಾತೃ ಭೂಮಿಗೆ ಮರುಳುವರೆಂದು ತಿಳಿದಿದೆ. ಇವರು ಲಂಡನ್ನಿಗೂ ಹೋಗಬಹುದೆಂದೂ ಅಲ್ಲಿ ಎಲ್ಲ ಪಕ್ಷಗಳ ಪಾರ್ಲಿಮೆಂಟರಿ ಸದಸ್ಯರ ಸಮ್ಮೇಲನದಲ್ಲಿ ಭಾಷಣ ಮಾಡಲಿದ್ದಾರೆಂದೂ ತಿಳಿಯುತ್ತಿದೆ. ಅವರ ಆರೋಗ್ಯವು ಗುಣ ಹೊಂದುತ್ತಿದೆ. ಡಿಸೆಂಬರ ಕೊನೆಯಲ್ಲಾಗಲಿ ೧೯೩೮ನೆಯ ಜನವರಿಯಲ್ಲಾಗಲಿ ಸ್ವದೇಶಕ್ಕೆ ಹಿಂತಿರುಗುವವರಿದ್ದಾರೆ. ನಾಡೆಲ್ಲ ಅವರ ಕಡೆಗೆ ಆತುರತೆಯಿಂದ ನಾಯಕತ್ವಕ್ಕಾಗಿ ನಿರೀಕ್ಷಿಸುತ್ತಲಿದೆ. ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಅಧ್ಯಕ್ಷಸ್ಥಾನದಿಂದ ಬೋಸರು ಅಖಿಲಭಾರತ ಕಾಂಗ್ರೆಸ ಕಮಿಟಿಯ ಅಧ್ಯಕ್ಷಸ್ಥಾನವನ್ನು ಏರುವ ಕಾಲವು ಅವಸರದಿಂದ ಬರಲೆಂದು ಹಾರೈಸುತ್ತಲಿದೆ.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೪ | ೧೯೩೫ | ೧೯೩೪ |
| ೧೫ | ೧೨ | ಸಿದ್ಧನಿದ್ಧೇನೆ | ಸಿದ್ಧನಿದ್ದೇನೆ |
| ೧೯ | ೨೫ | ಧೃಡವಾಗಿಯೇ | ದೃಢವಾಗಿಯೇ |
| ೨೩ | ೧೯ | ಸರಕಾರದರ | ಸರಕಾರದವರ |
| ೩೭ | ೩ | ಸ್ಪಷ್ಟಿಸಿ | ಸೃಷ್ಟಿಸಿ |
| ೩೭ | ೪ | ನಡೆಯಿಸಲ್ಟಟ್ಟ | ನಡೆಯಿಸಲ್ಪಟ್ಟ |
| ೪೦ | ೨೮ | ಇಗ್ಲಂಡ | ಇಂಗ್ಲಂಡ |
| ೪೪ | ೧೭ | ಶಿಖವನ್ನೇರುವದರಲ್ಲಿ | ಶಿಖರವನ್ನೇರುವದರಲ್ಲಿ |
| ೧೪೦ | ೨ | ಅಧ್ಯಕ್ಷಪಟ್ವ | ಅಧ್ಯಕ್ಷಪಟ್ಟ |

